# ಹುಲಿಗೆಮ್ಮ : ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕಿ
ಕೃಷ್ಣವೇಣಿ. ಆರ್.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

# ಹುಲಿಗೆಮ್ಮ : ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕಿ

**ಕೃಷ್ಣವೇಣಿ. ಆರ್.**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೬-೦೭

# ದೃಢೀಕರಣ ಪತ್ರ

ಕೃಷ್ಣವೇಣಿ. ಆರ್. ಅವರು **ಹುಲಿಗೆಮ್ಮ : ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : 25-9-07

**ಡಾ. ಮಂಜುನಾಥ ಬೇವಿನಕಟ್ಟ**

ಮಾರ್ಗದರ್ಶಕರು

ಹಾಗೂ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**ಹುಲಿಗೆಮ್ಮ: ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 25-9-07

Veni.
**ಕೃಷ್ಣವೇಣಿ. ಆರ್.**
ಸಂಶೋಧನಾ ವಿದ್ಯಾರ್ಥಿನಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧. ೧ ಅಧ್ಯನಯದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಿ-ವಿಧಾನಗಳು

೧.೪ ಇದುವರೆಗೂ ನಡೆದ ಅಧ್ಯಯನಗಳು

ಆದಿಮ ಮಾನವನು ನಿಸರ್ಗದೊಂದಿಗೆ ಸಂಘರ್ಷಕ್ಕೆ ಬಿದ್ದಾಗ ಮಾಂತ್ರಿಕಾಚರಣೆಗಳ ಉಗಮವಾಯಿತು. ತಾನು ಜಯಿಸಬೇಕಾಗಿದೆ ಎಂದುಕೊಂಡು ನಿಸರ್ಗದ ಶಕ್ತಿಗಳನ್ನು ಮಣಿಸಲು ಹಾಗೂ ಒಲಿಸಿಕೊಳ್ಳಲು ಮಾನವನ ಆರಂಭಿಕ ತರ್ಕ ಏನೇನು ಹಾದಿಗಳನ್ನು ಸೂಚಿಸಿತೋ ಅವೆಲ್ಲವು ಆಚರಣೆಗಳಾಗಿ ರೂಪುಗೊಂಡವು. ಇಂತಹ ಆಚರಣೆ ಮತ್ತು ನಂಬಿಕೆಯ ಮೂಲಕವೇ ದೈವಗಳ ಬಗೆಗಿನ ಪರಿಕಲ್ಪನೆ ಬೆಳೆದು ಬಂದಿತು. ದೈವಗಳ ಬಗೆಗಿನ ಪರಿಕಲ್ಪನೆ ಮನುಷ್ಯನ ಮನಸ್ಸಿನಲ್ಲಿ ಯಾವಾಗ ಪ್ರಾರಂಭವಾಯಿತೆಂಬುದು ಮುಖ್ಯವಾದ ಸಂಗತಿ. ಈ ದೈವಗಳ ಹುಟ್ಟಿಗೆ ಮನುಷ್ಯನಲ್ಲಿದ್ದ ಭಯವೇ ಮೂಲಕಾರಣವಾಗಿದೆ.

ಆದಿಮಾನವನಿಗೆ ಪ್ರಕೃತಿಯ ಬದಲಾವಣೆಗಳು ಆಶ್ಚರ್ಯವನ್ನುಂಟು ಮಾಡಿರಬೇಕು. ಗುಡುಗು, ಮಿಂಚು, ಹರಿಯುವ ನೀರು, ಸುಡುವ ಬೆಂಕಿ ಇವೇ ಮೊದಲಾದ ಪ್ರಕೃತಿಯ ಚಮತ್ಕಾರಗಳು ಆದಿಮಾನವನಿಗೆ ಭಯವನ್ನುಂಟು ಮಾಡಿರಬೇಕು. ಇಂತಹ ಪ್ರಕೃತಿಯ ವಿಕೋಪಗಳಿಂದ ಪಾರಾಗಲು ಆತ ಪ್ರಕೃತಿಯಲ್ಲಿಯ ಮರ-ಗಿಡಗಳನ್ನು, ನೆಲ-ಜಲವನ್ನು, ಸೂರ್ಯ-ಚಂದ್ರರನ್ನು ದೈವವೆಂದು ಪೂಜಿಸಿರಬೇಕು. ಈ ಹಿನ್ನೆಲೆಯಲ್ಲಿ ನೋಡಿದರೆ ಮಾನವನ ಹುಟ್ಟಿನಿಂದಲೇ ದೈವಗಳ ಬಗೆಗಿನ ಪರಿಕಲ್ಪನೆ ಪ್ರಾರಂಭವಾಯಿತೆನ್ನಬಹುದು. ಪ್ರಕೃತಿಯಲ್ಲಿ ನಡೆಯುವ ಎಲ್ಲ ಘಟನೆಗಳಿಗೆ ಯಾವುದೋ ಒಂದು ಶಕ್ತಿ ಕಾರಣವಿರಬೇಕೆಂದು ನಂಬಿದ್ದ ಮನುಷ್ಯ, ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸತೊಡಗಿದ. ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ಸಮಾಜದಿಂದ ಸಮಾಜಕ್ಕೆ ದೈವಗಳ ಗ್ರಹಿಕೆಯಲ್ಲಿ ಭಿನ್ನತೆ ಕಾಣಿಸಿದ್ದರಿಂದ ಭಿನ್ನ-ಭಿನ್ನ ಹೆಸರಿನ ದೈವಗಳು ಹುಟ್ಟಲು ಕಾರಣವಾಗಿರಬೇಕು.

ಪ್ರಸ್ತುತ ಅವು ನಮ್ಮ ಕಣ್ಣೆದುರಿಗಿರುವಾಗ ಬೇಕಾದಷ್ಟು ಸಂಕೀರ್ಣಗೊಂಡಿರಬಹುದು. ರೂಪಾಂತರ ಹೊಂದಿರಬಹುದು. ಆದರೆ ಅವುಗಳ ಉಗಮದ ಅಧ್ಯಯನದಲ್ಲಿ ಈ ಮೂಲ ಪ್ರೇರಣೆಗಳ ಎಳೆಗಳನ್ನಂತೂ ಹಿಡಿಯುಬಹುದು. ಅವು ಇನ್ನೂ ಉಳಿದುಕೊಂಡು ಬಂದಿರುವ ಸಂದರ್ಭದಲ್ಲಿ ಹಳೆಯ ಜೀವನ ಪರಿಸ್ಥಿತಿಗಳ ಪ್ರಜ್ಞೆಯ ವಿಕಾಸದ ಪಳೆಯುಳಿಕೆಗಳನ್ನು ಅರ್ಥಮಾಡಿಕೊಳ್ಳಬಹುದು.

ಭಾರತೀಯ ಸಮಾಜವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕೆಂದು ಬಯಸುವವರಿಗೆ ದೊರೆಯುವ ಒಂದು ದೊಡ್ಡ ಆಕರ ಈ ಸಾಂಸ್ಕೃತಿಕ ಆಚರಣೆಗಳು. ಗ್ರಾಮೀಣ ಜನರ ಆಚರಣೆ, ನಂಬಿಕೆಗಳನ್ನು ಕೇವಲ ಮೌಢ್ಯವೆಂದೋ, ಕಂದಾಚಾರವೆಂದೋ ನಿರ್ಲಕ್ಷಿಸುವ ಧೋರಣೆ ಬಹಳ ಕಾಲದವರೆಗೆ ಇತ್ತು. ಪ್ರತಿ ಸಾಂಸ್ಕೃತಿಕಾಚರಣೆ ರೂಪುಗೊಳ್ಳಲು ಅದಕ್ಕೆ ತಳಹದಿಯಾಗಿ ಅದರ ಉಗಮದಲ್ಲಿ ಒಂದು ಭೌತಿಕಾವಶ್ಯಕತೆಯಿತ್ತು

ಎಂಬ ನಿಲುವು ಹೆಚ್ಚು ಪ್ರಚಲಿತಗೊಂಡಂತಿಲ್ಲ. ಅದರ ಬಗೆಗಿನ ಅಧ್ಯಯನಕ್ಕೆ ತುಂಬಾ ಮಹತ್ವವೊದಗಿದೆ. ಇಂತಹ ಒಂದು ಸಮಗ್ರ ಗ್ರಹಿಕೆಯೊಂದಿಗೆ ಈ ಎಲ್ಲ ಅಂಶಗಳನ್ನು ಪರಿಶೀಲಿಸುವ ಕೆಲಸವಾಗಬೇಕಿದೆ.

ಹೊಸಪೇಟೆಯಿಂದ ಎಂಟು ಕಿಲೋಮೀಟರ್ ದೂರವಿರುವ ಹುಲಿಗಿಯು ರಾಷ್ಟ್ರೀಯ ಹೆದ್ದಾರಿ ೧೩ ರಲ್ಲಿ ಬರುವುದರಿಂದ ಸಾರಿಗೆ ವ್ಯವಸ್ಥೆ ತುಂಬಾ ಅನುಕೂಲಕರವಾಗಿರುವುದರ ಜೊತೆಗೆ ಜನರಿಗೆ ಆಧುನಿಕ ಸೌಲಭ್ಯಗಳು ದೊರಕಿವೆ. ಹಾಗಾಗಿ ಸದಾ ದಟ್ಟವಾದ ಜನಸಂದಣಿ, ವ್ಯಾಪಾರ-ವಹಿವಾಟು, ಶಿಕ್ಷಣ, ಸಿನೇಮಾ ಮುಂತಾದ ಆಧುನಿಕ ಸೌಲಭ್ಯಗಳನ್ನು ಪಡೆದುಕೊಂಡಿದೆ. ಹುಲಿಗೆಮ್ಮ ಬಹಳಷ್ಟು ಭಕ್ತರನ್ನು ಹೊಂದಿರುವುದು ಸಹ ಹುಲಿಗಿಯ ಜನದಟ್ಟಣೆಗೆ ಕಾರಣವಾಗಿದೆ. ಕರ್ನಾಟಕದ ನಾನಾ ಕಡೆ ಹಾಗೂ ಬೇರೆ ಬೇರೆ ರಾಜ್ಯಗಳಲ್ಲೂ ಸಹ ಹುಲಿಗೆಮ್ಮ ಭಕ್ತರನ್ನು ಹೊಂದಿದ್ದಾಳೆ. ಹೆಚ್ಚಾಗಿ ಬಳ್ಳಾರಿ, ರಾಯಚೂರು ಜಿಲ್ಲೆಗಳು ಹಾಗೂ ಆಂಧ್ರದ ರಾಯಲಸೀಮೆಯ ಜಿಲ್ಲೆಗಳಲ್ಲಿ ಭಕ್ತರನ್ನು ಕಾಣಬಹುದು. ದಲಿತ ಮತ್ತು ಹಿಂದುಳಿದ ಸಮುದಾಯದವರು ಈ ದೈವಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರಾಗಿದ್ದಾರೆ. ಅವರುಗಳು ತಮ್ಮ ಮನೆದೈವವಾಗಿ ಹುಲಿಗೆಮ್ಮನನ್ನು ಸ್ಥಾಪಿಸಿಕೊಂಡಿದ್ದಾರೆ. ಈ ದೈವಕ್ಕೆ ಭಕ್ತರಾಗಿರುವವರು ಸಾಮಾನ್ಯವಾಗಿ ಮನೆಗಳಲ್ಲಿ ಹುಲಿಗೆಪ್ಪ, ಹುಲಿಗೆಮ್ಮ ಎಂಬ ಹೆಸರುಗಳನ್ನು ಇಟ್ಟುಕೊಂಡಿರುತ್ತಾರೆ.

ತುಂಗಾಭದ್ರಾ ನದಿಯು ಉತ್ತರಾಭಿಮುಖವಾಗಿ ಹರಿಯುತ್ತಿದ್ದು, ನದಿಯ ಮೇಲೆ ವಿರಾಜಿಸುವ ಈ ಕ್ಷೇತ್ರಕ್ಕೆ ಶತಮಾನಗಳ ಚರಿತ್ರೆಯಿದೆ. ಹುಲಿಗೆಮ್ಮನ ವಾಸಸ್ಥಳವಾಗಿರುವುದರಿಂದ ಹುಲಿಗಿ ಗ್ರಾಮವು ಜನಪದರಿಗೆ ಒಂದು ಪುಣ್ಯಕ್ಷೇತ್ರವಾಗಿ ಪರಿಗಣಿಸಲ್ಪಟ್ಟಿದೆ. ಹುಲಿಗೆಮ್ಮನ ದೇವಸ್ಥಾನದಿಂದ ಸ್ವಲ್ಪ ದೂರದಲ್ಲಿ ಸೋಮೇಶ್ವರನ ದೇವಸ್ಥಾನವಿದೆ. ಈ ಸೋಮೇಶ್ವರ ದೇವಸ್ಥಾನದಲ್ಲಿ ಚಾಲುಕ್ಯರು ಕೆತ್ತಿಸಿದ ಒಂದು ಶಾಸನವಿದೆ. ಶಾಸನದ ಉಲ್ಲೇಖದ ಪ್ರಕಾರ ಚೌಡಿಭಟ್ಟ ಎಂಬುವರು ತುಂಗಾಭದ್ರೆಯ ನೀರನ್ನು ಗ್ರಾಮನಿವಾಸಿಗಳ ಸಹಕಾರದಿಂದ ನದಿಗೆ ಅಡ್ಡಗೋಡೆ ಕಟ್ಟಿ, ಕಾಲುವೆ ತೋಡಿ ನೀರಾವರಿಗೆ ವ್ಯವಸ್ಥೆ ಮಾಡಿದರು. ಅದರಿಂದಾಗಿ ಅಲ್ಲಿಯ ಗ್ರಾಮನಿವಾಸಿಗಳ ವ್ಯವಸಾಯಕ್ಕೆ ಅನುಕೂಲವಾಯಿತು. ಈ ಕಾರ್ಯಕ್ಕಾಗಿ ಚಾಲುಕ್ಯ ವಿಕ್ರಮ ಶಕೆ ೧೩ ರಲ್ಲಿ ಅಂದಿನ ಆಳರಸರು ಚೌಡಿಭಟ್ಟನಿಗೆ ದತ್ತಿಗಳನ್ನು ನೀಡಿದರು. ಇದನ್ನು ಕುರಿತು ಶಾಸನವು ಹೇಳುತ್ತದೆ. ಇದರ ಪ್ರಕಾರ ಸು. ಕ್ರಿ.ಶ. ೧೨ನೆಯ ಶತಮಾನದಲ್ಲಿಯೇ ಹುಲಿಗಿ ಕ್ಷೇತ್ರದಲ್ಲಿ ಬೇಸಾಯ ಚೆನ್ನಾಗಿ ನಡೆಯುತ್ತಿತ್ತು ಎಂಬುದನ್ನು ಗಮನಿಸಬಹುದು. ಅಂದರೆ ಚಾಲುಕ್ಯರ ಕಾಲಕ್ಕಾಗಲೇ ನೀರಾವರಿ ವ್ಯವಸ್ಥೆ ಹೊಂದಿದ ಸುಸಜ್ಜಿತ ಗ್ರಾಮವಾಗಿರುವುದನ್ನು ಕಾಣಬಹುದು. ಇದನ್ನು ನೋಡಿದರೆ ಚಾಲುಕ್ಯರ ಆಡಳಿತಾವಧಿಗಿಂತಲು ಮೊದಲು ಹುಲಿಗಿ ಗ್ರಾಮದಲ್ಲಿ ಜನವಸತಿ ಇದ್ದಿರಬಹುದಾದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಹುಲಿಗೆಮ್ಮ ದೇವಸ್ಥಾನವು ದಕ್ಷಿಣಾಭಿಮುಖವಾಗಿದ್ದು, ಗರ್ಭಗೃಹ ಹಾಗೂ ಸುಖನಾಸಿ ಮಂಟಪಗಳನ್ನು ಹೊಂದಿದೆ. ಹುಲಿಗೆಮ್ಮನ ದೇವಸ್ಥಾನಕ್ಕೆ ಸುತ್ತಲೂ ಪೌಳಿಯಿದ್ದು, ಪೌಳಿಯ ಒಳಗಡೆ ಗರುಡಗಂಬ, ಹರಕೆಕಂಬ, ಪರಶುರಾಮನ ದೇವಸ್ಥಾನ, ಮಾತಂಗಿಯ ದೇವಸ್ಥಾನಗಳಿವೆ. ಹುಲಿಗೆಮ್ಮನ ದೇವಸ್ಥಾನಕ್ಕೆ ಸುಮಾರು ಹತ್ತು ಅಡಿಯ ಗರ್ಭಗುಡಿ ಇದ್ದು, ಮೇಲೆ ಶಿಲೆಯ ಚೌಕಟ್ಟು ಇದೆ. ಹುಲಿಗೆಮ್ಮನ ಮೂಲಮೂರ್ತಿಯು ಒಂದು

ದುಂಡಾದ ಕಲ್ಲಿನ ಶಿಲೆಯಂತೆ ಕಂಡುಬರುತ್ತಿದೆ. ಎರಡೂ ಕಣ್ಣುಗಳಲ್ಲಿ ಸಾಲಿಗ್ರಾಮಗಳಿವೆ. ಮುಖವನ್ನು ಅಲಂಕಾರಗೊಳಿಸಿದಾಗ ಮೀಸೆ, ಬಾಯಿ, ಕಿರೀಟ ಇತ್ಯಾದಿಗಳನ್ನು ಇಂದಿಗೂ ಹಾಕುತ್ತಾರೆ. ಗರ್ಭಗುಡಿಯ ಒಳಗಡೆ ನಾಗಜೋಗಿ ಮತ್ತು ಬಸವ ಜೋಗಿಯ ಕಲ್ಲಿನ ಮೂರ್ತಿಗಳಿವೆ.

ಸೋಮೇಶ್ವರ ಗುಡಿಯ ಸ್ವಲ್ಪ ಮುಂದಕ್ಕೆ ಹುಲಿಗೆಮ್ಮನ ಪಾದಗಟ್ಟೆ ಇದೆ. ಈ ಪಾದಗಟ್ಟೆ ನದಿಯ ಒಂದು ದಡದಲ್ಲಿದ್ದು ಇನ್ನೊಂದು ಪಾದಗಟ್ಟೆಯು ನದಿಯ ಇನ್ನೊಂದು ದಡ ಅಂದರೆ ಹೊಸೂರಿನಲ್ಲಿದೆ. ಈ ಎರಡೂ ಪಾದಗಟ್ಟೆಗಳು ಹೊಸೂರಮ್ಮ ಮತ್ತು ಹುಲಿಗೆಮ್ಮ ಇಬ್ಬರು ಅಕ್ಕತಂಗಿಯರು ಎಂಬುದಕ್ಕೆ ಜನಪದರು ಕೊಡುವ ಸಾಕ್ಷಿಗಳಾಗಿವೆ. ಎರಡೂ ದೇವತೆಗಳು ಒಂದೇ ಎಂಬ ಪ್ರತೀತಿ ಇದೆ. 'ಎಲ್ಲಮ್ಮ' ಪಂಥದ ಒಂದು ಕವಲಿನಂತೆ ಕಂಡುಬರುವ ಈ ದೇವತೆ ಸಾಕಷ್ಟು ಪ್ರಾಚೀನ ಪರಂಪರೆಯವಳೆಂಬುದರಲ್ಲಿ ಎರಡು ಮಾತಿಲ್ಲ.

### ೧.೧ ಅಧ್ಯನಯದ ಉದ್ದೇಶ

ಪ್ರಸ್ತುತ ಅಧ್ಯಯನದಲ್ಲಿ ಹುಲಿಗಿಯ ಕ್ಷೇತ್ರ ಪರಿಚಯದಿಂದ ಆರಂಭವಾಗಿ, ಹುಲಿಗೆಮ್ಮನ ಪಂಥದಲ್ಲಿ ಮಹಿಳಾ ಪ್ರತಿನಿಧೀಕರಣ ಹೇಗಿದೆ ಎಂಬುದನ್ನು ವಿಶ್ಲೇಷಿಸುವುದರೊಂದಿಗೆ ಮುಕ್ತಾಯಗೊಂಡಿದೆ. ಹುಲಿಗೆಮ್ಮ ಇಲ್ಲಿ ಹೇಗೆ ನೆಲೆಗೊಂಡಳು ಎಂಬುದರ ಜೊತೆಗೆ, ಬೆಳೆದು ಬಂದ ರೀತಿಯಲ್ಲಿ ಅಂದರೆ ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ಪಂಥಗಳೊಂದಿಗೆ ಹುಲಿಗೆಮ್ಮ ನಡೆಸಿದ ಸಂಘರ್ಷ ಹಾಗೂ ಸಾಮರಸ್ಯ ಮಾಡಿಕೊಂಡ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹುಲಿಗೆಮ್ಮನಿಗೆ ಜೀವನಾವರ್ತನ ಹಾಗೂ ವಾರ್ಷಿಕಾವರ್ತನದಲ್ಲಿ ನಡೆಯುವ ಆಚರಣೆಗಳು, ಮೌಖಿಕ ಸಾಹಿತ್ಯ ಮುಂತಾದವುಗಳನ್ನು ಸಂಗ್ರಹಿಸುವುದರ ಜೊತೆಗೆ ಅಲ್ಲಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಹುಲಿಗೆಮ್ಮ ಒಬ್ಬ ಸ್ತ್ರೀದೇವತೆಯಾಗಿ ಹಲವು ಸಮುದಾಯಗಳ ಸಾಂಸ್ಕೃತಿಕ ಬದುಕಿನ ಒಂದು ಭಾಗವಾಗಿದ್ದಾಳೆ. ಮೂಲತಃ ಜನಪದ ದೈವವಾದ, ಮಾತೃಮೂಲೀಯ ಅಂಶಗಳನ್ನು ಎತ್ತಿಹಿಡಿಯುವ ಹುಲಿಗೆಮ್ಮನನ್ನು ಮನೆದೈವವನ್ನಾಗಿ ಹೊಂದಿರುವ ಸಮುದಾಯಗಳ ಸ್ತ್ರೀಯರ ಪಾತ್ರ, ಮಹತ್ವ, ಸ್ಥಾನಮಾನ, ಅವಳಿಗಿರುವ ಮೌಲ್ಯವನ್ನು ಅರಿಯುವ ಪ್ರಯತ್ನವನ್ನು ಹುಲಿಗೆಮ್ಮನ ಅಧ್ಯಯನದ ಮುಖಾಂತರ ಮಾಡಲಾಗಿದೆ.

ಜನಪದ ಸಾಹಿತ್ಯದ ವಿವಿಧ ಮಜಲುಗಳು ಹುಟ್ಟಿಕೊಂಡ ಬಗೆ, ಕಾಲಾಂತರದಲ್ಲಿ ಆದ ಪರಿವರ್ತನೆಗಳು, ಸಾಹಿತ್ಯದ ಭಾಷೆ. ಬದಲಾದ ರೀತಿ, ಆಧುನೀಕರಣ ಪ್ರಭಾವ, ಆ ಮೂಲಕ ಜನರಲ್ಲಾದ ಪರಿವರ್ತನೆ ಇವುಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಜನಪದ ಸಾಹಿತ್ಯದ ಅಧ್ಯಯನದ ಮುಖಾಂತರ ಹುಲಿಗೆಮ್ಮ ಒಬ್ಬ ಪರಿತ್ಯಕ್ತ ಮಗಳಾಗಿ ಕ್ರಮೇಣ ಗ್ರಾಮೀಣ ಪ್ರದೇಶದ ದೇವತೆಯಾಗಿ ಜನ ಮನದಲ್ಲಿ ಬೆಸೆದ ರೀತಿಯನ್ನು ಅರಿಯುವ ಒಂದು ಯತ್ನವಾಗಿದೆ. ಒಬ್ಬ ಮಹಿಳೆಯಾಗಿ ಹುಲಿಗೆಮ್ಮ ಸಮಾಜದ ಜನರ ಮೇಲೆ ಸಾಧಿಸಿದ ಅಧಿಪತ್ಯ, ನಂಬಿಕೆ ಸಡಿಲಗೊಳ್ಳಲು ಬಿಡದೆ ಮೆರೆಯುತ್ತಿರುವ ಮಹಿಮೆ, ಜನಮಾನಸದಲ್ಲಿ ಭದ್ರವಾಗಿ ಬೇರೂರಿರುವ ರೀತಿಗಳನ್ನು ತಿಳಿಯುವುದಾಗಿದೆ. ಜನಪದ ಹಾಡುಗಳ ಮುಖಾಂತರ ಹುಲಿಗೆಮ್ಮನ ಮಹಿಮೆ,

ಪವಾಡಗಳು, ತನ್ನ ಅಸ್ತಿತ್ವಕ್ಕಾಗಿ ಅವಳು ಹೋರಾಡಿದ ರೀತಿ, ಅವಳನ್ನು ನಂಬಿದ ಜನರ ಭಕ್ತಿ, ಅವಳ ಮುಖಾಂತರ ಭಕ್ತರಿಗೆ ಒದಗಿದ ಪ್ರೇರಣೆಗಳು, ಸಾಮಾಜಿಕ ಪರಿಸ್ಥಿತಿ, ಸ್ತ್ರೀಯ ಸ್ಥಾನ-ಮಾನ ಮುಂತಾದವುಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಆಚರಣೆಗಳ ಹುಟ್ಟು, ಬೆಳೆದುಬಂದ ರೀತಿ, ಆಚರಣೆಗೆ ಕಾರಣವಾದ ನಂಬಿಕೆಗಳು, ಪ್ರೇರಣೆಗಳು, ಆಚರಣೆಗಳಲ್ಲಿರುವ ಪ್ರಾದೇಶಿಕ ವಿಭಿನ್ನತೆ, ಆಚರಣೆಗಳ ಮೂಲ ಸ್ವರೂಪದಲ್ಲಿ ಬದಲಾವಣೆ, ನಾಗರೀಕತೆಯ ಪ್ರಭಾವ ಮುಂತಾದವುಗಳನ್ನು ಅಭ್ಯಸಿಸಲಾಗಿದೆ. ದಿನೆ ದಿನೆ ಹೆಚ್ಚುತ್ತಿರುವ ಸ್ತ್ರೀಯರ ಮೇಲಿನ ದೌರ್ಜನ್ಯ, ಕೌಟುಂಬಿಕವಾಗಿ ಸ್ಥಾನ ಕಳೆದುಕೊಳ್ಳುತ್ತಿರುವ ಸ್ತ್ರೀ ಆ ಮೂಲಕ ಮಾನಸಿಕ ಸಮಸ್ಯೆಗಳಿಗೆ ಗುರಿಯಾಗುತ್ತಿರುವ ಮಹಿಳೆ ಹುಲಿಗೆಮ್ಮನಲ್ಲಿ ಕಂಡುಕೊಳ್ಳುವ ಮಾನಸಿಕ ನೆಮ್ಮದಿಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಹುಲಿಗೆಮ್ಮ ಪರಿತ್ಯಕ್ತ ಮಹಿಳೆಯಾಗಿದ್ದಾಗಲೂ ತನ್ನ ಅಸ್ತಿತ್ವಕ್ಕಾಗಿ ಹೋರಾಡಿ ಅದನ್ನು ದಕ್ಕಿಸಿಕೊಂಡು, ಪುರುಷ ಪ್ರಾಬಲ್ಯವನ್ನು ಮುರಿದು, ಗ್ರಾಮದೇವತೆ, ಮನೆದೈವ ಆಗುವ ಮುಖಾಂತರ ತನ್ನ ತನವನ್ನು ತೋರಿದ ಬಗೆಗಿನ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕಾಲಾನುಕ್ರಮದಲ್ಲಿ ಹುಲಿಗೆಮ್ಮ ಆರಾಧನೆಯ ಮೇಲೆ ಉಂಟಾಗಿರುವ ಪ್ರಭಾವಗಳೇನು ಎಂಬುದನ್ನು ಗುರುತಿಸಲಾಗಿದೆ. ಶಿಷ್ಟ ಪರಂಪರೆಯ ಯಾವ ಯಾವ ಅಂಶಗಳು ಈ ದೇವತಾರಾಧನೆ ಪಂಥದಲ್ಲಿ ಬೆರೆತುಕೊಂಡಿವೆ ಹಾಗೂ ಈ ದೇವಿ ಮಹಿಮೆಯ ಬಗ್ಗೆ ಇರುವ ನಂಬುಗೆಗಳನ್ನು ಚರ್ಚಿಸಲಾಗಿದೆ. ಯಾವ ಯಾವ ಕುಲ ಸಮುದಾಗಳು ಹುಲಿಗೆಮ್ಮನ ಪೂಜೆ ಹಾಗೂ ಕ್ರಿಯಾವಿಧಿಗಳ ಆಚರಣೆಯಲ್ಲಿ ಪಾತ್ರವಹಿಸುತ್ತವೆ ಎಂಬುದನ್ನು ವಿವರಿಸಲಾಗಿದೆ. ಪ್ರತಿ ಕುಲ ಸಮುದಾಯದ ಬಾಬುಗಳು ಇತ್ಯಾದಿಗಳು ಏನೇನು? ಅವುಗಳಿಗಿರುವ ಸಾಮಾಜಿಕ ಹಿನ್ನೆಲೆಗಳು ಮುಂತಾದವುಗಳನ್ನು ಅಧ್ಯಯನ ಮಾಡಲಾಗಿದೆ. ಹುಲಿಗೆಮ್ಮನು ಇತರ ದೈವಗಳೊಂದಿಗೆ ಹೊಂದಿರುವ ಸಂಬಂಧವನ್ನು ಗುರುತಿಸಲಾಗಿದೆ.

ಪ್ರಸ್ತುತ ಅಧ್ಯಯನದ ಮುಖಾಂತರ ಹುಲಿಗೆಮ್ಮನ ಆರಾಧನೆಯಲ್ಲಿ ಈ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಗ್ರಾಮೀಣ ಪರಿಸರ, ಜನಪದ ಪರಂಪರೆ, ಕೆಳಜಾತಿ ಅಥವಾ ಬುಡಕಟ್ಟು ಸಂಸ್ಕೃತಿಯ ಭಕ್ತ ಸಮೂಹ ಹುಲಿಗೆಮ್ಮನ ಭಕ್ತರು, ಜೋಗ-ಜೋಗತಿ ಇಲ್ಲಿ ಪುರುಷನಿಗಿರುವ (ಭಕ್ತನಿಗೆ) ಕಟ್ಟುಪಾಡುಗಳು ಭಕ್ತೆಗೆ ಇಲ್ಲ. ಅವಳ ಹೆಣ್ತನವನ್ನು ದೇವತೆ ಮರ್ಧಿಸುವುದಿಲ್ಲ-ವರ್ಧಿಸುತ್ತಾಳೆ. ಆದರೆ ಭಕ್ತನನ್ನು ಹೆಣ್ಣಿನ ನೆಲೆಗೆ ತರುತ್ತಾಳೆ. ಇಲ್ಲಿ ಪುರುಷತನ-ವೀರ್ಯಗಳಿಗೆ ಮಹತ್ವ ಇಲ್ಲ. ಗರ್ಭಧಾರಣೆ ಮತ್ತು ಸಂತಾನಕ್ಕೆ ಪ್ರಾಶಸ್ತ್ಯವಿದೆ. ಭಕ್ತೆಯರ ಮಕ್ಕಳಿಗೆ ಅಪ್ಪನ ಅಧಿಕೃತತೆಯ ಹಂಗು ಇಲ್ಲ. ಅದನ್ನು ದೇವಿ ಹೊರುತ್ತಾಳೆ. ಜೋಗತಿಯರಿಗೆ ವಿವಾಹ ಬಂಧನ ಮತ್ತು ಗಂಡನ ಹಿಡಿತವಿಲ್ಲ. ತಮ್ಮ ಮಕ್ಕಳಿಗೆ ಸಂಬಂಧಿಸಿದ ಸಾಮಾಜಿಕ ಹೊಣೆ ಅವರದೇ ಆಗಿರುತ್ತದೆ. ಆದರೆ ಧಾರ್ಮಿಕ ರಕ್ಷಣೆ (ಭದ್ರತೆ) ಹುಲಿಗೆಮ್ಮನದಾಗಿರುತ್ತದೆ. ಭಕ್ತೆಯರಿಗೆ ವಿಧವೆತನದ ಅಮಂಗಳ ಇಲ್ಲ. ಅವರು ನಿತ್ಯ ಸುಮಂಗಲಿಯರು.

ಭಕ್ತನ ಪೌರುಷವನ್ನೇ ನಾಶ ಮಾಡಿರುತ್ತಾಳೆಂದು ಸಂಕೇತಿಸುವುದರಿಂದ ಜೋಗಮ್ಮನಾದ ಮೇಲೆ ಆತನ ಸಂಭೋಗಕ್ಕೆ ಧಾರ್ಮಿಕ ನಿಷೇಧವಿರುತ್ತದೆ. ನಂತರದ ಆತನ ಸಂತತಿಗೆ ಅಧಿಕೃತತೆ ಬರುವುದಿಲ್ಲ. ಆ ಮಕ್ಕಳನ್ನು ಹುಲಿಗೆಮ್ಮನ ಮಕ್ಕಳೆಂದು ಗುರುತಿಸಲಾಗುತ್ತದೆಯೆ ಹೊರತು ಜೋಗಯ್ಯನ ಮಕ್ಕಳೆಂದಲ್ಲ. ಪುರುಷ ಭಕ್ತರ ವಿಷಯದಲ್ಲಿ ಸವಾಲಾಗಿ ಹುಲಿಗೆಮ್ಮನ ನಿಯಮಗಳು ಪಾಲನೆಯಾಗಿ ಸ್ತ್ರೀಮೂಲದ ದರ್ಪ ಪ್ರತಿಪಾದನೆಯಾಗುತ್ತದೆ. ಆಚರಣೆಗಳ ಆಶ್ರಯ ಅಪರಿಮಿತವಾದ ಸಂಭೋಗ ಸುಖ, ಗರ್ಭ ಧಾರಣೆ, ಸಂತಾನ ಪ್ರಾಪ್ತಿಯಾಗಿರುತ್ತದೆ. ಈ ಫಲವಂತಿಗೆ ಮತ್ತು ಸಂತತಿ ಶಾಶ್ವತವಾಗಿರಬೇಕೆಂಬ ಬಯಕೆ ಇರುತ್ತದೆ. ದಾಂಪತ್ಯ ಜೀವನದ ನಿಷ್ಠೆ ನಿಯಮಗಳು ಪುರುಷ ಅಧೀನತೆಯಂತಹ ಅಂಶಗಳು ಇಲ್ಲಿ ಗೌಣ. ಆಚರಣೆಗಳ ಪರಿಕರಗಳಾದ ಅರಿಶಿನ, ಕುಂಕುಮ, ಬಳೆ, ಇತ್ಯಾದಿ ಆಕರ್ಷಕ ಬಣ್ಣಗಳು ಗಮನಾರ್ಹ. ಲೈಂಗಿಕ ಕಾಯಿಲೆಗಳ ಪರಿಹಾರ ಆಚರಣೆಗಳ ಆಶಯಗಳಲ್ಲೊಂದು. ಶುಚಿತ್ವದಲ್ಲಿ ಆಚರಣೆಯನ್ನು ನೆರವೇರಿಸುವಾಗ ನಿಗಧಿತ ದಿನಗಳ ಸ್ನಾನ, ನಿಗಧಿತ ಆಹಾರ, ನಿದ್ರೆ ಇವೆಲ್ಲಾ ಕಡ್ಡಾಯವಾಗಿರುತ್ತವೆ. ಇದು ಪ್ರಾಕೃತಿಕ ಚಿಕಿತ್ಸೆಯಾಗಿರುತ್ತವೆ.

ಹೆಣ್ಣುಮಕ್ಕಳಿಗೆ ಮುಟ್ಟಿನ ತೊಂದರೆಗಳು, ಬಿಳಿ ಸೆರಗಿನಂತಹ ಕಾಯಿಲೆಗಳ ಪರಿಹಾರಕ್ಕೆಂದು ಬಟ್ಟೆ ಇಡುವ ಹರಕೆ ಮಾಡುವಂತೆ, ಇಲ್ಲಿ ದೇವಿಯ ಭಕ್ತ(ಪುರುಷರು)ರು ಅನಿಶ್ಚಿತ ವೀರ್ಯಸ್ಖಲನಕ್ಕೆ ಪರಿಹಾರವಾಗಿ ಇದೇ ಆಚರಣೆಮಾಡುತ್ತಾರೆ. ಈ ಸಂಬಂಧಿ ಸ್ತ್ರೀ ಪುರುಷರಿಬ್ಬರ ರೋಗ-ರುಜಿನಗಳನ್ನು ಬಿಳುಪು ಅಥವಾ ಬಟ್ಟೆ ಹೋಗುವ ನ್ಯೂನ್ಯತೆಗಳೆಂದು ಪರಿಗಣಿಸುತ್ತಾರೆ. ಈ ಹಿನ್ನೆಲೆಯಲ್ಲಿ ವೀರ್ಯವನ್ನು ಅಂಡಾಶಯದ ದ್ರವದಂತೆಯೇ ಪರಿಭಾವಿಸುವುದರಿಂದ ಸ್ತ್ರೀ ಪ್ರಾತಿನಿಧ್ಯತೆ ಉಳಿಯುತ್ತದೆ.

♦ ಹುಲಿಗೆಮ್ಮನು ಇತರ ಜನಪದ ದೈವಗಳಂತೆ ಮಾತೃಮೂಲ ಭಕ್ತರನ್ನು ಆಶ್ರಯಿಸಿರುವಳು. ದೇವಿ-ಭಕ್ತರ ಸಂಬಂಧ ಅನ್ಯೋನ್ಯ ತಾಯಿ-ಮಕ್ಕಳು.

♦ ಅವಿವಾಹಿತ ತಾಯಿ ಸಾಮಾಜಿಕವಾಗಿ ತನ್ನದೇ ಆದ ಸಾಂಸ್ಕೃತಿಕ ಮೌಲ್ಯಗಳನ್ನು ರೂಪಿಸಿಕೊಳ್ಳುವ ದಿಟ್ಟತನ, ದೇವತೆಯ ಹಿನ್ನೆಲೆ ಮತ್ತು ಭಕ್ತ ವಲಯದ ವರ್ತಮಾನ ಮತ್ತು ಭವಿಷ್ಯತ್‌ಗಳಲ್ಲಿರುತ್ತದೆ.

♦ ಬಂಧು ಬಳಗವನ್ನು ಬಯಸುವುದು ಮಾತೃಮೂಲ ಮನಸ್ಸು. ದಾಯಾದಿತನ, ಪಿತೃ ಪರಂಪರೆ ಇದು ಈ ದೇವತೆಯ ಪರಿಧಿಗೆ ಬರುವುದಿಲ್ಲ.

♦ ಆಚರಣೆಗಳು, ಆಹಾರ ಪದ್ಧತಿ, ಉಡುಗೆ-ತೊಡುಗೆ, ವಾದ್ಯ ಎಲ್ಲವೂ ದೈಹಿಕ ಸುಖ, ಮಾನಸಿಕ ನೆಮ್ಮದಿ, ಸಂತಾನ ಅಭಿವೃದ್ಧಿಯ ಪೂರಕ ಅಂಶಗಳು. ಇಲ್ಲಿ ಮೈಲಿಗೆಯ ಪ್ರಶ್ನೆಯೇ ಇಲ್ಲ.

♦ ಈರುಳ್ಳಿ, ಬೆಳ್ಳುಳ್ಳಿ, ಹುಣಸೆಯ ಹುಳಿ, ಮಾಂಸಾಹಾರಗಳಿಗೆ ಆದ್ಯತೆ. ಇವು ಹೆಣ್ಣಿನ ಫಲವಂತಿಕೆ (ಸತ್ವ) ವೃದ್ಧಿಸುವಂತವು.

◆ ಚೌಡಿಕೆ ವಾದ್ಯ: ಸ್ತ್ರೀಯ ಜನನಾಂಗದ ಆಕಾರ ಅದನ್ನೆ ಮಿಡಿದು ನಟಿಸಿ ಹಾಡಿ ನಲಿಯುವುದು-ಭಿಕ್ಷೆ ಬೇಡುವುದು ಇವು ಗಮನಿಸಬೇಕಾದ ಅಂಶಗಳು.

◆ ಆಚರಣೆಯಲ್ಲಿ ಬಲಿ ನೀಡಿದ ಪ್ರಾಣಿಯ ಮಾಂಸಕ್ಕಿಂತ ರಕ್ತವನ್ನು ದೇವತೆಗೆ ಅರ್ಪಿಸುವುದು ಮುಖ್ಯವಾಗಿರುತ್ತದೆ. ಏಕೆಂದರೆ ಹೆಣ್ಣು ಮುಟ್ಟಿನ ರೂಪದ ರಕ್ತದ ಸ್ಥಿತಿಗಳಿಗೆ ಅನುಗುಣವಾಗಿ ಫಲವಂತಿಕೆಯನ್ನು ಪ್ರತಿನಿಧಿಸುತ್ತಾಳೆ. ಮುಟ್ಟು ಆಗುವುದು, ಮುಟ್ಟು ನಿಲ್ಲುವುದು ಇದ್ಯಾವುದೂ ವೈಯಕ್ತಿಕ ನೆಲೆಯಲ್ಲಿ ಮೈಲಿಗೆಯಲ್ಲ. ಅದೇ ಪ್ರಧಾನ ಹಾಗೂ ಹೆಣ್ತನದ ಭಾಗ. ಈ ಆರಾಧನೆಗೆ ಬಲಿಯಾದ ಪ್ರಾಣಿಯ ರಕ್ತವನ್ನು ದೇವತೆಗೆ ಅರ್ಪಿಸುವುದಾಗಿರುತ್ತದೆ.

◆ ಕಳಸ / ಕುಂಭ - ಗರ್ಭಧಾರಣೆಯ ಆಶಯಗಳು.

◆ ಸಂತಾನಕ್ಕಾಗಿ: ರಾತ್ರಿ ನಿದ್ದೆ ಮಾಡುವುದು, ಸಂಗಾತಿ ಬಯಕೆಯ ಆಶಯ.

### ೧.೨ ಅಧ್ಯಯನದ ವ್ಯಾಪ್ತಿ

ಪ್ರತಿ ದೇವತೆ ಹಾಗೂ ಆಕೆಯ ಆರಾಧನೆಯಲ್ಲಿರುವ ಆಚರಣೆಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆ ಪ್ರಾಂತ್ಯದ ಸಮುದಾಯದ ಉಳಿವು ಮತ್ತು ಬೆಳವಣಿಗೆಗೆ ಸಂಬಂಧಿಸಿದ ವಿಕಾಸಕ್ರಮದ ಮಾಹಿತಿಯನ್ನು ಒಳಗೊಂಡಿರುತ್ತವೆ. ಹಾಗೆಯೇ ದೇವತೆಯೊಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಕೆಲವು ಸಮುದಾಯಗಳ ಅಸ್ಮಿತೆಯ ಲಾಂಛನವೂ ಆಗಿ ಪ್ರವರ್ಧಮಾನಕ್ಕೆ ಬಂದಿರುತ್ತದೆ. ಕಾಲಕ್ರಮೇಣ ಆ ಪ್ರಾಂತ್ಯದ ಅಥವಾ ಹಲವು ಪ್ರಾಂತ್ಯಗಳ ಬೇರೆ ಬೇರೆ ಸಮುದಾಯಗಳು ದೇವತೆಯ ಮೂಲ ಒಕ್ಕಲುಗಳೊಂದಿಗೆ ಕೊಳುಕೊಡೆಯ ಸಂಬಂಧವೇರ್ಪಡಿಸಿಕೊಂಡು, ಅದರ ಕುರುಹಾಗಿ ಆ ದೇವತೆಗೆ ತಾವೂ ಭಕ್ತರಾಗಿ ಮಾರ್ಪಟ್ಟಿರುತ್ತಾರೆ. ಕುಲದೇವರು, ಮನೆದೇವರು, ಊರಿನದೇವರು ಮುಂತಾದ ಹಲವು ಸ್ತರಗಳಲ್ಲಿ ತಮ್ಮ ತಮ್ಮ 'ಭಕ್ತಿ'ಯ ಸಾಮಾಜಿಕ ಪಾಲ್ಗೊಳ್ಳುವಿಕೆಯನ್ನು ಈ ಮುಖಾಂತರ ಸಂಕೇತಿಸಿಕೊಂಡಿರುತ್ತಾರೆ.

ಈ ದಿಸೆಯಲ್ಲಿ ಹೊಸಪೇಟೆ ಮತ್ತು ಕೊಪ್ಪಳ ತಾಲ್ಲೂಕುಗಳ ಪ್ರಭಾವೀ ದೇವತೆಯಾದ ಹುಲಿಗೆಮ್ಮನ ಆರಾಧನಾ ಪದ್ಧತಿಯನ್ನು ಪರಿಶೀಲಿಸುವ ಮುಖಾಂತರ ಒಂದು ಸಾಂಸ್ಕೃತಿಕ ಅಧ್ಯಯನವನ್ನು ಸಮಗ್ರವಾಗಿ ಎಲ್ಲಾ ಆಯಾಮಗಳ ವಿಶ್ಲೇಷಣೆಗಳ ಮುಖಾಂತರ ಕೈಗೊಂಡು, ಈ ಸಂಶೋಧನಾ ಅಧ್ಯಯನವನ್ನು ಮಾಡಿದೆ.

ಸಮುದಾಯಗಳು ತಮ್ಮ ಸಾಮಾಜಿಕ ಚಲನಶೀಲತೆಯ ಮೊದಲ ಹಂತಗಳಲ್ಲಿ ಕೈಗೊಳ್ಳುವ ಸೃಷ್ಟಿಶಕ್ತಿ ಆರಾಧನೆ, ಮಾತೃದೇವತಾ ಆರಾಧನೆ ಹಾಗೂ ಕುಲದೇವತಾರಾಧನೆಗಳು ಆಯಾ ಸಮುದಾಯಗಳಲ್ಲಿ ಸ್ತ್ರೀ ಸೃಷ್ಟಿ ಶಕ್ತಿಯ ಬಗೆಗೆ ಹೊಂದಿರುವ ನಂಬುಗೆಗಳನ್ನೂ ಮತ್ತು ಪರಿಕಲ್ಪನೆಗಳನ್ನೂ ಬಿಂಬಿಸುತ್ತಿರುತ್ತವೆ. ಸ್ತ್ರೀಯನ್ನು ಆ ಸಮುದಾಯ ಪರಿಭಾವಿಸುವ ರೀತಿಗಳು ಅದರ ಪ್ರಾಚೀನ ಪರಿಕಲ್ಪೆಗಳ ಪರಿವರ್ತಿತ ರೂಪಗಳಾಗಿ ಇಂದಿನ ದೇವತಾರಾಧನೆಯ ಪದ್ಧತಿಗಳಲ್ಲಿ ಹೇಗೆ ಪ್ರತಿಬಿಂಬಿತವಾಗಿವೆ ಎಂಬುದನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಮಾತೃ ದೇವತಾರಾಧನೆಯ ಪಂಥದ ಸಾರ್ವತ್ರಿಕ ಸಾಂಸ್ಕೃತಿಕ ಅಂಶಗಳೊಂದಿಗೆ ನಿರ್ದಿಷ್ಟ ದೇವತಾರಾಧನೆಯ ಸಾಂಸ್ಕೃತಿಕ ಅಂಶಗಳನ್ನು ಮುಖಾಮುಖಿಯಾಗಿಸಿ ಅಧ್ಯಯನ ನಡೆಸುವ ಮುಖಾಂತರ ನಿರ್ದಿಷ್ಟ ಜನಪದವು ಮಹಿಳಾ ಪ್ರತಿನಿಧೀಕರಣವನ್ನು ತನ್ನ ದೇವತಾರಾಧನೆಯ ಯಾವ ಯಾವ ಬಗೆಯಲ್ಲಿ ವ್ಯಕ್ತಪಡಿಸುತ್ತದೆ? ಅದರ ಮಾದರಿಗಳೇನು? ಆ ಮಾದರಿಯ ಹಿಂದಿನ ಪ್ರೇರಣೆಗಳೇನು? ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**೧.೩ ಅಧ್ಯಯನದ ವಿಧಿ-ವಿಧಾನಗಳು**

ಪ್ರಸ್ತುತ ಅಧ್ಯಯನಕ್ಕೆ ಹುಲಿಗೆಮ್ಮ ಮತ್ತು ಆಕೆಯ ಭಕ್ತರು ಪ್ರಸರಣಗೊಂಡಿರುವ ಸ್ಥಳಗಳಲ್ಲಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಮಾಹಿತಿಗಳ ಸಂಗ್ರಹಕ್ಕೆ ಅವಲೋಕನ, ಪ್ರಶ್ನಾವಳಿ ಹಾಗೂ ಸಂದರ್ಶನ ವಿಧಾನಗಳನ್ನು ಅಳವಡಿಸಲಾಗಿದೆ. ಹುಲಿಗೆಮ್ಮನ ಮಾಹಿತಿ ಸಂಗ್ರಹಣೆಯಲ್ಲಿ ಮಾಹಿತಿದಾರರೊಂದಿಗೆ ಪ್ರಶ್ನೆಗಳನ್ನು ಕೇಳುವ ಮುಖಾಂತರ ಹಾಗೂ ಅವರೊಂದಿಗೆ ಚರ್ಚಿಸುವ ಮುಖಾಂತರ ಕ್ರೋಢೀಕರಿಸಲಾಗಿದೆ. ಕೆಲವೊಂದು ಆಚರಣೆ ಹಾಗೂ ಜಾತ್ರೆಯ ಆಚರಣೆಗಳಲ್ಲಿ ಭಾಗವಹಿಸುವ ಮುಖಾಂತರ ಮಾಹಿತಿ ಸಂಗ್ರಹಿಸಲಾಗಿದೆ. ಹೀಗೆ ಆಚರಣೆಗಳಲ್ಲಿ ಭಾಗವಹಿಸುವಾಗ ಆಚರಣೆಯ ಹಿನ್ನೆಲೆ, ಉದ್ದೇಶ, ಪ್ರಸ್ತುತ ಸಂದರ್ಭದ ಬದಲಾವಣೆ ಮುಂತಾದವುಗಳನ್ನು ಭಾಗವಹಿಸಿದ್ದ ಮಾಹಿತಿದಾರರೊಂದಿಗೆ ಚರ್ಚಿಸಿ, ವಿವಿಧ ಸಂದರ್ಭದ ಆಚರಣೆಗಳನ್ನು ಛಾಯಾಚಿತ್ರ ಹಾಗೂ ರೆಕಾರ್ಡ್ ಮಾಡುವ ಮೂಲಕ ಮಾಹಿತಿಗಳನ್ನು ಪಡೆಯಲಾಗಿದೆ. ಈ ಮಾಹಿತಿಗಳೆಲ್ಲವೂ ಕ್ಷೇತ್ರ ಹಾಗೂ ಹುಲಿಗೆಮ್ಮನ ಕುರಿತಂತಹುಗಳಾಗಿವೆ. ಒಟ್ಟಾರೆ ಕ್ಷೇತ್ರ ಕಾರ್ಯವು ಈ ಅಧ್ಯಯನಕ್ಕೆ ಪ್ರಧಾನವಾದ ಮಾಹಿತಿಗಳನ್ನು ಒದಗಿಸಿದೆ. ಹಾಗಾಗಿ ಇದೊಂದು ಕ್ಷೇತ್ರ ಕಾರ್ಯಾಧಾರಿತ ಅಧ್ಯಯನವೆನ್ನಬಹುದು.

ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಈ ಕೆಳಗಿನ ಅಧ್ಯಯನ ವಿಧಾನ ಹಾಗೂ ಸಾಧನೆಗಳ ಸಹಾಯ ಪಡೆಯಲಾಗಿದೆ.

೧. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನ

೨. ಅವಲೋಕನ ವಿಧಾನ

೩. ಔಪಚಾರಿಕ ಸಂದರ್ಶನಗಳು

೪. ಅನೌಪಚಾರಿಕ ಸಂದರ್ಶನಗಳು

೫. ಧ್ವನಿ ಮುದ್ರಿಕೆ ಯಂತ್ರ

೬. ಕ್ಯಾಮೆರಾ

ಮಾಹಿತಿಗಳನ್ನು ಸಂಗ್ರಹಿಸಲು ಈ ಕೆಳಕಂಡವರಿಂದ ಮಾಹಿತಿಗಳನ್ನು ಪಡೆಯಲಾಯಿತು.

೧. ಜನಪದ ಮಾಹಿತಿದಾರರು

೨. ಕಲಾವಿದರು

೩. ಸಾಹಿತಿಗಳು

೪. ವಿದ್ವಾಂಸರು

೫. ಅರ್ಚಕರು

೬. ಮಠಾಧೀಶರು

೭. ಅಧಿಕಾರಿಗಳು

೮. ಸ್ಥಳೀಯ ರಾಜಕಾರಣಿಗಳು

ಎರಡನೆಯದಾಗಿ ಪ್ರಸ್ತುತ ಅಧ್ಯಯನಕ್ಕೆ ಈಗಾಗಲೇ ಪ್ರಕಟಿತ ಗ್ರಂಥಗಳು, ಗ್ಯಾಸೆಟಿಯರ್‌ಗಳು, ಹಾಗೂ ಇತರೆ ದಾಖಲೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಗತ್ಯಕ್ಕೆ ತಕ್ಕಂತೆ ಅಧ್ಯಯನದ ವಿಶ್ಲೇಷಣೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಇದರ ಜೊತೆಗೆ ಹುಲಿಗೆಮ್ಮನ ಬಗೆಗೆ ತಿಳಿದುಕೊಂಡಿರುವ ಹಿರಿಯ ಮಾಹಿತಿದಾರರು ಹಾಗೂ ವಿದ್ವಾಂಸರೊಂದಿಗೆ ಚರ್ಚಿಸಿ ಅಧ್ಯಯನ ಮಾಡಲಾಗಿದೆ. ಇದೊಂದು ಮಾಹಿತಿ ಪ್ರಧಾನವಾದ ಅಧ್ಯಯನವಾಗಿದ್ದು, ಅಲ್ಲಲ್ಲಿ ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಣೆಯನ್ನು ಮಾಡಲಾಗಿದೆ.

**೧.೪ ಇದುವರೆಗೂ ನಡೆದ ಅಧ್ಯಯನಗಳು**

ಬೇರೆ ದೈವಗಳ ಕುರಿತು ನಡೆದ ಅಧ್ಯಯನಗಳನ್ನು ಗಮನಿಸಿದಾಗ ಸಮಗ್ರವಾಗಿ ಹುಲಿಗೆಮ್ಮನ ಬಗ್ಗೆ ನಡೆದಿರುವ ಅಧ್ಯಯನಗಳು ಕಡಿಮೆ ಎಂದು ಹೇಳಬಹುದು. ಶ್ರೀ ಬಿ. ಆರ್. ದೇಸಾಯಿಯವರು 'ಶ್ರೀ ಹುಲಿಗಿ ರೇಣುಕಾಂಬ ಸ್ಥಳಚರಿತ್ರೆ' ಕುರಿತು ಕ್ಷೇತ್ರದ ಮಾಹಿತಿ ಆಧಾರಿತ ಕೃತಿಯೊಂದನ್ನು ರಚಿಸಿದ್ದಾರೆ. ಡಾ. ಪುರುಷೋತ್ತಮ ಬಿಳಿಮಲೆಯವರು 'ಹುಲಿಗೆಮ್ಮ' ಎಂಬ ಅಧ್ಯಯನ ಯೋಜನೆಯನ್ನು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿದ್ದಾರೆ. ಡಾ. ಮಂಜುನಾಥ ಬೇವಿನಕಟ್ಟಿಯವರು 'ಪರಿಷೆ V/s ಮಾನ್ಯೇವು' ಎಂಬ ಅಪ್ರಕಟಿತ ಯೋಜನೆಯನ್ನು ಕನ್ನಡ ವಿಶ್ವವಿದ್ಯಾಲಯದಿಂದ ಪೂರ್ಣಗೊಳಿಸಿದ್ದಾರೆ. ಈ ಪುಸ್ತಕಗಳನ್ನು ಹೊರತುಪಡಿಸಿದರೆ ಡಾ. ಸಿದ್ದಲಿಂಗಯ್ಯ. ಡಾ. ಚೆನ್ನಣ್ಣ ವಾಲೀಕರ ಅವರುಗಳು ತಮ್ಮ ಪಿಎಚ್.ಡಿ. ಪ್ರಬಂಧಗಳಲ್ಲಿ ಹುಲಿಗೆಮ್ಮನ ಕುರಿತು ಮಾಹಿತಿ ನೀಡಿದ್ದಾರೆ. 'ಜನಪದ ಸಾಹಿತ್ಯ ದರ್ಶನ - ೧೧' ರಲ್ಲಿ ಹುಲಿಗಿ ಕ್ಷೇತ್ರದ ಕುರಿತು ಮಾಹಿತಿಗಳನ್ನು ಕಾಣುತ್ತೇವೆ. ಪ್ರೊ. ಎಸ್. ಎಸ್. ಹಿರೇಮಠರು 'ಕೊಪ್ಪಳ ಜಿಲ್ಲೆಯ ಜಾತ್ರೆಗಳು' ಎಂಬ ಪುಸ್ತಕದಲ್ಲಿ ಹುಲಿಗೆಮ್ಮನ ಜಾತ್ರೆಯ ಕುರಿತು ಬರೆದಿದ್ದಾರೆ.

ಹುಲಿಗಿ ಕ್ಷೇತ್ರವು ಕರ್ನಾಟಕದ ಕೊಪ್ಪಳ ಜಿಲ್ಲೆಯ ಮುನಿರಾಬಾದ್ ಗ್ರಾಮವು ಹುಲಿಗೆಮ್ಮ ಕ್ಷೇತ್ರವಾಗಿದೆ. ತುಂಗಾ ಭದ್ರಾ ನದಿಯ ದಂಡೆಯಲ್ಲಿರುವ ಈ ಕ್ಷೇತ್ರದಲ್ಲಿ ತುಂಗಭದ್ರಾ ನದಿಯು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದೇ ನದಿ ದಂಡೆಯಲ್ಲಿ ಹುಲಿಗಿ ದೇವಸ್ಥಾನಕ್ಕೆ ತಾಗಿಕೊಂಡಂತೆ ಸೋಮೇಶ್ವರ ದೇವಸ್ಥಾನವೊಂದಿದ್ದು ಅದು ಆಕರ್ಷಕವಾಗಿದೆ. ಹುಲಿಗಿ ಕ್ಷೇತ್ರವು ಒಟ್ಟಾರೆಯಾಗಿ ಸಮತಟ್ಟಾದ ಪ್ರದೇಶವಾಗಿದ್ದು, ತುಂಗಾಭದ್ರ ನದಿಯ ದಂಡೆಯಲ್ಲಿದೆ. ಸು. ಕ್ರಿ.ಶ. ೧೨ನೆಯ ಶತಮಾನದಲ್ಲಿಯೇ ಹುಲಿಗಿ ಕ್ಷೇತ್ರದಲ್ಲಿ ಬೇಸಾಯ ಚೆನ್ನಾಗಿ ನಡೆಯುತ್ತಿತ್ತೆಂಬುದಕ್ಕೆ ಹುಲಿಗಿಯಲ್ಲಿರುವ ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನವೇ ಸಾಕ್ಷಿಯಾಗಿದೆ.

ಹುಲಿಗೆಮ್ಮ ದೇವಸ್ಥಾನವು ಅತ್ಯಂತ ಸರಳವಾಗಿದ್ದು, ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದ ಹಿಂಬದಿಯಲ್ಲಿ ಬೃಹತ್ ಬಂಡೆಯೊಂದಿದೆ. ಅಂತರಾಳದಲ್ಲಿ ಜನ ನಿಲ್ಲುವಷ್ಟು ಸ್ಥಳ ಇದೆ. ಸಭಾಮಂಟಪದಲ್ಲಿ ನಾಲ್ಕು ಕಂಭಗಳಿವೆ. ಸಭಾಮಂಟಪಕ್ಕೆ ಇದರಲ್ಲಿ ಪುಟ್ಟ ಬಾಗಿಲು ಇದೆ. ಪೂರ್ವಕ್ಕೆ ಇನ್ನೊಂದು ಬಾಗಿಲು ಇದೆ. ದೇವಸ್ಥಾನದ ಪಶ್ಚಿಮ ಭಾಗಕ್ಕೆ ಆಡಳಿತ ಕಛೇರಿಯನ್ನು ಸ್ಥಾಪಿಸಲಾಗಿದೆ. ಹುಲಿಗೆಮ್ಮ ದೇವಸ್ಥಾನವು ದಕ್ಷಿಣಾಭಿಮುಖವಾಗಿದ್ದು ದೇವಸ್ಥಾನದ ಸುತ್ತಲೂ ಪೌಳಿಯಿದ್ದು ಪೌಳಿಯ ಒಳಗಡೆ ಗರುಡಗಂಭ, ಹರಕೆಕಂಬ, ಪರಶುರಾಮನ ದೇವಸ್ಥಾನ, ಮುದ್ದಮ್ಮನ ದೇವಸ್ಥಾನ, ಮಾತಂಗಿ ದೇವಸ್ಥಾನಗಳಿವೆ. ಗರ್ಭಗುಡಿಯ ಒಳಗಡೆ ನಾಗಜೋಗಿ ಮತ್ತು ಬಸವಜೋಗಿಯ ಕಲ್ಲಿನ ಮೂರ್ತಿಗಳಿವೆ.

ಹುಲಿಗೆಮ್ಮ ಕ್ಷೇತ್ರದಲ್ಲಿ ಹುಲಿಗೆಮ್ಮನೇ ಪ್ರಧಾನ ದೈವವು ಹೌದು. ಆದರೆ ಆಕೆಯೊಬ್ಬಳೇ ಇಲ್ಲಿ ದೈವವಲ್ಲ. ಆಕೆಯೊಂದಿಗೆ ಇನ್ನು ಹಲವಾರು ದೈವಗಳು ಅದೇ ದೇವಸ್ಥಾನದಲ್ಲಿವೆ. ಅವುಗಳೆಂದರೆ ಹುಲಿಗೆಮ್ಮ ದೇವಸ್ಥಾನದ ಸ್ವಲ್ಪ ಮುಂದಕ್ಕೆ ಮಾತಂಗಿ ಗುಡಿ ಮುಂದೆ ಮೈಲಾರಲಿಂಗನ ಕಂಭ, ಹುಲಿಗೆಮ್ಮ ದೇವಸ್ಥಾನದ ಎದುರುಗಡೆ ಗರುಡಗಂಭ, ಪಕ್ಕದಲ್ಲಿ ಕೊರವಂಜಿ ಕಲ್ಲು ಇದರ ಎದುರಿಗೆ ಪರಶುರಾಮನ ದೇವಸ್ಥಾನ, ಪಕ್ಕದಲ್ಲಿ ಅಜ್ಜಯ್ಯ, ಬನ್ನಿಮರವಿದೆ. ಜನರು ಹುಲಿಗೆಮ್ಮನಿಗೆ ಕೈ ಮುಗಿದು ಹೊರಬಂದು ಈ ಎಲ್ಲಾ ದೇವರುಗಳಿಗೂ ಪೂಜಿಸುವುದನ್ನು ನಾವು ಕಾಣುತ್ತೇವೆ.

ಅಲ್ಲದೆ ದೇವಸ್ಥಾನದಿಂದ ಹೊರಬಂದ ಮೇಲೆ ಸ್ವಲ್ಪ ದೂರದಲ್ಲಿ ತಾಯಿ ಮುದ್ದಮ್ಮಳ ದೇವಸ್ಥಾನವಿದೆ. ಇಲ್ಲಿ ಆಲದ ಮರವಿದ್ದು ಕೆಳಗಡೆ ಮುದ್ದಮ್ಮ ದೇವಿ ಇದೆ. ಇಂದಿಗೂ ಹುಲಿಗೆಮ್ಮಳ ತೇರನ್ನು ಇಲ್ಲಿಯವರೆಗೆ ಎಳೆದು ತಂದು ಪುನಃ ಹುಲಿಗೆಮ್ಮಳ ದೇವಸ್ಥಾನಕ್ಕೆ ಎಳೆದೊಯ್ದು ನಿಲ್ಲಿಸುವ ಪದ್ಧತಿ ಇದೆ.

ಮೊದಲು ಈ ಮುದ್ದಮ್ಮಳ ತನಕವಷ್ಟೇ ಈ ಗ್ರಾಮವಿತ್ತು. ತದನಂತರ ಊರು ಬೆಳೆದು ದೊಡ್ಡದಾಯಿತು ಎಂದು ಹೇಳುವರು. ಆದ್ದರಿಂದ ಚಿಕ್ಕ ಗ್ರಾಮವಾದ ಹುಲಿಗಿಯ ಕ್ಷೇತ್ರ ಇಂದು ದೊಡ್ಡದಾಗಿ ಬೆಳೆದು

ಬಂದಿರುವುದನ್ನು ನಾವು ಕಾಣುತ್ತೇವೆ. ಮತ್ತು ಹತ್ತಿರದಲ್ಲಿಯೇ ಮುನಿರಾಬಾದ್ ಇರುವುದರಿಂದ ಎಲ್ಲಾ ಜನರು ಈಕೆಯನ್ನು ಮುನಿರಾಬಾದ್ ಹುಲಿಗೆಮ್ಮ ಅಂತ ಕರೆಯುತ್ತಾರೆ. ಹುಲಿಗಿ ಕ್ಷೇತ್ರದಲ್ಲಿ ಕುರುಬರು, ಲಿಂಗಾಯತರು, ಬ್ರಾಹ್ಮಣರು, ಜಿನೋರು, ಬೇಡರು, ಮುಸ್ಲಿಂರು, ಖಾಟಿಕ್‌ರು, ಮಾದಿಗರು, ಜೆಸ್ತರು ಹೀಗೆ ಎಲ್ಲಾ ಜಾತಿಯ ಜನಾಂಗದವರನ್ನು ಕಾಣುತ್ತೇವೆ. ಅಲ್ಲದೆ ಪ್ರತಿಯೊಬ್ಬರ ಪಾಲುದಾರಿಕೆಯು ಈ ದೇವಸ್ಥಾನದಲ್ಲಿದೆ. ಈ ದೇವಿಯ ಜಾತ್ರೆಯಲ್ಲಿ ಪ್ರತಿಯೊಬ್ಬರ ಪಾಲುದಾರಿಕೆಯನ್ನು ಕಾಣುತ್ತೇವೆ. ಹುಲಿಗಿ ಕ್ಷೇತ್ರವು ಹೊಸಪೇಟೆಗೆ ಹತ್ತಿರವಾಗಿರುವುದರಿಂದ ಹೊಸಪೇಟೆಯ ಜನರು ಪ್ರತಿ ಮಂಗಳವಾರ ಮತ್ತು ಶುಕ್ರವಾರದಂದು ಪೂಜೆ ಸಲ್ಲಿಸುವುದನ್ನು ಕಾಣುತ್ತೇವೆ.

ಹುಲಿಗಿ ಕ್ಷೇತ್ರಕ್ಕೆ ಕರ್ನಾಟಕ, ಆಂಧ್ರಪ್ರದೇಶಗಳ ಮತ್ತು ಮಹಾರಾಷ್ಟ್ರಗಳಿಂದಲೂ ಜನರು ಬಂದು ಈಕೆಯ ದರ್ಶನವನ್ನು ಪಡೆಯುತ್ತಾರೆ.

**೨.೧ ಹುಲಿಗಿ ಕ್ಷೇತ್ರದ ಇತರ ದೈವಗಳು**

**ಪರಶುರಾಮನ ವಿಗ್ರಹ:** ಮುಖ್ಯದ್ವಾರವನ್ನು ಪ್ರವೇಶಿಸುತ್ತಿರುವಂತೆ ಬಲಬದಿಯಲ್ಲಿ ಪರಶುರಾಮನ ಗುಡಿಯಿದೆ. ಸುಮಾರು ಮೂರು ಅಡಿ ಎತ್ತರದ ಈ ವಿಗ್ರಹವನ್ನ ಇತ್ತೀಚಿಗೆ ಮಾಡಲಾಗಿದೆ.

**ಮಾತಂಗಿ ಗುಡಿ:** ಹುಲಿಗೆಮ್ಮನ ಗುಡಿಯ ಇದಿರಿಗೆ ಮಾತಂಗಿಯ ಗುಡಿ ಇದೆ. ಗುಡಿಯಲ್ಲಿರುವ ಮೂರ್ತಿಯನ್ನು ಇತ್ತೀಚಿಗೆ ಹೊಸದಾಗಿ ಮಾಡಿಸಲಾಗಿದೆ. ಮಾತಂಗಿಯನ್ನು ಮಾದಿಗರ ಜನಾಂಗದವರೇ ಪೂಜೆ ಮಾಡುತ್ತಾರೆ.

**ಮೈಲಾರನ ಕಲ್ಲು:** ಮಾತಂಗಿ ಗುಡಿ ಮತ್ತು ಹುಲಿಗೆಮ್ಮನ ಗುಡಿಯ ನಡುವೆ ಪುಟ್ಟದೊಂದು ಕಲ್ಲಿದ್ದು, ಅದರಲ್ಲಿ ವೀರನೊಬ್ಬನ ಉಬ್ಬುಶಿಲ್ಪವಿದೆ. ಇದನ್ನು ಮೈಲಾರ ಲಿಂಗನ ಕಲ್ಲು ಎಂದು ಕರೆಯುತ್ತಾರೆ.

**ಹರಕೆ ಕಲ್ಲು:** ಇದನ್ನು ಕೊರವಂಜಿ ಕಲ್ಲು ಎಂದು ಕರೆಯುತ್ತಾರೆ. ಈ ಕಲ್ಲಿಗೆ ಎಣ್ಣೆಹಾಕಿ ಗರಗರ ತಿರುಗಿಸಿದರೆ ಭಕ್ತರ ಇಷ್ಟಾರ್ಥಗಳು ನೆರವೇರುತ್ತವೆಂಬ ನಂಬಿಕೆ.

**ಸೋಮೇಶ್ವರ ದೇವಸ್ಥಾನ:** ಹುಲಿಗೆಮ್ಮನ ಗುಡಿಯಿಂದ ತುಂಗಾಭದ್ರ ನದಿಗೆ ಹೋಗುವ ಹಾದಿಯಲ್ಲಿ ಸು. ೨೦೦ ಮೀ. ದೂರದಲ್ಲಿ ಎಡಬದಿಗೆ ಸುಂದರವಾದ ಸೋಮೇಶ್ವರ ದೇವಸ್ಥಾನವಿದೆ. ಗರ್ಭಗುಡಿ ಸಭಾಮಂಟಪಗಳನ್ನು ಒಳಗೊಂಡ ಈ ದೇವಾಲಯದ ಕಂಭ ಮತ್ತು ಗೋಡೆಗಳಲ್ಲಿ ಸುಂದರವಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಗುಡಿಯಲ್ಲಿ ಕಲ್ಯಾಣದ ಚಾಲುಕ್ಯರದ್ದು ಎನ್ನಲಾದ ಶಾಸನವೊಂದಿದೆ.

**ಪವಾಡದ ಸ್ಥಳ:** ಸೋಮೇಶ್ವರ ದೇವಸ್ಥಾನದ ಸ್ವಲ್ಪ ಮೇಲ್ಭಾಗದಲ್ಲಿ ಅಂದರೆ ಸ್ನಾನಕ್ಕೆ ಹೋಗುವ ಹಾದಿಯಲ್ಲಿ ಜಾತ್ರೆಯಲ್ಲಿ ನಡೆಯುವ ಪವಾಡದ ಸ್ಥಳವಿದೆ.

**ಚ್ಯಾಟಿಕಲ್ಲು:** ಕೆಲವು ಜನರ ಅಭಿಪ್ರಾಯದ ಮೇರೆಗೆ ಇದನ್ನು ಹುಲಿಗೆಮ್ಮನ ಪಾದ ಅಂತ ಕರೆಯುತ್ತಾರೆ. ಅಂದರೆ ಇಲ್ಲಿ ಹುಲಿಗೆಮ್ಮನ ಪಾದವಿದ್ದು ಜನರು ಇಲ್ಲಿ ಕುಂಕುಮ ಭಂಡಾರವನ್ನು ಹಚ್ಚಿ ಪೂಜಿಸುವುದನ್ನು

ನಾವು ಇಂದಿಗೂ ಕಾಣಬಹುದು. ಮತ್ತು ಪಕ್ಕದಲ್ಲಿಯೇ ಕುರಿಗಳನ್ನು ಬಲಿಕೊಡುವುದರಿಂದ ಇದನ್ನು ಬ್ಯಾಟಕಲ್ಲು ಎಂತಲೂ ಕರೆಯಲಾಗಿದೆ.

ಮುದ್ದಮ್ಮನ ಗುಡಿ: ಹುಲಿಗಿ ದೇವಸ್ಥಾನದ ಪ್ರಧಾನ ದ್ವಾರ ಮತ್ತು ಎರಡನೇ ದ್ವಾರದ ನಡುವೆ ಬೇವಿನ ಮರದ ಕೆಳಗೆ ಮುದ್ದಮ್ಮನ ವಿಗ್ರಹವಿದೆ. ಭಕ್ತರೆಲ್ಲಾ ಮುದ್ದಮ್ಮನಿಗೂ ಹರಕೆ ಸಲ್ಲಿಸುವುದನ್ನು ನಾವು ಕಾಣುತ್ತೇವೆ. ಒಟ್ಟಾರೆ ಹುಲಿಗಿ ಕ್ಷೇತ್ರದಲ್ಲಿ ಇಷ್ಟೆಲ್ಲಾ ದೈವಗಳನ್ನು ಕಾಣುತ್ತೇವೆ. ಹುಲಿಗೆಮ್ಮಳು ಇಷ್ಟೆಲ್ಲಾ ದೇವತೆಗಳೊಂದಿಗೆ ತಾನು ಪ್ರಧಾನ ದೈವಳಾಗಿರುವುದನ್ನು ನಾವು ಕಾಣುತ್ತೇವೆ. ಅಲ್ಲದೆ ಇತ್ತೀಚಿಗೆ ಹುಲಿಗಿ ಕ್ಷೇತ್ರದಲ್ಲಿ ಬರುವ ಭಕ್ತರಿಗೆಂದು ವಾಸಸ್ಥಳಗಳನ್ನು ನಿರ್ಮಿಸಲಾಗಿದೆ. ಇತ್ತೀಚಿಗೆ ಸೂರ್ಯನಾರಾಯಣ ದೇವಸ್ಥಾನವನ್ನು ಕಟ್ಟಲಾಗಿದೆ. ಇದನ್ನು ಭಾವಸಾರ ಜನಾಂಗದವರು ನಿರ್ಮಿಸಿದ್ದಾರೆ.

ಆದ್ದರಿಂದ ಹುಲಿಗೆಮ್ಮ ಎನ್ನುವ ಹೆಸರು ಸ್ಥಳದೊಂದಿಗೆ ಸೂಚಿತವಾಗುತ್ತದೆ. ಆದ್ದರಿಂದ ಜನರೆಲ್ಲಾ ಹುಲಿಗೆಮ್ಮನಿಗೆ ಹೋಗಬೇಕು ಅಂತ ಹೇಳುತ್ತಾರೆ. ಹುಲಿಗಿ ಕ್ಷೇತ್ರಕ್ಕೆ ಅಂತ ಹೇಳುವುದಿಲ್ಲ.

**೨.೨ ಹುಲಿಗೆಮ್ಮನ ಕುರಿತಾದ ಐತಿಹ್ಯಗಳು**

೧. ಹುಲಿಗೆಮ್ಮನ ಕುರಿತು ಅನೇಕ ಐತಿಹ್ಯಗಳು ಪ್ರಚಲಿತದಲ್ಲಿದ್ದು ಕೆಲವುಗಳನ್ನು ಇಲ್ಲಿ ವಿವರಿಸಲಾಗಿದೆ:

ಹುಲಿಗೆಮ್ಮನ ಭಕ್ತನನ್ನು ಒಮ್ಮೆ ಟಿಪ್ಪು ಅವಮಾನಿಸಿದನಂತೆ. ಇದರಿಂದಾಗಿ ಟಿಪ್ಪು ಶಕ್ತಿಗುಂದಿದನಂತೆ. ಇದು ಹುಲಿಗೆಮ್ಮನ ಕೋಪದ ಪರಿಣಾಮ ಎಂದು ತಿಳಿದ ಆತ ಈ ದೈವಕ್ಕೆ ಚಿನ್ನಾಭರಣಗಳನ್ನು ಹರಕೆ ರೂಪದಲ್ಲಿ ಒಪ್ಪಿಸುತ್ತಾನೆ. ಹುಲಿಗೆಮ್ಮಳು ಸುಪ್ರೀತಳಾಗಿ ಟಿಪ್ಪುವಿಗೆ ಆತನ ಶಕ್ತಿ ಧೈರ್ಯಗಳನ್ನು ಮರಳಿ ಒಪ್ಪಿಸುತ್ತಾಳೆ.

೩. ಹುಲಿಗಿ ಕ್ಷೇತ್ರದಲ್ಲಿ ಇರುವ ಲಕ್ಷ್ಮಮ್ಮಳ ಮಗನಿಗೆ ಹುಟ್ಟಿ ಆರು ವರ್ಷವಾದರೂ ನಡೆಯುತ್ತಿರಲಿಲ್ಲವಂತೆ. ಆಗ ದೇವಿಗೆ ಲಕ್ಷ್ಮಮ್ಮ ಬೇಡಿಕೊಂಡು ನನ್ನ ಮಗ ನಡೆದು ಓಡಾಡಿದರೆ ನಿನಗೆ ಹಿತ್ತಾಳೆ ಕುದುರೆ ಮಾಡಿಸಿಕೊಡುತ್ತೇನೆಂದು ಬೇಡಿಕೊಂಡಳಂತೆ. ಆಗ ಮಗ ಚೆನ್ನಾಗಿ ನಡೆದಾಡಲು ಪ್ರಾರಂಭಿಸಿದನಂತೆ. ಸತ್ಯಘಟನೆಯೊಂದರಿಂದಲೇ ಹುಟ್ಟಿಕೊಂಡಿರಬಹುದು ಎಂದರೆ, ಅದು ನಿಜವಾದ ಚರಿತ್ರೆಯೇ ಇರುತ್ತದೆಂದು ಅಪೇಕ್ಷೆ ಪಡುವುದು ಮಾತ್ರ ತಪ್ಪು. ಹೆಚ್ಚಿನ ಸಂದರ್ಭಗಳಲ್ಲಿ ಐತಿಹ್ಯಗಳಲ್ಲಿ ಚರಿತ್ರೆ ಎಳ್ಳಷ್ಟೂ ಇರದೆ ಇರಲೂ ಇರಬಹುದು. ಆದರೆ ಐತಿಹ್ಯ ಚರಿತ್ರೆಯ ವೇಷವನ್ನು ಮಾತ್ರ ತಪ್ಪದೇ ಧರಿಸುತ್ತದೆ. ಅಷ್ಟೇ ಅಲ್ಲ, ಅದು ಅದರ ಪ್ರಧಾನ ಲಕ್ಷಣಗಳಲ್ಲಿ ಒಂದು.

ಐತಿಹ್ಯಕ್ಕೂ ಪುರಾಣಕ್ಕೂ ಹೋಲಿಕೆಯಿರುತ್ತದೆ. ಹಲವಾರು ಸಂದರ್ಭಗಳಲ್ಲಿ ಐತಿಹ್ಯ ಮತ್ತು ಪುರಾಣಗಳ ನಡುವಿನ ಅಂತರ ತಿಳಿಯುವುದು ಕಷ್ಟದ್ದಾಗುತ್ತದೆಂದು ಜನಪದ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಹೆಚ್ಚಿನ ಸಂದರ್ಭಗಳಲ್ಲಿ ಸಾಮಾನ್ಯ ಜನತೆ ಕೂಡ ಪುರಾಣವನ್ನು ಅದು ಚರಿತ್ರೆಯಲ್ಲ ಎಂದು ತಿಳಿದಿರುತ್ತದೆ. ಆದರೆ ಐತಿಹ್ಯದ ಬಗೆಗೆ ಜನಸಾಮಾನ್ಯರಲ್ಲಿ ಈ ಧೋರಣೆ ಕಂಡುಬರುವುದಿಲ್ಲ. ಆದ್ದರಿಂದ ಪುರಾಣ ಮತ್ತು ಐತಿಹ್ಯಗಳಲ್ಲಿ ಇದೊಂದು ಪ್ರಮುಖ ವ್ಯತ್ಯಾಸವೆನ್ನಬಹುದು. ಮೇಲಾಗಿ ಪುರಾಣಗಳ ದೀರ್ಘತೆ ಐತಿಹ್ಯಗಳಲ್ಲಿರುವುದಿಲ್ಲ.

ನಂಬಿಕೆಗಳು ಐತಿಹ್ಯಗಳ ಸೃಷ್ಟಿಗೆ ಕಾರಣವಾಗಬಹುದು. ಹುಲಿಗೆಮ್ಮ ಸಿದ್ಧರನ್ನು ನಿಗ್ರಹಿಸಿದಳು ಎಂದು ಹೇಳಲಾಗುವ ಐತಿಹ್ಯದ ಹುಟ್ಟಿಗೆ ಇಂಥ ನಂಬಿಕೆಯೊಂದು ಕಾರಣವಾಗಿದ್ದಂತೆ ತೋರುತ್ತದೆ. ಈ ವಿಷಯದ ಹೆಚ್ಚಿನ ಚರ್ಚೆಯನ್ನು ಮುಂದೆ ಕಾಣಬಹುದು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ನಂಬಿಕೆ ತೀರಾ ಚಿಕ್ಕದಾದ ಘಟಕ. ಐತಿಹ್ಯ ನಂಬಿಕೆಯಷ್ಟು ಚಿಕ್ಕದಾಗಿರುವುದಿಲ್ಲ. ಅದೇ ರೀತಿ ಪುರಾಣದ ದೀರ್ಘತೆಯೂ ಐತಿಹ್ಯಕ್ಕಿರುವುದಿಲ್ಲವೆಂಬುದು ಸ್ಪಷ್ಟ.

**ಮಾತಂಗಿ**

ಮಾತಂಗಿ ಹೊಲೆಯ ಅಥವಾ ಮಾದಿಗ ಜಾತಿಯವಳು ಎಂಬ ಬಗ್ಗೆ ಎಲ್ಲೆಡೆ ಏಕಾಭಿಪ್ರಾಯ ಕಂಡು ಬರುತ್ತದೆ. ಹುಲಿಗೆಮ್ಮನಿಗೆ ಬಚ್ಚಿಟ್ಟುಕೊಳ್ಳಲು ಸಹಾಯ ಮಾಡಿದಳೆಂದು ಐತಿಹ್ಯವಿದೆ. ಇವೆಲ್ಲ ಶುದ್ಧ ಜನಪದೀಯ ಅಂಶಗಳು ಆದ ಕಾರಣ ಹುಲಿಗೆಮ್ಮನ ಹತ್ತಿರ ಬರುವ ಭಕ್ತರೆಲ್ಲರು ಮೊದಲು ಮಾತಂಗಿಗೆ ಕೈ ಮುಗಿದು ನಂತರ ಹುಲಿಗೆಮ್ಮನಿಗೆ ಕೈಮುಗಿಯುವುದನ್ನು ಈ ಕ್ಷೇತ್ರದಲ್ಲಿ ಕಾಣುವಂತದ್ದಾಗಿದೆ.

**ಪರಶುರಾಮ ಹುಲಿಗೆಮ್ಮ ಎಲ್ಲಮ್ಮ**

ಪುರಾಣಗಳ ಪ್ರಕಾರ ಈತ ರೇಣುಕೆಯ ಐದು ಜನ ಮಕ್ಕಳಲ್ಲಿ ಒಬ್ಬ. ಉಳಿದ ನಾಲ್ಕು ಜನರು ತಂದೆ ಆಜ್ಞೆ ಮಾಡಿದಾಗಲೂ ತಾಯಿಯ ಕೊಲೆಗೆ ಹಿಂದೆಗೆಯಲು ಈತ ಮುಂದಾಗಿ ತಾಯಿಯ ತಲೆ ಕತ್ತರಿಸಿದನೆಂದು ಹೇಳಲಾಗುತ್ತದೆ. ಅದೇ ರೀತಿ ಕಾರ್ತವೀರ್ಯನನ್ನು ಕೊಂದುದು. ಕ್ಷತ್ರಿಯ ವಂಶವನ್ನು ನಿರ್ಮೂಲ ಮಾಡಿದ್ದು ತಂದೆ ಆರ್ಶೀವಾದದಿಂದ. ಪುನಃ ತಾಯಿಯನ್ನು ಬದುಕಿಸಿದ್ದು ಮುಂತಾದ ಸಂಗತಿಗಳ ಉಲ್ಲೇಖ ಪುರಾಣಗಳಲ್ಲಿಯೂ ಜಾನಪದ ಹಾಡುಗಳಲ್ಲಿಯೂ ಕಂಡುಬರುತ್ತದೆ. ಇವೆಲ್ಲ ಪುರಾಣದ ವ್ಯಾಪ್ತಿಗೆ ಸಂಬಂಧಿಸಿದ ಅಂಶಗಳು. ಆದರೆ ಮತ್ತೊಂದು ರೀತಿಯಲ್ಲಿ ಜನಪದ ಹಾಡಿನಂತೆ ಪರಶುರಾಮನನ್ನು ಎಲ್ಲಮ್ಮ ಪವಾಡದ ರೀತಿಯಲ್ಲಿ ಹೆತ್ತಳೆಂದು ತಿಳಿದುಬರುತ್ತದೆ.

ಆದ್ದರಿಂದ ತಾಯಿಯ ಶೀಲವನ್ನು ಶಂಕಿಸಿದ ಪರಶುರಾಮ ತಾಯಿಯ ಕೊಲೆ ಮಾಡಿದನೆಂಬ ನಂಬಿಕೆ ಬಹು ಮಹತ್ತರವಾಗಿದೆ. ಜಾನಪದ ನಂಬಿಕೆಯಂತೆ ಆಚರಣೆಗಳನ್ನು ನೋಡಿದರೆ ಈತನು 'ಕ್ಷೇತ್ರಪಾಲಕ ದೇವತೆ' ಎನ್ನಬೇಕಾಗುತ್ತದೆ. ಗೊಂದಲಿಗರು ತಮ್ಮ ಗೊಂದಲದ ಕೊನೆಯಲ್ಲಿ ಈ ಪರಶುರಾಮನ ಪೂಜೆಯನ್ನು ತಪ್ಪದೇ ಕೈಕೊಳ್ಳುವರು. ಹೀಗೆ ಆಚರಿಸುವ ಕಾರಣವೆಂದರೆ ಪರಶುರಾಮ ಭಕ್ತರ ಶಿಕ್ಷಣಾರ್ಥ ಅವರ ಬೆಂಗಾವಲಿಗೆ ಬಂದಿರುವನೆಂದೂ ಅದಕ್ಕಾಗಿ ಅವನನ್ನು ಪೂಜಿಸಿ ಕಳುಹಿಸಬೇಕಾದದ್ದು ಅನಿವಾರ್ಯವೆಂದೂ ಹೇಳುತ್ತಾರೆ. ಈ ಸಂಗತಿಯನ್ನು ಬೆಂಬಲಿಸುವಂತೆ ಪರಶುರಾಮನ ಗುಡಿಯು ಹುಲಿಗೆಮ್ಮನ ದೇವಸ್ಥಾನದಲ್ಲಿ ಮುಖ್ಯ ದೇವಲಾಯದಿಂದ ತಕ್ಕಷ್ಟು ದೂರ ದಕ್ಷಿಣಕ್ಕೆ ಇರುವುದನ್ನು ಕಾಣಬಹುದು. ಇದು ಕೂಡ ಪರಶುರಾಮನು ಕ್ಷೇತ್ರಪಾಲಕನೆಂಬುದನ್ನು ಸಮರ್ಥಿಸುತ್ತದೆ.

ಕ್ಷೇತ್ರಪಾಲಕ ದೇವತೆಗಳು ಯಾವಾಗಲು ಉಗ್ರ, ಭೈರವ, ಕಾಳಭೈರವ, ಕಾಳಭೈರವಿ ಮುಂತಾದವರು ನಮ್ಮ ದೇವಾಲಯಗಳಲ್ಲಿ ಕ್ಷೇತ್ರಪಾಲಕ ದೇವರುಗಳಾಗಿರುತ್ತಾರೆ. ಇವರೆಲ್ಲ ಉಗ್ರದೇವತೆಗಳೇ. ಪರಶುರಾಮನು

ಗಂಡುಗೊಡಲಿ ಹಿಡಿದಿರುವುದು, ಕಾರ್ತವೀರ್ಯ ಮತ್ತು ಇತರ ಕ್ಷತ್ರಿಯರನ್ನು ಅವನು ಸಂಹರಿಸಿದನೆಂದು ಹೇಳುವುದು ಅವನ ಹಿನ್ನೆಲೆಗೆ ಯೋಗ್ಯವೇ ಆಗಿದೆ. ದೇವಿಯ ಸೇವೆಗೆ ಸದಾ ಸನ್ನದ್ಧರಾಗಿ ನಿಂತಿರುವ ದೇವತೆಯಾದುದುರಿಂದ ಅವನನ್ನು ದೇವಿಯ ಮಗನೆಂದು ಕಲ್ಪಿಸಲಾಯಿತೆಂದು ಹೇಳಬಹುದು. ಗಂಡನಿಲ್ಲದೆ ಪರಶುರಾಮನನ್ನು ಹೆತ್ತಳೆಂದು ಹೇಳುವುದು ಮಾತ್ರ ವಿಶೇಷ ಆಶಯದಿಂದ ಕೂಡಿರುವಂತೆ ಕಾಣುತ್ತದೆ.

ದೇವದಾಸಿ ಪದ್ಧತಿಯನ್ನು ಸಮರ್ಥಿಸಲೋಸುಗ ಹುಟ್ಟಿದ ಕಥೆ ಇದೆಂಬಂತೆ ತೋರುತ್ತದೆ. ಎಂದರೆ ಆಚರಣೆಯ ಮೂಲಕ ಹುಟ್ಟಿದ ಐತಿಹ್ಯವಿದು ಎಂದು ಹೇಳಬೇಕಾಗುತ್ತದೆ. ಜನಪದರು ದೇವಿಯ ಗುಡಿಯಲ್ಲಿ ಪೂಜೆಯ ಕಾಲಕ್ಕೆ ನಡೆಯುವ ವಾದ್ಯವೈಭವದ ಸಪ್ಪಳ ಪರಶುರಾಮನ ಗುಡಿಯಲ್ಲಿ ಕೇಳದಿರುವುದು ಈ ಸಂಗತಿ ಪರಿಶೀಲನಾರ್ಹವಾಗಿದೆ. ತನ್ನ ತಲೆಯನ್ನು ಕತ್ತರಿಸಿದ್ದಕ್ಕಾಗಿ ಹುಲಿಗೆಮ್ಮ (ಎಲ್ಲಮ್ಮ)ಳು ಪರಶುರಾಮನಿಗಿತ್ತ ಶಾಪವೇ ಈ ಸಪ್ಪಳ ಕೇಳದಿರಲು ಕಾರಣವೆಂದು ಜನಪದರ ಹೇಳಿಕೆ.

### ಐತಿಹಾಸಿಕ ದಾಖಲೆಗಳು

ಹುಲಿಗಿ ದೇವಸ್ಥಾನದ ಬಗೆಗೆ ಚಾರಿತ್ರಿಕ ಉಲ್ಲೇಖಗಳು ಹೆಚ್ಚು ಲಭ್ಯ ಇಲ್ಲ. ಆದರೆ ದೇವಸ್ಥಾನದ ಪಕ್ಕದಲ್ಲಿರುವ ಸೋಮೇಶ್ವರ ಲಿಂಗದ ಬಗ್ಗೆ ಶಾಸನವೊಂದು ಅದೇ ದೇವಸ್ಥಾನದಲ್ಲಿ ಲಭ್ಯ ಇದ್ದು ಅದರ ಕಾಲ ಚಾಲುಕ್ಯ ವಿಕ್ರಮ ಶಕೆ ೧೩ (ಸು. ಕ್ರಿ.ಶ. ೧೩ನೇ ಶ.) ಎಂದು ಹೇಳಲಾಗಿದೆ. ಈ ಶಾಸನದ ಪ್ರಕಾರ, ಇಲ್ಲಿ ಮೊದಲು ಚೌಡಿಭಟ್ಟನೆಂಬ ಬ್ರಾಹ್ಮಣನಿದ್ದ. ಆತನು ಕಾಮಕಾಯನ ಗೋತ್ರಕ್ಕೆ ಸೇರಿದ್ದ ಆತನ ಹೆಂಡತಿಯ ಹೆಸರು ಅಂಚಿ ಕಬ್ಬಿ. ಇವರಿಬ್ಬರೂ ಸೋಮೇಶ್ವರನ ಅನನ್ಯ ಭಕ್ತರಾಗಿದ್ದರು. ಇಲ್ಲಿ ಒಮ್ಮೆ ಮಳೆಬಾರದೆ ಕ್ಷಾಮ ಬರುತ್ತದೆ. ಆಗ ಚೌಡಿಭಟ್ಟನು ಊರವರ ಸಹಾಯದಿಂದ ತುಂಗಾಭದ್ರಾನದಿಗೆ ಅಡ್ಡಕಟ್ಟೆಯೊಂದನ್ನು ಕಟ್ಟಿ ನೀರು ಊರೊಳಗೆ ಬರುವಂತೆ ಮಾಡಿದ. ನದಿಯ ನೀರು ಕೃಷಿ ಭೂಮಿಗೆ ದೊರಕುವಂತಾಗಲು ಆತ ವಿವಿಧ ಕಾಲುವೆಗಳನ್ನು ಮಾಡಿಸುತ್ತಾನೆ. ಇದರಿಂದಾಗಿ ಇಡೀ ಕ್ಷೇತ್ರ ಅಭಿವೃದ್ಧಿ ಹೊಂದಿತು. ಇದರಿಂದ ಸಂತೋಷಗೊಂಡ ಅರಸನು ಚೌಡಿಭಟ್ಟನ ಸಮಾಜಕಾರ್ಯಕ್ಕೆ ಮೆಚ್ಚಿ ಉದಾರವಾಗಿ ಕಾಣಿಕೆಗಳನ್ನು ನೀಡಿ ಗೌರವಿಸುತ್ತಾನೆ. ಈ ಒಂದು ಉಲ್ಲೇಖ ಬಿಟ್ಟರೆ ಹುಲಿಗಿಗೆ ಬೇರಾವುದೇ ಚಾರಿತ್ರಿಕ ದಾಖಲೆಗಳು ಲಭ್ಯವಿಲ್ಲ.

### ಹೊಸೂರು

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹೊಸೂರು ಗ್ರಾಮವು ಹೊಸೂರಮ್ಮನ ಕ್ಷೇತ್ರ. ಹೊಸಪೇಟೆಯಿಂದ ಸುಮಾರು ನಾಲ್ಕೈದು ಕಿ.ಮೀ. ದೂರದಲ್ಲಿರುವ ಹೊಸೂರಿಗೆ ಮೊದಲು ಹೊನ್ನಹೊಸೂರು ಎಂದು ಕರೆಯುತ್ತಿದ್ದರಂತೆ. ಇದಕ್ಕೆ ಬಹಳ ಹಿಂದಿನಿಂದಲೂ ಹೊಸೂರು ಮಾಗಾಣಿ ಎಂದ ಸಹ ಕರೆಯುವರು. ವಿಜಯನಗರ ಅರಸರ ಸಾಮ್ರಾಜ್ಯಕ್ಕೆ ಸೇರಿದ ಶ್ರೀ ಹೊಸೂರಮ್ಮ ದೇವಸ್ಥಾನವು ತುಂಗಭದ್ರಾ ನದಿಯ ಬಲದಂಡೆಯಲ್ಲಿರುವ ಹೊಸೂರಿನ ದೇವತೆ. ಹೊಸೂರು ಗ್ರಾಮವು ವಿಜಯನಗರ ಕಾಲದಿಂದಲೂ ಶಾಸನಗಳಲ್ಲಿ ಹೊಸೂರು ಎಂದು ಉಲ್ಲೇಖಗೊಂಡಿದೆ.

ಹೊಸೂರಮ್ಮ ದೇವಾಲಯವು ಉತ್ತರಾಭಿಮುಖವಾಗಿದೆ. ಈ ದೇವತೆಗೆ ಕೆಲವು ಉಪಸ್ಥಾನ ದೇವತೆಗಳಿವೆ. ಅವುಗಳೆಂದರೆ, ಮೈಲಾರಲಿಂಗ ಸ್ವಾಮಿ ಗುಡಿ, ಗಣೇಶನ ವಿಗ್ರಹ ಮತ್ತು ದೇವಾಲಯದ ಆಗ್ನೇಯ ದಿಕ್ಕಿನಲ್ಲಿ ಮಾತಂಗೇಶ್ವರನ ಗುಡಿ ಇದೆ. ದಕ್ಷಿಣ ಭಾಗದಲ್ಲಿ ಜಮದಗ್ನೇಶ್ವರನ ಗುಡಿ ಇದೆ. ಇದರಲ್ಲಿ ಶಿವಲಿಂಗ ಮತ್ತು ಅಕ್ಷಮೂರ್ತಿಗಳನ್ನು ಧರಿಸಿದ ಒಂದು ಮೂರ್ತಿಯೂ, ದುರ್ಗೆಯ ಒಂದು ಬಿಂಬವೂ ಇದೆ. ಇವೆರಡೂ ಶಿಲಾಮೂರ್ತಿಗಳು ಇವುಗಳೆದುರು ಶಿವಲಿಂಗವು ಸ್ಥಾಪಿತವಾಗಿದೆ.

ಪಶ್ಚಿಮ ಭಾಗದಲ್ಲಿ 'ತಾಯಿ ಮುದ್ದಮ್ಮ'ನ ದೇವತಾ ವಿಗ್ರಹವಿದೆ. ಹತ್ತಡಿ ಎತ್ತರದ ನಾಗನ ಸುರಳಿ ಹಾಕಿನಿಂತ ಶಿಲ್ಪವಿದೆ. ಪಶ್ಚಿಮ ಎತ್ತರದ ನಾಗನ ಸುರಳಿ ಹಾಕಿನಿಂತ ಶಿಲ್ಪವಿದೆ. ಪಶ್ಚಿಮ ಭಾಗದ ಇನ್ನೊಂದು ಗುಡಿಯೆಂದರೆ 'ಆಂಜನೇಯ'ನದು. ಹೊಸೂರಿಗೆ ಸಂಬಂಧಿಸಿದ ಇನ್ನಿತರ ಗುಡಿಗಳಿವೆ. ಶ್ರೀ ದುರ್ಗದ ಆಂಜನೇಯ ಸ್ವಾಮಿ ಗುಡಿ (ಗ್ರಾಮಕ್ಕೆ ಹೋಗುವ ದಾರಿಯಲ್ಲಿ) ಊರಮ್ಮನ ದೇವಾಲಯ (ಗ್ರಾಮದ ಹೊರಗಡೆ) ಶ್ರೀ ಪವಾಡದ ಆಂಜನೇಯ ಸ್ವಾಮಿ ಗುಡಿ (ನದಿಗೆ ಹೋಗುವ ದಾರಿ) ಇದೆ.

ಹೊಸರೂಮ್ಮ ದೇವಸ್ಥಾನಕ್ಕೆ ಸುಮಾರು ಹತ್ತು ಅಡಿ ಗರ್ಭಗುಡಿ ಇದ್ದು ಮೇಲೆ ಶಿಲೆಯ ಚೌಕಟ್ಟಿದೆ. ಗರ್ಭಗೃಹದ ಎದುರು ಕಿರಿದಾದ ಸುಖನಾಸಿ ಇದೆ. ಅದರ ಎದುರೇ ನವರಂಗವಿದೆ. ಕ್ರಿ.ಶ. ೧೬ನೇ ಶತಮಾನಕ್ಕೆ ಸೇರಿಸಬಹುದಾದ ನಾಲ್ಕು ಕಗ್ಗಲ್ಲಿನ ಸ್ತಂಭಗಳಿವೆ. ನವರಂಗದ ಬಲಭಾಗದಲ್ಲಿ ಗಣೇಶನ ಬಿಂಬವೂ, ಎರಡು ಪಂಚಲೋಹದ ಮೂರ್ತಿಗಳು ಇದ್ದು, ಒದು ಪರಶುರಾಮನ ವಿಗ್ರಹ, ಇನ್ನೊಂದು ದುರ್ಗಾದೇವಿಯ ವಿಗ್ರಹವಿದೆ. ಈ ವಿಗ್ರಹಗಳು ಸು. ೧೭ನೇ ಶತಮಾನದವುಗಳಾಗಿರಬಹುದು. ನವರಂಗದ ಹೊರಗಡೆ ಇರುವ ಮಂಟಪದ ದ್ವಾರದ ಎರಡೂ ಬದಿಗೂ ಆಳೆತ್ತರದ ಶಿಲೆಯ ದ್ವಾರಪಾಲಕ ಮೂರ್ತಿಗಳಿವೆ. ಇವು ೧೬ನೇ ಶತಮಾನದವುಗಳಾಗಿರಬಹುದು. ಮಂಟಪದ ಎದುರು ಭಾಗದಲ್ಲಿ ಎರಡು ಸಾಲು ಶಿಲಾಸ್ತಂಭಗಳಿವೆ. ಆವರಿಸಲ್ಪಟ್ಟ ಕಲ್ಲುಚಪ್ಪರವಿದೆ. ಇದರ ನಿರ್ಮಾಣವು ಸ್ಥಾನಿಕರಿಂದ ಕ್ರಿ.ಶ. ೧೬ನೇಯ ಶತಮಾನದಲ್ಲಾಯಿತೆಂದು ಒಂದು ಶಿಲಾಸ್ತಂಭದಲ್ಲಿರುವ ಶಾಸನದಿಂದ ತಿಳಿಯಬಹುದು.

ಇಷ್ಟೆಲ್ಲಾ ಪ್ರಾಚೀನತೆಯನ್ನು ಹೊಂದಿರುವ ದೇವಾಲಯದಲ್ಲಿ ಶಾಸನಗಳು ಸಹ ಇವೆ. ದೇವಾಲಯದಲ್ಲಿನ ಕಲ್ಲಿನ ಚಪ್ಪಡಿ ಮಂಟಪದ ಬಲಭಾಗಕ್ಕೆ ಇರುವ ದ್ವಾರಪಾಲಕ ವಿಗ್ರಹದ ಪಕ್ಕ ಇರುವ ಕಲ್ಲು ಚಪ್ಪಡಿಯ ಮೇಲೆ ಇರುವ ಶಾಸನವು ಹೊಸೂರಿನ ಮಹಾಮಾಯೀ (ಹೊಸೂರಮ್ಮ) ದೇವಿಯ ಸೇವೆಗಾಗಿ ಬ್ರಾಹ್ಮಣನಿಗೆ ಚಿತ್ತವಾಡ್ಗಿ ಸೀಮೆಯ ಕೆಲವು ಗ್ರಾಮಗಳಲ್ಲಿ ಭೂಮಿಯನ್ನು ಮಾದಿನಾಯಕನು ದತ್ತಿಯಾಗಿ ನೀಡಿದ್ದಾನೆಂದು ತಿಳಿಸುತ್ತದೆ. ದೇವಾಲಯದ ಮುಖಮಂಟಪದ ಕಲ್ಲು ಚಪ್ಪಡಿಯ ಮೇಲೆ ಶಾಸನವಿದೆ. ಕ್ರಿ.ಶ. ೧೫೧೩ರ ಹೊಸೂರಿನ ಹೊಸೂರಮ್ಮ ದೇವಾಲಯದಲ್ಲಿರುವ ಆ ಶಾಸನವು ದೇವಿ ಎಕ್ಕನಾಥೆ (ಮಹಾಮಾಯಿ, ಹೊಸೂರಮ್ಮ)ಯನ್ನು ಉಲ್ಲೇಖಿಸಿದೆ.

ದೇವಿ ಎಕ್ಕನಾಥೆಗೆ ಗೌರದಣ್ಣ ನಾಯಕನ ಮಗ ಬಸವಪ್ಪ ಮತ್ತು ಉಪಪ್ರಧಾನ ಸೋಮರಸನು ಕೃಷ್ಣರಾಯನ ಪರವಾಗಿ ದತ್ತಿ ಬಿಟ್ಟ ಬಗ್ಗೆ ತಿಳಿಸುತ್ತದೆ. ಅದೇ ಮಂಟಪದ ಕಂಭದ ಮೇಲ್ಭಾಗದಲ್ಲಿರುವ ಶಾಸನದಲ್ಲಿ ಕೃಷ್ಣರಾಯನು ದೇವಾಲಯವನ್ನು ಪುನರ್‌ನಿರ್ಮಿಸಲು ಭೂದಾನ ಮಾಡಿದುದರ ಬಗೆಗೆ ಇದೆ.

ಅದೇ ಕಂಭವಲ್ಲಿರುವ ಇನ್ನೊಂದು ಶಾಸನವು ಹೊಸೂರಿನ ಮಹಾಮಾಯಿ ದೇವಸ್ಥಾನದ ಸ್ಥಾಪಿಕನು ದೇವಿಯ ಸಿಂಹವಾಹನಕ್ಕೆ ಅಲಂಕಾರ ಮಾಡಲು ವಿಜಯನಗರದ ಕಟಕಮ್ ಮಲ್ಲಯ್ಯನಿಗೆ ಭೂಮಿಯನ್ನು ನೀಡುತ್ತಾನೆ. ಎಂಬುದರ ಬಗೆಗೆ ಇದೆ.

ಹೊಸೂರಿನಲ್ಲಿ ವಾಸಿಸುವವರು ಮೂಲತಃ ಹೊಸಪೇಟೆ ಮತ್ತು ಸುತ್ತಮುತ್ತಲಿನ ಗ್ರಾಮದವರು. ದೈನಂದಿನ ತಮ್ಮ ಚಟುವಟಿಕೆಗಳಿಗಾಗಿ ಹೊಸಪೇಟೆಯನ್ನು ಆಶ್ರಯಿಸಿದ್ದಾರೆ. ಹೊಸೂರಮ್ಮನಿಗೆ ಕರ್ನಾಟಕದ ನಾನಾ ಕಡೆ ಮತ್ತು ಬೇರೆ ರಾಜ್ಯಗಳಲ್ಲಿ ಭಕ್ತರಿದ್ದರೂ ಸಹ ಸಂಖ್ಯೆಯ ದೃಷ್ಟಿಯಿಂದ ಕಡಿಮೆ ಇದ್ದಾರೆ. ಹೆಚ್ಚಾಗಿ ಹಿಂದುಳಿದ ಮತ್ತು ದಲಿತ ವರ್ಗದ ಜನರು ಭಕ್ತರಾಗಿದ್ದಾರೆ. ಹೊಸರಮ್ಮನನ್ನು ಮನೆದೈವವೆಂದು ಸ್ಥಾಪಿಸಿಕೊಂಡಿದ್ದಾರೆ.

**ಹುಲಿಗೆಮ್ಮ ಹುಲಿಗಿಯಲ್ಲಿ ನೆಲೆಯೂರಲು ಕಾರಣ**

ಮೊದಲು ಹುಲಿಗೆಮ್ಮ ಹೊಸೂರಿನಲ್ಲಿದ್ದಳು. ಆನಂತರ ಹುಲಿಗಿ ಕ್ಷೇತ್ರಕ್ಕೆ ಬಂದು ನೆಲೆಸಿದಳು ಎಂದು ಹೇಳುವರು. ಹುಲಿಗೆಮ್ಮ ಹೊಸೂರಮ್ಮ ಇಬ್ಬರು ಅಕ್ಕತಂಗಿಯರು ಆ ಒಂದು ಚಹರೆಯನ್ನು ಗುರುತಿಸಲು ನದಿಯ ದಂಡೆಯಲ್ಲಿ ಎರಡು ಪಾದಗಳು ಸಿಗುತ್ತವೆ. ಆ ಎರಡು ಪಾದಗಳನ್ನು ಹುಲಿಗೆಮ್ಮನ ಪಾದಗಳು ಎಂದು ಕರೆಯುತ್ತಾರೆ.

ಹುಲಿಗೆಮ್ಮ ಮತ್ತು ಹೊಸೂರಮ್ಮ ಇಬ್ಬರೂ ಒಂದು ದಿನ ವಿಹಾರಕ್ಕೆಂದು ಬರುತ್ತಿರುವಾಗ ಹುಲಿಗೆಮ್ಮ ಹೊಸೂರಮ್ಮನಿಗೆ ನಾನು ಈ ಜಾಗದಲ್ಲಿ ಅಂದರೆ ಹುಲಿಗಿ ಕ್ಷೇತ್ರದಲ್ಲಿ ಬಂದು ನೆಲೆಸುತ್ತೇನೆ ಅಂತ ಹೇಳಿದಳಂತೆ. ಆಗ ಹೊಸೂರಮ್ಮ ನೀನು ಅಲ್ಲಿಗೆ ಹೋಗುವುದು ಸರಿಯಲ್ಲ ಅಂತ ಹೇಳಿದರು ಹುಲಿಗೆಮ್ಮ ಬಿಡದೆ ನಾನು ಈ ಜಾಗದಲ್ಲಿ ನೆಲೆಸುತ್ತೇನೆ ಅಂತ ಹೇಳಿದಳಂತೆ. ಆಗ ಹೊಸೂರಮ್ಮಳಿದ್ದುಕೊಂಡು ಸರಿ ನೀನು ಪರಿಷೆ ಪಡೆ, ನಾನು ಮಾನ್ಯೇವುಗಳನ್ನು ಪಡೆಯುತ್ತೇನೆ ಎಂದು ಹೇಳಿದಳಂತೆ. ಅಂದಿನಿಂದ ಹುಲಿಗೆಮ್ಮ ಹುಲಿಗಿ ಕ್ಷೇತ್ರದಲ್ಲಿ ನೆಲೆಯೂರಿದಳು.

೨. ಹುಲಿಗೆಮ್ಮ ಅಂತ ಹೆಸರು ಬರಲು ಕಾರಣ, ಮೊದಲು ಈ ಕ್ಷೇತ್ರವನ್ನು ಪುಲಿಗೆರೆ ಅಂತ ಕರೆಯುತ್ತಿದ್ದರಂತೆ. ಹುಲಿಗಳ ಕ್ಷೇತ್ರವಾದ ಇದು ನಂತರ ವ್ಯಾಘ್ರಪುರಿ ಅಂತ ಹೆಸರಾಯಿತು. ವ್ಯಾಘ್ರಪುರಿ ಎನ್ನುವುದು ಸಂಸ್ಕೃತದಲ್ಲಿ ಬಳಸುವಂತ ಪದವಾಗಿದೆ. ಈ ಕ್ಷೇತ್ರ ಹುಲಿಗಳ ವಾಸಸ್ಥಾನವಾಗಿದ್ದು ಜನರು ಇಲ್ಲಿ ಬರಲು ಹೆದುರುತ್ತಿದ್ದರಂತೆ. ಆಗ ಎಲ್ಲಮ್ಮಳೇ ಈ ಕ್ಷೇತ್ರಕ್ಕೆ ಬಂದು ಹುಲಿಗಳನ್ನು ಸಂಹರಿಸಿ ಅವುಗಳ ಅಧಿದೇವತೆಯಾಗಿ ಮೆರೆದಿರುವುದರಿಂದ; ಮತ್ತೊಂದು ಅಭಿಪ್ರಾಯದ ಪ್ರಕಾರ ಹುಲಿಯನ್ನೇ ತನ್ನ ಸಿಂಹಾಸನವನ್ನಾಗಿ ಮಾಡಿಕೊಂಡಿದ್ದರಿಂದ ಈಕೆ ಹುಲಿಗೆಮ್ಮಳಾದಳು ಎಂದು ಹೇಳಲಾಗಿದೆ.

ಪಾರ್ವತಿಯೇ ಇಲ್ಲಿ ಅವತಾರವಾಗಿ ಬಂದು ನೆಲೆಸಿದ್ದಾಳೆ ಅನ್ನುವುದು ಜನಗಳಿಂದ ತಿಳಿದುಬಂದಿದೆ. ಹುಲಿಗಿಯನ್ನು ಪುರೋಹಿತರು ವ್ಯಾಘ್ರಪುರಿ ಎಂದು ಕರೆದಿರಬಹುದು. ಏಕೆಂದರೆ ವ್ಯಾಘ್ರಪುರಿ ಎಂಬುದು ಹುಲುಗಿ ಎಂದು ಕರೆಯಲು ಅಸಾಧ್ಯ.

೬. ಹುಲಿಗೆಮ್ಮ ಹುಲಿಗಿಯಲ್ಲಿ ನೆಲೆಸಲು ತಾಯಿ ಮುದ್ದಮ್ಮಳು ಕಾರಣ. ಹುಲಿಗೆಮ್ಮನ ತಾಯಿಯಾದ ಮುದ್ದಮ್ಮನಿಗೆ ಹುಲಿಗೆಮ್ಮ ಹೊಸೂರಮ್ಮ ಎನ್ನುವ ಇಬ್ಬರು ಮಕ್ಕಳಿದ್ದರು. ತಾಯಿ ಮುದ್ದಮ್ಮಳು ಹೊಸೂರಮ್ಮಳಿಗೆ ಏನೇ ಕೊಟ್ಟರೂ ಬಟ್ಟೆ, ಬರೆ, ಇತರೆ ವಸ್ತುಗಳು ಏನೇ ಕೊಟ್ಟರೂ ಹೊಸೂರಮ್ಮ ಬಚ್ಚಿಟ್ಟುಕೊಳ್ಳುತ್ತಿದ್ದಳಂತೆ. ಆದರೆ ಹುಲಿಗೆಮ್ಮಳಿಗೆ ಏನೇ ಕೊಟ್ಟರೂ ಆಕೆ ತನ್ನ ಹತ್ತಿರ ಇಟ್ಟುಕೊಳ್ಳದೆ ಇತರರಿಗೆ ಹಂಚುತ್ತಿದ್ದಳಂತೆ. ಆದಕಾರಣ ಮುದ್ದಮ್ಮಳು ಸಿಟ್ಟಾಗಿ ಹುಲಿಗಿ ಕ್ಷೇತ್ರದಲ್ಲಿ ಬಂದು ನೆಲೆಸಿದಳಂತೆ. ಅಂದಿನಿಂದ ಹುಲಿಗೆಮ್ಮಳು ತನ್ನ ಭಂಡಾರದಿಂದ ಎಲ್ಲ ಭಕ್ತರನ್ನು ಪಡೆದು ಹುಲಿಗೆಮ್ಮಳಾದಳು ಎಂಬ ನಂಬಿಕೆ.

೭. ಹುಲಿಗೆಮ್ಮಳು ಹುಲಿಗಿಯಲ್ಲಿ ನೆಲೆಯೂರಲು ನಾಗಜೋಗಿ ಬಸವಜೋಗಿಯರೇ ಕಾರಣ ಎಂದು ಹೇಳಲಾಗಿದೆ. ಹುಲಿಗೆಮ್ಮ ಮೂಲತಃ ಸವದತ್ತಿಯ ಎಲ್ಲಮ್ಮನೇ ಎಂಬ ನಂಬಿಕೆ ಸಾರ್ವತ್ರಿಕವಾಗಿದೆ. ಸವದತ್ತಿಯ ಎಲ್ಲಮ್ಮನು ಹುಲಿಗಿಯಲ್ಲಿ ನೆಲೆ ನಿಲ್ಲಲು ಕಾರಣವಾದ ಈ ಕಥೆಯು ಈ ರೀತಿಯಾಗಿದೆ.

ಹಿಂದೆ ಹುಲಿಗಿಯಲ್ಲಿ ನಾಗಜೋಗಿ ಮತ್ತು ಬಸವಜೋಗಿ ಎಂಬಿಬ್ಬರು ಜೋಗಿಗಳಿದ್ದರು. ಇವರು ಎಲ್ಲಮ್ಮನ ನಿಷ್ಠಾವಂತ ಭಕ್ತರಾಗಿದ್ದರು. ಪ್ರತಿ ಹುಣ್ಣಿಮೆಗೆ ಇವರು ಹುಲಿಗಿಯಿಂದ ಸವದತ್ತಿಗೆ ಕಾಲು ನಡಿಗೆಯಲ್ಲಿ ಹೋಗಿ ಎಲ್ಲಮ್ಮನ ದರ್ಶನ ಮಾಡಿ ಬರುತ್ತಿದ್ದರು. ಎಲ್ಲಮ್ಮನಿಗೂ ಈ ಇಬ್ಬರು ಜೋಗಿ ಭಕ್ತರೆಂದರೆ ತುಂಬ ಇಷ್ಟ. ಒಮ್ಮೆ ಮಳೆಗಾಲದಲ್ಲಿ ಹುಣ್ಣಿಮೆಯ ಹಿಂದಿನ ದಿವಸ ನಾಗಜೋಗಿ ಮತ್ತು ಬಸವಜೋಗಿಯರು ಸವದತ್ತಿಗೆ ಹೊರಡುತ್ತಾರೆ. ಆದರೆ ಆ ದಿವಸ ಭಾರೀ ಮಳೆ ಸುರಿದು ತುಂಗಭದ್ರೆ ನದಿಯು ಉಕ್ಕಿ ಹರಿಯುತ್ತದೆ.

ಜೋಗಿಗಳಿಗೆ ನದಿಯನ್ನು ದಾಟಲಾಗುವುದಿಲ್ಲ. ಚಿಂತಿತರಾಗುತ್ತಾರೆ. ಇಡೀ ರಾತ್ರಿ ಹೊಳೆ ದಂಡೆಯಲ್ಲಿ ಕಳೆಯುತ್ತಾರೆ. ಉಧೋ.. ಉಧೋ... ಎಂಬ ಉದ್ಘೋಷ ಮಾಡುತ್ತಾ ಮರದಡಿಯೊಂದರಲ್ಲಿ ಇಡೀ ರಾತ್ರಿ ನಿಲ್ಲುತ್ತಾರೆ. ಗುಡುಗು ಸಿಡಿಲು ಮಿಂಚುಗಳಿಂದ ಮಳೆ ಇನ್ನಷ್ಟು ಜೋರಾಗುತ್ತದೆ. ನಿಲ್ಲುವ ಯಾವ ಸೂಚನೆಗಳೂ ಕಂಡುಬರಲಿಲ್ಲ. ದೇವಿಯ ದರ್ಶನದ್ದೇ ಅವರ ಬಯಕೆಯಾಗಿತ್ತು. ದೇವಿಯ ದರ್ಶನ ಪಡೆಯದೇ ಅವರು ಊಟ, ತಿಂಡಿ, ಪೂರೈಸುವ ಹಾಗಿರಲಿಲ್ಲ. ಎರಡು ದಿನಗಳು ಕಳೆದವು. ಹಸಿವಿನ ಬಾಧೆ ಒಂದೆಡೆಯಾದರೆ ಮತ್ತೊಂದೆಡೆ ಬಟ್ಟೆಗಳು ತೊಯ್ದು ಚಳಿಯ ಬಾಧೆ ಹೀಗಾಗಿ ಈ ಇಬ್ಬರು ತತ್ತರಿಸಿ ಹೋಗಿದ್ದರು.

ಮನದಲ್ಲಿ ದೇವಿಯನ್ನು ನೆನೆಯುತ್ತಾರೆ. ದೇವಿ ನಿನ್ನ ದರುಶನವಿಲ್ಲದೆ ಅನ್ನ ನೀರನ್ನು ಮುಟ್ಟಲಾರೆವು. ನಿನ್ನ ದರುಶನವಿಲ್ಲದೆ ಅನ್ನ ನೀರನ್ನು ಮುಟ್ಟಲಾರೆವು. ನಿನ್ನ ಕಾಣದಲೇ ಮರಳಲಾರೆವು, ನಮ್ಮ ಯಾವ ಪಾಪಕ್ಕಾಗಿ ನೀನಿಂದು ನಮಗೆ ಈ ಘೋರ ಶಿಕ್ಷೆ ನೀಡುತ್ತಿರುವಿ. ನೀನು ಯಾವ ಶಿಕ್ಷೆ ವಿಧಿಸಿದರೂ ಸರಿಯೇ, ನಿನ್ನ ಕರುಣೆ ಮಾತ್ರ ನಮ್ಮ ಮೇಲಿರಲಿ ಎಂದುಕೊಂಡರಂತೆ. ಕತ್ತಲೆಯ ಆ ಕರಾಳ ಛಾಯೆಯಲ್ಲಿಯೇ ಬೆಳಕೊಂದು ಗೋಚರಿಸಿತು. ಅಂತಹ ಬೆಳಕನ್ನು ನಿಜಜೀವನದಲ್ಲಿ ಯಾರು ಎಂದೂ ಕಂಡುದುದಿಲ್ಲ. ಆ ಅನಿವರ್ಚನೀಯ ಬೆಳಕಿನ ಮಧ್ಯದಲ್ಲಿ, ಸುಂದರ ಸುಕೋಮಲ ತೇಜೋಮಯ ತಾಯಿ ಕಾಣಿಸಿದಳು. "ಮಕ್ಕಳಿರಾ, ನಿಮ್ಮನ್ನು ಬಹಳಷ್ಟು ಕಷ್ಟಕ್ಕೀಡು ಮಾಡಿದೆ. ನಿಮಗದೆಷ್ಟು ತೊಂದರೆಯಾಯಿತೋ ಪಾಪ, ನೀವು ಇನ್ನು ಮೇಲೆ ಇಷ್ಟೆಲ್ಲಾ ತೊಂದರೆ ಪಟ್ಟುಕೊಂಡು ಗುಡ್ಡಕ್ಕೆ ಬರಬೇಕಾಗಿಲ್ಲ. ನಿಮ್ಮೂರಿನ ಶಿವಾಲಯದ ಪಶ್ಚಿಮದ ತಾಣದಲ್ಲಿ ಹರಿಹರ

ಬ್ರಹ್ಮಾದಿಗಳು ಪೂಜಿಸುವ ಶ್ರೀಚಕ್ರದೊರಕುವುದು. ಸಾಲಿಗ್ರಾಮ ರೂಪದಲ್ಲಿ ನನ್ನ ಮುಖವೂ ಗೋಚರಿಸುವುದು. ಅಲ್ಲಿಯೇ ನೀವು ಅವುಗಳನ್ನು ಪೂಜಿಸಿರಿ". ಅಲ್ಲಿ ನಾನು ಆವಿರ್ಭವಿಸುವೆ ಎಂದು ಆ ತಾಯಿ ಅಪ್ಪಣೆ ಪಡೆದು ಅಲ್ಲಿಂದ ಮರಳಿದ ಬಳಿಕ ನಡೆದ ವಿದ್ಯಾಮಾನಗಳನ್ನೆಲ್ಲ ಗುರು ಸೋಮನಾಥ ಭಟ್ಟರೆದುರು ಸವಿಸ್ತಾರವಾಗಿ ವರ್ಣಿಸಿದರು. ದೇವಿಯ ಅಪ್ಪಣೆಯಂತೆ ಶಿವಾಲಯದ ಪಶ್ಚಿಮ ದಿಕ್ಕಿನಲ್ಲಿ ಶ್ರೀ ಚಕ್ರ ಮತ್ತು ಸಾಲಿಗ್ರಾಮಗಳು ದೊರೆತವು.

ಅದೇ ಸ್ಥಳದಲ್ಲಿ ಚಿಕ್ಕದೇವಾಲಯ ಒಂದನ್ನು ನಿರ್ಮಿಸಲಾಯಿತು. ಅಲ್ಲದೆ ಶಾಸ್ತ್ರೋಕ್ತವಾಗಿ ವೇದ ಘೋಷಗಳೊಂದಿಗೆ ದೇವಿಯ ಪ್ರತಿಷ್ಠಾಪನೆ ಮಾಡಲಾಯಿತು. ಹುಲಿಗಿ ಗ್ರಾಮಕ್ಕೇನೇ ಆಕೆಯು ತಾಯಿಯಾದ್ದರಿಂದ ಆಕೆಯು ಹುಲಿಗೆಮ್ಮಳಾದಳು.

೫. ಹುಲಿಗೆಮ್ಮ ಅಣ್ಣನಾದಂತ ಮೈಲಾರಲಿಂಗನು ಈತನು ಎಲ್ಲಮ್ಮ ದೇವಿಯ ಅಣ್ಣ. ಇಲ್ಲಿ ಹುಲಿಗೆಮ್ಮನಿಗೂ ಅಣ್ಣನೆಂದೇ ಹೇಳಲಾಗುತ್ತದೆ. ಮೈಲಾರಲಿಂಗನ ಜಾತ್ರೆ ಕರ್ನಾಟಕದಲ್ಲಿಯೇ ಅತಿ ದೊಡ್ಡ ಜಾತ್ರೆ. ಒಮ್ಮೆ ಹುಲಿಗೆಮ್ಮಳು ಮೈಲಾರಲಿಂಗನ ಮದುವೆಗೆಂದು ಮೈಲಾರಕ್ಕೆ ಹೋದಾಗ ಈತನ ಹತ್ತಿರ ಖಂಡುಗದ ಭಂಡಾರವಿರುವುದನ್ನು ನೋಡಿ ಅಣ್ಣನ ಹತ್ತಿರ ಹೋಗಿ ಅಣ್ಣ ನನಗೆ ಸ್ವಲ್ಪ ನಿನ್ನ ಭಂಡಾರ ಕೊಡೆಂದು ಕೇಳಿದರೂ ಮೈಲಾರಲಿಂಗ ಕೊಡಲಿಲ್ಲವಂತೆ. ಎಷ್ಟು ಗೋಗರೆದರೂ ಕೊಡಲಿಲ್ಲವಾದ್ದರಿಂದ ಹುಲಿಗೆಮ್ಮ ಉಪಾಯ ಮಾಡುತ್ತಾಳೆ. ಮೈಲಾರಲಿಂಗನು ಸ್ನಾನಕ್ಕೆಂದು ಹೋದಾಗ ಹುಲಿಗೆಮ್ಮ ಭಂಡಾರವನ್ನು ಕದ್ದು ಓಡಿಕೊಂಡು ಬಂದು ಸುಸ್ತಾಗಿ ಹುಲಿಗಿ ಕ್ಷೇತ್ರದಲ್ಲಿ ಕೂರುತ್ತಾಳೆ. ಆ ಜಾಗವು ಈಕೆಗೆ ಚೆನ್ನಾಗಿ ಕಂಡಿದ್ದರಿಂದ ಇನ್ನು ಮೇಲೆ ಇದೆ ನನ್ನ ಕ್ಷೇತ್ರವಾಗಿ ಬೆಳೆಯಲಿ ಎಂದು ಭಂಡಾರವನ್ನು ಉಗ್ಗುತ್ತಾಳೆ. ಅಂದಿನಿಂದ ಹುಲಿಗೆಮ್ಮಳು ಈ ಕ್ಷೇತ್ರದಲ್ಲಿ ನೆಲೆಸಿದಳು ಎಂದು ಮೌಖಿಕವಾಗಿ ದೊರೆಯುವ ಕಥೆಯೊಂದು ವಿವರಿಸುತ್ತದೆ.

೬. ಹುಲಿಗೆಮ್ಮ ಅನ್ನುವ ಹೆಸರನ್ನು ಕ್ಷೇತ್ರಕಾರ್ಯಕ್ಕೆಂದು ಹೋದಾಗ ಲಕ್ಷ್ಮಿ ಎನ್ನುವ ಹುಡುಗಿಯು ಹೇಳಿದ ವಿವರಣೆಯಿದು. ಒಮ್ಮೆ ಹುಲಿಗೆಮ್ಮನನ್ನು ಒಬ್ಬ ರಾಕ್ಷಸ ಪೀಡಿಸುತ್ತಿದ್ದನಂತೆ. ಅವನು ಪದೇ ಪದೇ ಪೀಡಿಸುತ್ತಿದ್ದುದನ್ನು ಸಹಿಸಿಕೊಳ್ಳಲಾಗಿ ಸಿಟ್ಟಿನಿಂದ ಅವನನ್ನು ಸದೆಬಡಿಯಲು ಹೋದಾಗ ಉಗ್ರಳಾಗಿ ವ್ಯಾಘ್ರ ರೂಪ ತಾಳಿದಳಂತೆ. ಆ ರೂಪ ತಾಳಿದಾಗ ಆಕೆಯ ಮುಖದಲ್ಲಿ ಮೀಸೆಗಳು ಕಾಣಿಸಿದವಂತೆ. ಆ ಉಗ್ರರೂಪವನ್ನು ತಾಳಿದಾಗ ಈಕೆ ಅಂದಿನಿಂದ ಹುಲಿಗೆಮ್ಮಳಾದಳು ಎಂದು ಹೇಳುವರು. ಆದ್ದರಿಂದ ಇಂದಿಗೂ ಈಕೆಯ ಮುಖವನ್ನು ಅಲಂಕಾರಗೊಳಿಸಿದಾಗ ಮೀಸೆ, ಬಾಯಿ, ಕಿರೀಟ ಇತ್ಯಾದಿಗಳನ್ನು ಇಂದಿಗೂ ಹಾಕುತ್ತಾರೆ. ಹುಲಿಗೆಮ್ಮನ ಮೂಲ ಮೂರ್ತಿಯು ಒಂದು ದುಂಡಾದ ಕಲ್ಲಿನ ಶಿಲೆಯಂತೆ ಕಂಡುಬರುತ್ತದೆ. ಎರಡೂ ಕಣ್ಣುಗಳಲ್ಲಿ ಸಾಲಿಗ್ರಾಮಗಳನ್ನು ಇಟ್ಟಿರುವುದಾಗಿದೆ.

ಪೌರಾಣಿಕವಾಗಿ, ಜಾನಪದ ಹಿನ್ನೆಲೆಯಾಗಿ ಹೇಳುವುದಾದರೆ ಎಲ್ಲಮ್ಮನೇ ಹುಲಿಗೆಮ್ಮನ ರೂಪದಲ್ಲಿ ಹುಲಿಗಿಯಲ್ಲಿ ಪ್ರತ್ಯಕ್ಷಳಾಗಿದ್ದಾಳೆ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಇದು ಸಹಜವೂ ಹೌದು. ಪುರಾಣ ಕತೆಯು ಮತ್ಸ್ಯಪುರಾಣ, ವಾಯು ಪುರಾಣ, ಮಾರ್ಕಂಡೇಯ ಪುರಾಣ, ಸ್ಕಂದ ಪುರಾಣ ಮಾತ್ರವಲ್ಲದೆ ಸುಪ್ರಸಿದ್ಧವಾದ

ರಾಮಾಯಣ ಮಹಾಭಾರತಗಳಲ್ಲಿ ಉಪಲಬ್ಧವಿರುವ ಪರಶುರಾಮನ ಕಥೆಯೇ ಆಗಿದೆ. ಜಮದಗ್ನಿ-ರೇಣುಕ ಮತ್ತು ಪರಶುರಾಮರೇ ಇಲ್ಲಿನ ಮುಖ್ಯ ಪಾತ್ರಗಳು(ಹುಲಿಗೆಮ್ಮ : ಡಾ. ಪುರುಷೋತ್ತಮ ಬಿಳಿಮಲೆ : ಪುಟ ಸಂಖ್ಯೆ : ೪, ೫).

ಜಮದಗ್ನಿಯು ತಪಸ್ಸಿಗೆ ಕೂತಾಗ ಎಲ್ಲಮ್ಮಳಿಗೆ ನೀರು ತರಲು ಹೇಳುತ್ತಾನೆ. ಎಲ್ಲಮ್ಮಳು ಉಸುಗಿನಿಂದ ಕೊಡವನ್ನು ಮಾಡಿ ನೀರು ತುಂಬಿ ಹಾವಿನ ಸಿಂಬಿಯ ಮೇಲೆ ತಾನು ನೀರು ತರುತ್ತಿರುವಾಗ ಅಂದು ನದಿಯಲ್ಲಿ ಗಂಧರ್ವರಿಬ್ಬರು ಜಲಕ್ರೀಡೆಯಾಡುವುದನ್ನು ನೋಡಿ ಆಕೆಯ ಮನಃ ಚಂಚಲವಾಗುತ್ತದೆ. ಇದರಿಂದ ಈಕೆಯು ಮರಳಿನ ಕೊಡ ಒಡೆದು ಹೋಗುತ್ತದೆ. ತನ್ನ ಪತಿಯ ಹತ್ತಿರ ಹೋಗಿ ನಡೆದದ್ದನ್ನು ಹೇಳಿದಾಗ ಪತಿ ಜಮದಗ್ನಿ ಕುಪಿತನಾಗಿ ಕುಷ್ಠರೋಗ ಪೀಡಿತಳಾಗೆಂದು ಶಾಪ ಹಾಕುತ್ತಾನೆ. ಊರೂರು ಅಲೆಯುತ್ತಿದ್ದಾಗ ಆಕೆಯನ್ನು 'ಏಕನಾಥ -ಜೋಗಿನಾಥ' ಎಂಬಿಬ್ಬರು ಸಿದ್ಧರು ಕರುಣೆಯಿಂದ ನೋಡುತ್ತಾರೆ. ಮತ್ತೆ ಆಶ್ರಮಕ್ಕೆ ಹಿಂದಿರುಗಿದ ಆಕೆಯ ತಲೆಯನ್ನ ಕಡಿಯಲು ಜಮದಗ್ನಿ ಆಜ್ಞಾಪಿಸುತ್ತಾನೆ. ಪರಶುರಾಮ ಆಕೆಯ ತಲೆಯನ್ನು ಕಡಿದಾಗ ರಕ್ತವು ೨೧ ಸ್ಥಳದಲ್ಲಿ ಚಿಮ್ಮುತ್ತದೆ. ಆ ಸಿಡಿದ ರಕ್ತಗಳೇ ಹುಲಿಗೆಮ್ಮ, ಎಲ್ಲಮ್ಮ, ಬನಶಂಕರಮ್ಮ, ಹೀಗೆ ನಾನಾ ತರದಲ್ಲಿ ಮಾತೃದೇವತೆಗಳು ಹುಟ್ಟಿಕೊಂಡವು ಎಂಬ ನಂಬಿಕೆಯಿಂದ ಈ ಕ್ಷೇತ್ರದಲ್ಲಿ ಅಂದರೆ ಹುಲಿಗಿ ಕ್ಷೇತ್ರದಲ್ಲಿಯೂ ಆ ರಕ್ತದ ಹನಿಯಿಂದ ಈ ದೇವತೆ ಇಲ್ಲಿ ಹುಟ್ಟಿಕೊಂಡಳೆನ್ನಬಹುದು.

**ಹುಲಿಗೆಮ್ಮ ಅಂತ ಹೆಸರು ಬರಲು ಕಾರಣ**

೧. ಸೋಲಿಂಗನನ್ನು ಓಡಿಸುವುದರೊಂದಿಗೆ ಹುಲಿಗೆಮ್ಮ ಹುಲಿಗಿಯಲ್ಲಿ ನೆಲೆಯೂರಲು ಕಾರಣವಾಯಿತು. ಹುಲಿಗೆಮ್ಮ ಇಲ್ಲಿ ಬರುವುದಕ್ಕಿಂತ ಮುಂಚೆ ಮೊದಲು ಸೋಮಲಿಂಗನ ಗುಡಿಯಿತ್ತಂತೆ. ಒಂದು ದಿನ ಹುಲಿಗೆಮ್ಮ ಮುದುಕಿ ಅವತಾರದಲ್ಲಿ ಜೋರಾಗಿ ಮಳೆ ಸುರಿಯುತ್ತಿರುವ ಹೊತ್ತಿನಲ್ಲಿ ಬಂದು ಸೋಮಲಿಂಗನನ್ನು 'ಯಪ್ಪ ನನಗೀಟು ಜಾಗಕೊಡು' ಎಂದು ಕೇಳಿದರೂ ಸೋಮಲಿಂಗನು ಕೊಡುವುದಿಲ್ಲ.

ಬೆಳಗಾಗುವುದರೊಳಗೆ ಸೋಮಲಿಂಗನ ಗುಡಿಯ ತುಂಬ ಕುರಿಯ ತಲೆ ಕಾಲು ಯಲುಬುಗಳನ್ನಿರಿಸಿ ನೊಣಗಳು ಓಡಾಡುವ ಹಾಗೆ ಮಾಡುತ್ತಾಳೆ. ಇದನ್ನು ಸಹಿಸಲಾರದ ಸೋಮಲಿಂಗ ಬೆನ್ನು ಗೋಡೆಯ ಮೂಲಕ ಈ ಜಾಗವನ್ನು ಬಿಟ್ಟು ಓಡಿಹೋಗುತ್ತಾನೆ. ನಂತರ ಸೋಮಲಿಂಗ ಕಂಪ್ಲಿಯಲ್ಲಿ ನೆಲೆಸುತ್ತಾನೆ.

ಸೋಮಲಿಂಗನ ಜಾಗದಲ್ಲಿ ತಾನು ನೆಲೆ ನಿಲ್ಲುತ್ತಾಳೆ. ಹುಲಿಗೆಮ್ಮಳಾಗಿ ನೆಲೆ ನಿಲ್ಲುತ್ತಾಳೆ. ಅಂದಿನಿಂದ ಈ ಕ್ಷೇತ್ರ ಹುಲಿಗೆಮ್ಮನ ಕ್ಷೇತ್ರವಾಗಿ ಹುಲಿಗೆಮ್ಮ ದೇವಿ ಅಂತ ಹೆಸರು ಬರಲು ಕಾರಣವಾಯಿತೆನ್ನುವರು. ಈ ಕಥೆಗಳನ್ನೆಲ್ಲಾ ಗಮನಿಸುತ್ತಾ ಹೋದಂತೆಲ್ಲಾ ಹುಲಿಗಿ ಕ್ಷೇತ್ರವು ಸ್ಥಳದೊಂದಿಗೆ ಬಿತ್ತರಿಸಿದರೂ ಒಂದು ಹೆಣ್ಣಿನಿಂದಲೇ ಈ ಗ್ರಾಮವು ಸೃಷ್ಟೀಕರಣ ಆಯಿತೆನ್ನಬಹುದು.

ಮಾತೃದೇವತಾ ಕಲ್ಪನೆ ಬಹಳ ಹಳೆಯದು. ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಒಂದು ಘಟ್ಟದಲ್ಲಿ ಮಹಿಳಾ ಪ್ರಧಾನ ವ್ಯವಸಾಯವಿತ್ತು. ಆಗ ಹೆಣ್ಣು ಕೇವಲ ಜೀವ ಸೃಷ್ಟಿಯಾಗಿ ಆಹಾರ ಸರಬರಾಜು ಮಾತ್ರವಲ್ಲದೆ ಫಲವಂತಿಕೆಯ ಪ್ರಮುಖ ಪ್ರತಿನಿಧಿಯಾಗಿದ್ದಳು.

ಬೆಳೆಕೊಡುವುದರಿಂದ ಭೂಮಿ, ಭೂದೇವಿಯಾದಂತೆ ಜನ್ಮಧಾತೆಯಾದ ಜನನಿಗೂ ಶಕ್ತಿಯ ರೂಪವನ್ನು ಆದಿಮಾನವ ಕೊಟ್ಟುಕೊಂಡನು. ತನಗೆ ಲಾಭಕಾರಿಯಾದ ಸೂರ್ಯ, ಚಂದ್ರ, ಚುಕ್ಕಿ, ಹೊಳೆ, ಗಿಡ, ಬಳ್ಳಿ, ಭೂಮಿಯನ್ನು ಆರಾಧಿಸುವಂತೆ ತನಗೆ ಜನ್ಮಕೊಟ್ಟು ಹಾಲು ಕುಡಿಸಿ ಸಲಹುವ ಹೆಣ್ಣಿಗೂ ಶಕ್ತಿಯ ರೂಪದಲ್ಲಿ ಆರಾಧನೆ ಆರಂಭಿಸದನು.

ಪಿತೃಪ್ರಧಾನ ಸಂಪ್ರದಾಯವಿದ್ದ ಆರ್ಯರು ಭಾರತಕ್ಕೆ ಬರುವವರೆಗೂ ಇಲ್ಲಿರುವ ದ್ರಾವಿಡ ಜನ ಹೆಣ್ಣನ್ನೇ ತಮ್ಮ ಕುಟುಂಬದ ಒಡತಿಯನ್ನಾಗಿ ಮಾಡಿಕೊಂಡು ಆಕೆಯನ್ನು ಆರಾಧನೆ ಮಾಡುತ್ತಿದ್ದ ಬಗ್ಗೆ ಚರಿತ್ರೆಯಿಂದ ತಿಳಿದು ಬರುತ್ತದೆ. ಅಮ್ಮ ಶಬ್ದಕ್ಕೆ ಉಪಸರ್ಗಗಳಾಗಿ ದೇವಿಯ ಹೆಸರು ಸೇರಿಸಿ ಹೇಳುತ್ತಾರೆ. ಹೆಣ್ಣು ಜೀವೋತ್ಪತ್ತಿಯ ಮೂಲಶಕ್ತಿಯಾಗಿದ್ದಳು. ಮಾತೃಪ್ರಧಾನ ವ್ಯವಸ್ಥೆ ಪ್ರಪಂಚದ ಉಳಿದ ಭಾಗಗಳಿಗಿಂತ ಭಾರತದಲ್ಲಿ ಹೆಚ್ಚು ಪ್ರಭಾವಯುತವಾಗಿತ್ತೆಂದು ವಿದ್ವಾಂಸರ ಅಭಿಮತ. ಆದಿಶಕ್ತಿ ಚಿರಕನ್ಯೆಯೆಂದೂ ಗರ್ಭಧರಿಸಿದೆ ದೇವರುಗಳನ್ನು ಜನರನ್ನು ಸೃಷ್ಟಿಸಿದಳೆಂದೂ ಹೇಳಬಹುದು.

ಹುಲಿಗೆಮ್ಮ ಹೊಸೂರಮ್ಮಳಿಂದಲೋ, ಮುದ್ದಮ್ಮಳಿಂದಲೋ ಅಥವಾ ಸೋಮಲಿಂಗನನ್ನು ಹೊಡೆದೋಡಿಸುವುದರಿಂದಲೋ, ಮೈಲಾರಲಿಂಗನ ಭಂಡಾರ ಕದ್ದು ಓಡಿ ಬಂದು ಇಲ್ಲಿ ನೆಲೆಸಿರುವುದರಿಂದಲೋ, ಹುಲಿಗಳನ್ನು ಸಂಹಾರ ಮಾಡಿ, ಹುಲಿಯನ್ನೇ ತನ್ನ ಸಿಂಹಾಸನವನ್ನಾಗಿಸಿಕೊಂಡು ಹುಲಿಗೆಮ್ಮಳಾದಳು. ಈ ಎಲ್ಲಾ ಐತಿಹ್ಯ, ಕಥೆಗಳು ನಮಗೆ ಈಕೆಯ ಹೆಸರು ಮತ್ತು ಸ್ಥಳದ ಬಗ್ಗೆ ಅಗಾಧವಾದ ವಿಚಾರವನ್ನು ಕಲ್ಪಿಸುತ್ತವೆ.

ಈ ಎಲ್ಲಾ ಕಥೆಗಳ ಹಿನ್ನೆಲೆಯನ್ನು ಗಮನಿಸಿದಾಗ ಹೆಣ್ಣು ಮತ್ತು ಭೂಮಿಯ ಸಮೀಕರಣ ಈ ಜಾಗದಲ್ಲಿ ಸೃಷ್ಟಿಯಾಯಿತೆನ್ನಬಹುದು. ಅಂದರೆ ಈ ಎಲ್ಲಾ ಕಥೆಗಳ ಚಹರೆ ಒಂದು ಹೆಣ್ಣೇ ಎಂದು ಗುರುತಿಸುತ್ತಾ ಹೋಗುತ್ತದೆ. ಹೆಣ್ಣಿನಿಂದಲೇ ಈ ಗ್ರಾಮ ಸೃಷ್ಟಿಯಾಗುವುದಲ್ಲದೆ ತನ್ನ ಪ್ರತಿನಿಧೀಕತ್ವದ ಸಂಕೇತವನ್ನು ಇಲ್ಲಿ ಸೂಚಿಸುತ್ತದೆ.

ಸೋಮಲಿಂಗನನ್ನು ಓಡಿಸುವುದು ಒಂದು ಪ್ರತಿನಿಧೀಕತ್ವದ ಸಂಕೇತ ಎಂದು ಹೇಳಬಹುದು. ಯಾಕೆಂದರೆ ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಹೆಣ್ಣು ಶೋಷಣೆಗೊಳಪಡುತ್ತಿರುವಂತ ಸಮಯದಲ್ಲಿ ಹುಲಿಗೆಮ್ಮಳು ಸೋಮಲಿಂಗನನ್ನು ತನ್ನ ತಂತ್ರಗಳಿಂದ ಓಡಿಸಿ ತನ್ನ ಸ್ಥಾನವನ್ನು ಇಲ್ಲಿ ಸ್ಥಾಪಿಸುವುದು ಹುಲಿಗೆಮ್ಮನ ಪ್ರಾತಿನಿಧೀಕತ್ವವೆಂದರೂ ಒಂದು ಹೆಣ್ಣಿನ ಪ್ರಾತಿನಿಧಿಕತ್ವ ಅಂತಲೇ ಹೇಳಬಹುದು.

ಇನ್ನು ಮಹಿಳೆ ದೇವರಾಗಿರುವಂತದ್ದು. ಇಲ್ಲಿ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡಿದಾಗ ಪ್ರಕೃತಿ ಸಂಕೇತವಾಗಿ ಸೂಚಿತವಾಗುವುದು. ಅಂದರೆ ಒಂದು ಹೆಣ್ಣು ಬಂದು ಇಲ್ಲಿನ ಹುಲಿಗಳನ್ನೆಲ್ಲಾ ಸಂಹರಿಸುವುದರ ಜೊತೆಗೆ ಜನರನ್ನು ಕಾಪಾಡುವುದು ಅಲ್ಲದೆ ಸಿದ್ಧರನ್ನು ಕೊಲ್ಲುವುದು ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸಾಮಾನ್ಯ ಮನುಷ್ಯರಿಗೆ ಇರದ ಶಕ್ತಿ ಗಂಡಿಗೂ ಮತ್ತು ಹೆಣ್ಣಿಗೂ ಇರದ ಒಂದು ಅಗೋಚರ ಶಕ್ತಿ ಈ ಹುಲಿಗೆಮ್ಮನಲ್ಲಿ ಕಂಡುಕೊಳ್ಳುವುದರ ಮೂಲಕ ಈಕೆಯನ್ನು ದೈವತ್ವದ ಸ್ಥಾನಕ್ಕೇರಿಸುವುದು ಮತ್ತು ಈ ಒಂದು ಶಕ್ತಿಯಿಂದಲೇ ಈಕೆ ದೇವರಾಗಿರಬಹುದು ಎನ್ನಬಹುದು.

ಹುಲಿಗಿಯಲ್ಲಿರುವ ಅಮ್ಮನಾಗಿ ಹುಲಿಗೆಮ್ಮ ಪ್ರಸಿದ್ಧಳಾಗಿದ್ದಾಳೆ. ಹುಲಿಗಿ ಸ್ಥಳದೊಂದಿಗೆ ಈ ದೈವವು ಸಮನ್ವಯಗೊಂಡಿರುವುದರಿಂದ ಬೇರೆ ಪ್ರದೇಶದಲ್ಲಿ ಈ ದೈವವು ಇರಲು ಸಾಧ್ಯವಿಲ್ಲ. (ಹುಲಿಗೆಮ್ಮ : ಡಾ. ಪುರುಷೋತ್ತಮ ಬಿಳಿಮಲೆ : ಪುಟ ಸಂಖ್ಯೆ ೨).

ಹುಲಿಗೆಮ್ಮನ ಸ್ವರೂಪವನ್ನು ಗಮನಿಸುವಾಗ ಆಕೆಯ ಶಿಕ್ಷಕ ಮತ್ತು ರಕ್ಷಕ ಗುಣಗಳೆರಡೂ ನಮಗೆ ಎದ್ದು ಕಾಣುತ್ತವೆ. ಒಳ್ಳೆಯವರನ್ನು ಸಂರಕ್ಷಿಸುವ ಹೊಣೆಗಾರಿಕೆ ಆಕೆಗಿದೆ. ಆಕೆ ದುಷ್ಟರನ್ನು ನಿರ್ನಾಮ ಮಾಡುವ ಶಕ್ತಿಯೂ ಹೌದು. ಇದಕ್ಕೆ ಉದಾಹರಣೆಯಾಗಿ ನೋಡುವುದಾದರೆ, ಸಿದ್ಧ ಸಂಪ್ರದಾಯವನ್ನು ಕುರಿತು ಹೇಳಬಹುದು. ಹುಲಿಗೆಮ್ಮ ದುಷ್ಟರಾದ ಹಲವು ಜನ ಸಿದ್ಧರನ್ನು ತಲೆಗೆ ಮಳೆ ಹೊಡೆದು ನಾಶಮಾಡಿದಳೆಂದು ಹೇಳಿಕೆಯಿದೆ. ಲಭ್ಯ ಇರುವ ಒಂದು ಜನಪದ ಹಾಡು ಇಂತಿದೆ.

ಮುನ್ನೂರರು ಮತ್ತು ಸಿದ್ಧರು ಗುಡ್ಡದಾಗ
ಆಳ್ವಿಕೆ ಮಾಡ್ಯಾರೋ ಬಲ್ಲಂಗ
ಚಕ್ರಹತಿಯವತಯ್ಯಾರ ಮಾಡ್ಯಾಳ್ಯಾಗ
ಸಿದ್ಧರ ಹೊಡೆದಾಳೋ ಕ್ಷಣದಾಗೆ
ದೈತ್ಯರನ ಹೊಡೆದಾಳೋ ಗಳಿದಾಗ

ಇದರ ಪ್ರಕಾರ ೩೬೦ ಸಿದ್ಧರನ್ನು ಹುಲಿಗೆಮ್ಮ ಕೊಂದಳೆಂದು ಹೇಳಲಾಗಿದೆ. ವಾಸ್ತವವಾಗಿ ಇದು ಮಧ್ಯಕಾಲೀನ ಕರ್ನಾಟಕದಲ್ಲಿ ತಾಂತ್ರಿಕ ಸಿದ್ಧರಿಗೂ ಶಕ್ತಿ ಪಂಥದವರಿಗೂ ನಡೆದ ಸಂಘರ್ಷವನ್ನು ಸಂಕೇತಿಸುವಂತಿದೆ (ಹುಲಿಗೆಮ್ಮ : ಡಾ. ಪುರುಷೋತ್ತಮ ಬಿಳಿಮಲೆ : ಪುಟ ಸಂಖ್ಯೆ ೨). ಈಕೆ ಸಿದ್ಧರನ್ನು ಸಂಹರಿಸುವುದರ ಜೊತೆಗೆ ಊರನ್ನು ಸಂರಕ್ಷಿಸುವ ದೇವತೆಯಾಗಿದ್ದಾಳೆ. ಅಲ್ಲದೆ ನಮಗೆಲ್ಲಾ ರಕ್ಷಾಕವಚವಾಗಿದ್ದಾಳೆ, ನಮ್ಮೆಲ್ಲಾ ಭಯವನ್ನು ಹೋಗಲಾಡಿಸುವ ದೇವತೆಯಾಗಿದ್ದಾಳೆ ಎಂದು ನಂಬಿರುವ ಜನರಿಗೆ ಈಕೆ ದೇವರಾಗಿ ಕಾಣಿಸಿಕೊಂಡಿರಬಹುದು. ಅಲ್ಲದೆ ಈಕೆಯ ಮೆಚ್ಚುಗೆಗೆ ಸಾಮಾನ್ಯ ಜನರು ಈಕೆಗೆ ದೈವತ್ವದ ಸ್ಥಾನಕೊಟ್ಟು ಆಕೆಯನ್ನು ದೇವತೆಯಾಗಿ ಕಂಡಿರಬಹುದು. ಅಂದಿನಿಂದ ಹುಲಿಗೆಮ್ಮಳಾಗಿರಬಹುದು ಎಂದು ಹೇಳಬಹುದು.

ಆದಿಮ ಮಾನವನು ನಿಸರ್ಗದೊಂದಿಗೆ ಸಂಘರ್ಷಕ್ಕೆ ಬಿದ್ದಾಗ ಮಾಂತ್ರಿಕಾಚರಣೆಗಳ ಉಗಮವಾಯಿತು. ತಾನು ಜಯಿಸಬೇಕಾಗಿದೆ ಎಂದುಕೊಂಡು ನಿಸರ್ಗದ ಶಕ್ತಿಗಳನ್ನು ಮಣಿಸಲು ಹಾಗೂ ಒಲಿಸಿಕೊಳ್ಳಲು ಮಾನವನ ಆರಂಭಿಕ ತರ್ಕ ಏನೇನೋ ಹಾದಿಗಳನ್ನು ಸೂಚಿಸಿತೋ ಅವೆಲ್ಲವು ಆಚರಣೆಗಳಾಗಿ ರೂಪುಗೊಂಡವು. ಇಂತಹ ಆಚರಣೆ ಮತ್ತು ನಂಬಿಕೆಯ ಮೂಲಕವೇ ದೈವಗಳ ಬಗೆಗಿನ ಪರಿಕಲ್ಪನೆ ಬೆಳೆದು ಬಂದಿತು. ದೈವಗಳ ಬಗೆಗಿನ ಪರಿಕಲ್ಪನೆ ಮನುಷ್ಯನ ಮನಸ್ಸಿನಲ್ಲಿ ಯಾವಾಗ ಪ್ರಾರಂಭವಾಯಿತೆಂಬುದು ಮುಖ್ಯವಾದ ಸಂಗತಿ. ಈ ದೈವಗಳ ಹುಟ್ಟಿಗೆ ಮನುಷ್ಯನಲ್ಲಿದ್ದ ಭಯವೇ ಮೂಲಕಾರಣವಾಗಿದೆ.

ಆದಿಮಾನವನಿಗೆ ಪ್ರಕೃತಿಯ ಬದಲಾವಣೆಗಳು ಆಶ್ಚರ್ಯವನ್ನುಂಟು ಮಾಡಿರಬೇಕು. ಗುಡುಗು, ಮಿಂಚು, ಹರಿಯುವ ನೀರು, ಸುಡುವ ಬೆಂಕಿ ಇವೇ ಮೊದಲಾದ ಪ್ರಕೃತಿಯ ಚಮತ್ಕಾರಗಳು ಆದಿಮಾನವನಿಗೆ ಭಯವನ್ನುಂಟುಮಾಡಿರಬೇಕು. ಇಂತಹ ಪ್ರಕೃತಿಯ ವಿಕೋಪಗಳಿಂದ ಪಾರಾಗಲು ಆತ ಪ್ರಕೃತಿಯಲ್ಲಿಯ ಮರ-ಗಿಡಗಳನ್ನು, ನೆಲ-ಜಲವನ್ನು, ಸೂರ್ಯ-ಚಂದ್ರರನ್ನು ದೈವವೆಂದು ಪೂಜಿಸಿರಬೇಕು. ಈ ಹಿನ್ನೆಲೆಯಲ್ಲಿ ನೋಡಿದರೆ ಮಾನವನ ಹುಟ್ಟಿನಿಂದಲೇ ದೈವಗಳ ಬಗೆಗಿನ ಪರಿಕಲ್ಪನೆ ಪ್ರಾರಂಭವಾಗಿದೆಯೆನ್ನಬಹುದು. ಪ್ರಕೃತಿಯಲ್ಲಿ ನಡೆಯುವ ಎಲ್ಲ ಘಟನೆಗಳಿಗೆ ಯಾವುದೋ ಒಂದು ಶಕ್ತಿ ಕಾರಣವಿರಬೇಕೆಂದು ನಂಬಿದ್ದ ಮನುಷ್ಯ, ಆ ಶಕ್ತಿಯನ್ನೇ ದೈವವೆಂದು ತಿಳಿದು ಪೂಜಿಸತೊಡಗಿದ. ಹೀಗೆ ವ್ಯಕ್ತಿಯಿಂದ ವ್ಯಕ್ತಿಗೆ ಸಮಾಜದಿಂದ ಸಮಾಜಕ್ಕೆ ದೈವಗಳ ಗ್ರಹಿಕೆಯಲ್ಲಿ ಭಿನ್ನತೆ ಕಾಣಿಸಿದ್ದರಿಂದ ಭಿನ್ನ-ಭಿನ್ನ ಹೆಸರಿನ ದೈವಗಳು ಹುಟ್ಟಲು ಕಾರಣವಾಗಿದೆ.

ಪ್ರಸ್ತುತ ಅವು ನಮ್ಮ ಕಣ್ಣೆದುರಿಗಿರುವಾಗ ಬೇಕಾದಷ್ಟು ಸಂಕೀರ್ಣಗೊಂಡಿರಬಹುದು. ರೂಪಾಂತರ ಹೊಂದಿರಬಹುದು. ಆದರೆ ಅವುಗಳ ಉಗಮದ ಅಧ್ಯಯನದಲ್ಲಿ ಈ ಮೂಲ ಪ್ರೇರಣೆಗಳ ಎಳೆಗಳನ್ನಂತೂ ಹಿಡಿಯಬಹುದು. ಅವು ಇನ್ನೂ ಉಳಿದುಕೊಂಡು ಬಂದಿರುವ ಸಂದರ್ಭದಲ್ಲಿ ಹಳೆಯ ಜೀವನ ಪರಿಸ್ಥಿತಿಗಳ ಪ್ರಜ್ಞೆಯ ವಿಕಾಸದ ಪಳೆಯುಳಿಕೆಗಳನ್ನು ಅರ್ಥಮಾಡಿಕೊಳ್ಳಬಹುದು.

ದೇವರುಗಳ ಜಗತ್ತು ಅತ್ಯಂತ ಸಂಕೀರ್ಣವಾದುದು. ಈ ಜಗತ್ತಿನ ಸಾಂಸ್ಕೃತಿಕ ಮುಖ ಒಂದಾದರೆ ಸಾಮಾಜಿಕ ಮುಖ ಇನ್ನೊಂದು. ಇವೆರಡನ್ನು ಒಟ್ಟಾಗಿ ಇಟ್ಟೇ ನಾವು ನೋಡಬೇಕಾಗುತ್ತದೆ. ದೇವರು ಸೃಷ್ಟಿಯಾದದ್ದು ಹೇಗೆ? ಇದೊಂದು ಜಟಿಲ ಪ್ರಶ್ನೆ. ಲಕ್ಷಾಂತರ ವರ್ಷಗಳ ಮಾನವನ ಇತಿಹಾಸದಲ್ಲಿ ನಿರಂತರವಾಗಿ ವಿಕಾಸ ಹೊಂದುತ್ತಾ ಬಂದ ಅವನ ಪ್ರಜ್ಞೆ ಇವತ್ತಿಗೂ ಅದೇ ವಿಕಾಸದ ಹಾದಿಯಲ್ಲೇ ಇದೆ. ಮೆದುಳು ಬೆಳೆಯುತ್ತಾ

ಹೋದಂತೆ ಅವನ ಪ್ರಜ್ಞೆ ಕೂಡ ಹಲವು ಹಂತಗಳಲ್ಲಿ ವಿಕಸಿಸುತ್ತಾ ನಡೆದಿದೆ. ಆದ್ದರಿಂದ ಸಾಂಸ್ಕೃತಿಕವಾಗಿ ಇವೊತ್ತು ನಮ್ಮ ಕಣ್ಣಮುಂದಿರುವ ಯಾವುದೇ ಅಂಶವು ದಿಢೀರನೆ ಅವತರಿಸಿದ್ದಂತೂ ಅಲ್ಲ.

ಮನುಷ್ಯ ಎರಡು ಕಾರಣಕ್ಕೆ ದೇವರನ್ನು ಕಲ್ಪಿಸಿಕೊಂಡ ಎಂಬ ವಾದಗಳಿವೆ. ಪ್ರಕೃತಿಯ ಎಲ್ಲ ವೈಚಿತ್ರ್ಯಗಳನ್ನು ಬಿಡಿಸಲಾರದ ನಿಗೂಢಗಳನ್ನು ಗಮನಿಸಿದ ಆದಿಮ ಮನುಷ್ಯ ತನ್ನನ್ನೂ ಮೀರಿದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿದ. ಆ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನ್ನ ಒಳಿತನ್ನು ಸಾಧಿಸಿಕೊಳ್ಳಬೇಕು ಎಂಬುದು ಅವನ ಉದ್ದೇಶವಾಯಿತು. ಯಾಕೆಂದರೆ ನಿಸರ್ಗದ ಒಡಲಲ್ಲಿ ಬಾಳುತ್ತಿದ್ದ ಅವನಿಗೆ ಸಹಜವಾಗಿಯೇ ನೂರೆಂಟು ಕಂಟಕಗಳು ಎದುರಾಗುತ್ತಿದ್ದವು. ಆದ್ದರಿಂದ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನಗೆ ಒದಗುವ ಕಂಟಕಗಳಿಂದ ಪಾರಾಗಬೇಕು ಎಂಬುದು ಅವನ ತರ್ಕವಾಗಿತ್ತು. ಹೀಗಾಗಿ ಆರಂಭದ ಅವನ ಕಲ್ಪನೆಯ ಹಿಂದೆ ತಾನು ದೇವರ ಕೃಪೆಯಿಂದ ದೊಡ್ಡವನಾಗಬೇಕು, ಸಂಪಾದಿಸಬೇಕು ಎಂಬ ಸ್ವಾರ್ಥಕ್ಕಿಂತ, ತನಗೆ ಒದಗುವ ಕಷ್ಟಗಳಿಂದ ಪಾರಾಗಬೇಕು ಎಂಬ ಸಹಜ ಉದ್ದೇಶವಿತ್ತು. ಆದ್ದರಿಂದ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಬಗೆ ಹೇಗೆ? ಅವನು ಎರಡು ರೀತಿಯಲ್ಲಿ ದೈವವನ್ನು ಅಥವಾ ಆ ಶಕ್ತಿಯನ್ನು ಗೆಲ್ಲುವ ಪ್ರಯತ್ನ ಮಾಡಿದ.

೧. ಮಾಟದ ಮೂಲಕ ನಿಯಂತ್ರಿಸುವುದು. ೨. ಆರಾಧನೆಯ ಮೂಲಕ ಒಲಿಸಿಕೊಳ್ಳುವುದು.

ಮಾಟದ ಮೂಲಕ ಅಗೋಚರ ಶಕ್ತಿಯನ್ನು ನಿಯಂತ್ರಿಸಿ ತನ್ನ ಕಂಟಕಗಳನ್ನು ದೂರಮಾಡಿಕೊಳ್ಳುವ ಕಲ್ಪನೆ ಆದಿಮಾನವನದ್ದು. ಈ ಮಾಂತ್ರಿಕತೆಯೇ ಮುಂದೆ ವಿಜ್ಞಾನವಾಗಿ ಬೆಳೆಯಿತು ಎಂಬುದು ಅನೇಕ ಮಾನವ ಶಾಸ್ತ್ರಜ್ಞರ ವಾದ. ಮಾಂತ್ರಿಕ ಮನಸ್ಸು ವಿಜ್ಞಾನವನ್ನು ಬೆಳೆಸಿತು ಎಂಬುದು ನಿಜ. ಆದರೆ ಈ ಮಾಂತ್ರಿಕತೆ ಪೂರಾ ವಿಜ್ಞಾನವಾಗಿ ಪರಿವರ್ತನೆಯಾಗಲಿಲ್ಲ. ಮಾಂತ್ರಿಕ ರೂಪದ ಅನೇಕ ಆಚರಣೆಗಳು ಹಾಗೇ ಉಳಿದು ಬಂದವು. ಅವು ಅನೇಕ ಆಚರಣಾ ಕ್ರಿಯೆಗಳ ರೂಪದಲ್ಲಿ, ಕಲೆಗಳ ರೂಪದಲ್ಲಿ, ವಿಧಿ-ನಿಷೇಧಗಳ ರೂಪದಲ್ಲಿ, ಇಂದಿಗೂ ನಮ್ಮ ಜನಪದ ಜೀವನದಲ್ಲಿ ಉಳಿದು ಬಂದಿವೆ.

ನಿರ್ದಿಷ್ಟ ದೇವರು ಅಥವಾ ನಿರ್ದಿಷ್ಟ ಧರ್ಮ ಉದಯಿಸುವ ಮೊದಲು ಮನುಷ್ಯ ನಿಸರ್ಗದ ಅನೇಕ ಸಚರಾಚರ ಪ್ರಾಣಿ ಸಮುದಾಯಗಳಲ್ಲಿ ತಾನೂ ಒಬ್ಬನಾಗಿ ಬದುಕುತ್ತಿದ್ದ. ಗುಂಪು ಗುಂಪುಗಳಲ್ಲಿ ವಾಸಿಸುತ್ತಿದ್ದ ಅವರಿಗೆ, ತಮ್ಮ ತಮ್ಮ ಗುಂಪುಗಳ ಗುರುತು ಹೇಳಿಕೊಳ್ಳಲು ಏನಾದರೂ ಆಧಾರ ಬೇಕಾಗಿತ್ತು. ಆಯಾ ಪ್ರದೇಶದಲ್ಲಿ ತಮ್ಮನ್ನು ಪ್ರಭಾವಿಸಿದ ಪ್ರಾಣಿ, ಸಸ್ಯ, ನದಿ, ಬೆಟ್ಟ ಅಥವಾ ವಸ್ತುವಿನ ಹೆಸರನ್ನು ತಮ್ಮ ತಮ್ಮ ಗುಂಪಿನ ಲಾಂಛನವನ್ನಾಗಿ ಅವರು ಇಟ್ಟುಕೊಂಡರು. ಮುಂದೆ ಇದೇ ಅವರ ಕುಲಚಿಹ್ನೆಯಾಯಿತು. ಅಂದರೆ ಕುಲಚಿಹ್ನೆ ಅವರನ್ನು ಅವರು ಗುರುತಿಸಿಕೊಳ್ಳುವ ಸಾಧನವಾಗಿತ್ತೇ ಹೊರತು, ದೈವವಾಗಿರಲಿಲ್ಲ. ಆದರೆ ಬರುಬರುತ್ತಾ ಆಯಾ ಗುಂಪುಗಳಲ್ಲಿ ಬಲಾಢ್ಯ ಮತ್ತು ದುರ್ಬಲ ಎಂಬ ಗುಂಪುಗಳಾದವು. ಒಂದು ಮತ್ತೊಂದನ್ನು ನಿಯಂತ್ರಿಸ ಬಯಸಿತು. ಸಮಾಜದಲ್ಲಿ ತನ್ನ ಸ್ಥಾನವನ್ನು ಮೇಲೇರಿಸಿಕೊಂಡ ಲಾಂಛನ ಇತರರಿಗೂ ಅನುಸರಿಸಬೇಕಾದ ಅಥವಾ ಗೌರವಿಸಬೇಕಾದ ಸಂಗತಿಯಾಯಿತು. ಹೀಗೆ ಗೌರವಿಸಲ್ಪಟ್ಟ ಲಾಂಛನವೇ ಮುಂದೆ

ದೈವವಾಗಿ ರೂಪು ಪಡೆದಿರಬೇಕು ಎಂಬುದು ಅನೇಕ ವಿದ್ವಾಂಸರ ಅಭಿಪ್ರಾಯ. ಆದರೆ ಹೀಗಿರುವ ದೈವಗಳ ಸಂಖ್ಯೆ ವಿರಳ. ಏಕೆಂದರೆ ಇದಕ್ಕೂ ಮುಂಚೆ ಸ್ವಲ್ಪ ಗಮನಿಸಿದರೆ ಹಳೇ ಶಿಲಾಯುಗದ ಕಾಲದಿಂದ ಆರಂಭವಾಗಿ ಹೊಸ ಶಿಲಾಯುಗ ಮತ್ತು ಕಂಚಿನ ಯುಗದಲ್ಲಿ ನಮಗೆ ಅನೇಕ ರೀತಿಯ ದೇವರುಗಳ ಮೂರ್ತಿಗಳು ಸಿಕ್ಕಿವೆ. ಗುಹೆಗಳಲ್ಲಿ ಮತ್ತು ಬಂಡೆಗಳ ಮೇಲೆ ಕೆತ್ತಿದ ಅನೇಕ ಆಕೃತಿಗಳು ದೊರಕಿವೆ. ದೇವರುಗಳ ಅಸ್ತಿತ್ವ ಅಷ್ಟು ಪ್ರಾಚೀನದಲ್ಲಿಯೇ ಇತ್ತು ಎಂಬುದಕ್ಕೆ ಅನೇಕ ಆಧಾರಗಳನ್ನು ಪುರಾತತ್ವಶಾಸ್ತ್ರಜ್ಞರು ನಿರೂಪಿಸಿದಾರೆ. ಹರಪ್ಪಾ ಮತ್ತು ಮಹಂಜದಾರೋ ಉತ್ಖನನದಲ್ಲಿ ಅನೇಕ ದೇವತೆಯರ ಆಕೃತಿಗಳು ಲಭ್ಯವಾಗಿವೆ. ಭಾರತದ ಪ್ರಾಚೀನ ಪರಂಪರೆಯಲ್ಲಿ ಕಂಡು ಬರುವ ಬಹುತೇಕ ದೇವುರಗಳಲ್ಲಿ ಪ್ರಮುಖ ಸ್ಥಾನ ಮಾತೃ ದೇವತೆಯರದ್ದು. ಎಲ್ಲೆಲ್ಲಿಯೂ ಮಾತೃವೇ ಮುಖ್ಯ. ಬಹುಶಃ ಭಾರತದಲ್ಲಷ್ಟೇ ಅಲ್ಲ ಇಡೀ ಜಗತ್ತಿನ ದೈವಕಲ್ಪನೆಯಲ್ಲಿಯೂ ಮಾತೃವಿಗೇ ಪ್ರಥಮ ಸ್ಥಾನ. ದೇವರುಗಳ ಸೃಷ್ಟಿಯಲ್ಲಿ ಮುಖ್ಯವಾಗಿ ನಾಲ್ಕು ಹಂತಗಳನ್ನು ಗುರುತಿಸಬಹುದು. ಮನುಷ್ಯ ನಾಗರೀಕನಾಗಲು ಹವಣಿಸಿದ ಮೊದಲ ಘಟ್ಟ ಆಹಾರ ಸಂಗ್ರಹಣೆ. ಅಂದರೆ ತನಗೆ ಬೇಕಾದ ಅಗತ್ಯ ವಸ್ತುಗಳನ್ನು ಅರಸುತ್ತಾ ಕಾಡಿನಿಂದ ಕಾಡಿಗೆ ಅಲೆಯುತ್ತಿದ್ದ ಮೃಗೀಯ ಜೀವನದ ಹಂತ. ಆದರೆ ಹಾಗೆ ಲಭ್ಯವಾದ ಆಹಾರವನ್ನು ಒಂದು ಕಡೆ ಕೂಡಿಡುವ, ಸಂರಕ್ಷಿಸುವ ಬುದ್ಧಿಯನ್ನು ಉಪಯೋಗಿಸಿದ್ದೇ ಅವನು ನಾಗರೀಕತೆಯ ಕಡೆಗೆ ಮುಖಮಾಡಿದ ಪ್ರಥಮ ಹಂತ. ಒಂದು ಗುಂಪಿನ ಜನ ಒಟ್ಟಾಗಿ ವಾಸಿಸುವ ಮೂಲಕ ತಮಗೊಂದು ಅಸ್ತಿತ್ವ ಕಂಡುಕೊಳ್ಳುತ್ತಿದ್ದ ಕಾಲ ಅದು. ಅಲ್ಲಿ ಯಾರು ಗಂಡ ಅಥವಾ ಯಾರು ಹೆಂಡತಿ ಎಂಬ ಕಲ್ಪನೆ ಇರಲಿಲ್ಲ. ಸಮೂಹ ಜೀವನ ಅದು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ಪಡೆದ ತಾಯಿ ಮಾತ್ರ ಅಲ್ಲಿ ಮುಖ್ಯ. ಅವಳಿಗೇ ಅಲ್ಲಿ ಪ್ರಾಧಾನ್ಯ. ಆಹಾರ ಸಂಗ್ರಹಣೆಗಾಗಿ ಹೊರಟ ಗಂಡಸು ಹಿಂತಿರುಗಿ ಬಂದಾಗ ಲಭ್ಯವಿದ್ದ ಹೆಂಗಸಿನ ಜೊತೆ ತನ್ನ ಲೈಂಗಿಕ ತೃಷೆ ತೀರಿಸಿಕೊಳ್ಳುತ್ತಿದ್ದ ಅಷ್ಟೇ. ಆದರೆ ಯಾರು ಎಂಬುದು ಅಲ್ಲಿ ಮುಖ್ಯವೇ ಅಲ್ಲ. ಹೀಗಾಗಿ ತಾಯಿಯೇ ಸತ್ಯ. ಇಷ್ಟಲ್ಲದೆ ಗಂಡಸರು ಹೊರಗಿನಿಂದ ಸಂಗ್ರಹಿಸಿ ತಂದ ಆಹಾರಗಳನ್ನು ಸಂರಕ್ಷಿಸಿ ಇಡುವುದು, ಹೆತ್ತ ಮಕ್ಕಳನ್ನು ಪೋಷಿಸುವುದು ಮುಂತಾದಂತೆ ಇಡೀ ಸಮೂಹದ ಜವಾಬ್ದಾರಿ ತಾಯಿಯದೇ ಆಗಿತ್ತು. ಆದ್ದರಿಂದ ಮಾತೃವಿನ ಸ್ಥಾನ ನಿರ್ವಿವಾದವಾಗಿ ಪ್ರಾಮುಖ್ಯತೆ ಗಳಿಸಿತ್ತು. ಹೀಗಾಗಿ ಸೃಷ್ಟಿಗೆ ಕಾರಣಗಳಾದ ಮತ್ತು ಪೋಷಣೆಗೆ ಪೂರಕಳಾದ ಮಾತೃವನ್ನು ಗೌರವಿಸಿ, ಆರಾಧಿಸಿದ್ದು ಕೂಡ ಅಷ್ಟೇ ಸಹಜ. ಮಾತೃವಿನ ಆರಾಧನೆ ಆರಂಭವಾದ ಮೊದಲ ಹಂತ ಇದು. ಈ ಹಿನ್ನೆಲೆಯಲ್ಲಿ ದೈವ ಸೃಷ್ಟಿಯ ವಿವಿಧ ಹಂತಗಳನ್ನು ಹೀಗೆ ಗುರುತಿಸಬಹುದು.

ಮೇಲೆ ವಿವರಿಸಿದಂತೆ ಎಲ್ಲಕ್ಕೂ ಮಾತೃವೇ ಮೂಲ. ಅವಳೇ ಸತ್ಯ ಎಂಬ ಅನಾದಿಕಾಲದ ನಿಜಸ್ಥಿತಿಯ ಮೂಲಕ ರೂಪುಗೊಂಡ ಮಾತೃವಿನ ಆರಾಧನೆ. ಇದು ಆಹಾರ ಸಂಗ್ರಹಣೆಯ ಕಾಲದ ಮುಕ್ತ ಸ್ಥಿತಿಯಲ್ಲಿ ಆರಂಭಗೊಂಡದ್ದು. ಪ್ರಾಣಿಗಳನ್ನು ಪಳಗಿಸಿ ಪಶುಸಂಗೋಪನಾ ಕಾರ್ಯಕೈಗೊಂಡ ಹಂತದಿಂದ ಪುರುಷ ಪ್ರಾಧಾನ್ಯ ಹೆಚ್ಚಾಯಿತು. ಪುರುಷ ಪ್ರಾಧಾನ್ಯತೆಯ ಜೊತೆಗೇ ಪುರುಷ ದೈವಗಳ ಸೃಷ್ಟಿಯೂ ಆಯಿತು. ಆಯಾ ಸಮುದಾಯದ ವೀರರು ದೈವಗಳಾಗಿ ರೂಪಾಂತರಗೊಂಡ ಸ್ಥಿತಿಯಲ್ಲಿ ಅವರ ಆರಾಧನೆಯೂ ವಿವಿಧ ರೀತಿಯಲ್ಲಿ ಆರಂಭಗೊಂಡಿತು. ಪುರುಷ ಹೊರಗೆ ಹೋದಾಗ ಮಕ್ಕಳ ಪೋಷಣೆ ಮಾಡಿಕೊಂಡು ಇರುತ್ತಿದ್ದ ಸ್ತ್ರೀ ಕೃಷಿಯ

ಅನ್ವೇಷಣೆ ಮಾಡಿದಳು ಎಂಬುದು ಅನೇಕರ ಅಭಿಪ್ರಾಯ. ಸ್ತ್ರೀಯೂ ಗರ್ಭಧಾರಣಾ ಶಕ್ತಿ ಮತ್ತು ಭೂಮಿಯ ಸಸ್ಯಧಾರಣಾ ಶಕ್ತಿಯನ್ನು ಗೌರವಿಸಿ ಮಾನ್ಯ ಮಾಡಿದ ಕೃಷಿ ಹಂತದ ಚಟುವಟಿಕೆಗಳು ಸ್ತ್ರೀಯನ್ನು ಮತ್ತೆ ದೈವಸ್ಥಾನಕ್ಕೆ ಏರಿಸಿದವು. ಗ್ರಾಮದೇವತೆಗಳ ಸೃಷ್ಟಿ ಆರಂಭವಾದದ್ದು ಹೀಗೆ. ಕೃಷಿ ಚಟುವಟಿಕೆ ಒಂದು ಆರ್ಥಿಕ ಚಟುವಟಿಕೆಯಾಗಿ ಅಭಿವೃದ್ಧಿ ಹೊಂದಿದಂತೆ ಭೂಮಾಲಿಕತ್ವವೂ ತನ್ನ ನೆಲೆ ಕಂಡುಕೊಳ್ಳತೊಡಗಿತು. ಆಸ್ತಿಯ ಒಡೆತನದ ಕಲ್ಪನೆ ಬರುತ್ತಿದ್ದಂತೆ ತಮ್ಮ ಆಸ್ತಿ ತಮ್ಮ ಮಕ್ಕಳಿಗೇ ಸೇರಬೇಕೆಂಬ ನಂಬಿಕೆ ಬಲವಾಯಿತು. ಇಲ್ಲಿಯೇ ಪಾತಿವ್ರತ್ಯ ಎಂಬ ಹೊಸ ಮೌಲ್ಯ ಇಣುಕು ಹಾಕಿತು. ಭೂಮಿಯಂತೆಯೇ ಸ್ತ್ರೀ ಕೂಡ ಪುರುಷನ ಆಸ್ತಿಯಾಗಿ ಪರಿವರ್ತಿತಳಾದಳು. ಪುರುಷ ಪ್ರಾಧಾನ್ಯ ಇಲ್ಲಿ ಮತ್ತೆ ತನ್ನ ಸಾರ್ವಭೌಮತ್ವ ಸ್ಥಾಪಿಸಿತು. ಆರ್ಯರ ಮುಖಂಡತ್ವದಲ್ಲಿ ಪುರುಷ ಪ್ರಧಾನ ಮೌಲ್ಯ ವಿಜೃಂಭಿಸಿತು. ಪುರುಷ ದೈವಗಳ ಸೃಷ್ಟಿಯೂ ಆಯಿತು. ಆ ದೈವಗಳ ಪುರಾಣಗಳು ಲಿಖಿತವಾಗಿ ದಾಖಲಾದವು. ಮಾತೃವಿನ ಸಂಕೇತದ ದೇವತೆಗಳು ಪುರುಷ ದೈವಗಳ ಅಡಿಯಾಳಾಗಿಯೋ, ನಿಕೃಷ್ಟ ಸೇವಕಿಯಾಗಿಯೋ, ಇಲ್ಲವೇ ಆರ್ಯದೈವಗಳ ಹೆಂಡತಿಯರಾಗಿಯೇ ಕಾಣಿಸಿಕೊಂಡರು.

ಇಷ್ಟೆಲ್ಲ ಪುರುಷ ಅವಸ್ಥಾಂತರಗಳ ನಡುವೆಯೂ ಮಾತೃದೇವತೆಯರ ಸ್ಥಾನವೇ ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಅಧಿಕೃತವಾಗಿ ಉಳಿದಿರುವುದೊಂದು ವಿಶೇಷ. ಆರ್ಥಿಕ ಚಟುವಟಿಕೆ ಗಂಡಸಿನದಾಗುವ ಮೂಲಕ ಆ ರಂಗದಲ್ಲಿ ಪುರುಷ ಮುಖ್ಯವಾಗಿದ್ದನಾದರೂ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಸ್ತ್ರೀ ಪ್ರಾಧಾನ್ಯ ಕಡಿಮೆಯಂತೂ ಆಗಿಲ್ಲ. ಮನುಷ್ಯ ಸಮುದಾಯದ ಪಾಲನೆ, ಪೋಷಣೆ ಮತ್ತು ರಕ್ಷಕಿಯಾಗಿ ಮಾತೃದೇವತೆ (ಬೇಟೆ ಮತ್ತು ಆಹಾರ ಸಂಗ್ರಹಣೆ ಹಂತ) ಧಾನ್ಯ ದೇವತೆಯಾಗಿ, ಮಾತೃದೇವತೆಯಾಗಿ (ಕೃಷಿ ಹಂತ) ರೋಗ ನಿಯಂತ್ರಕಳಾಗಿ ಮಾತೃದೇವತೆ (ಗ್ರಾಮಗಳ ಹುಟ್ಟಿನ ನಂತರದ ಸ್ಥಿತಿ), ಈ ರೀತಿಯಲ್ಲಿ ಪ್ರಾಚೀನದಿಂದ ಇಲ್ಲಿಯವರೆಗೆ ಮಾತೃದೇವತೆಯ ಸ್ಥಾನವೇ ಮಿಗಿಲಾಗಿ ಪರಿಗಣಿತವಾಗುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ದಕ್ಷಿಣ ಭಾರತದ ಇಡೀ ದ್ರಾವಿಡ ಸಮುದಾಯದಲ್ಲಂತೂ ಮಾತೃಮೂಲ ಕುಟುಂಬಗಳೇ ಇತ್ತೀಚಿನವರೆಗೂ ಅಸ್ತಿತ್ವದಲ್ಲಿದ್ದ ಕಾರಣ ಮಾತೃದೇವತೆಯರ ಪ್ರಾಮುಖ್ಯವೂ ಅಷ್ಟೇ ಇತ್ತು. ದ್ರಾವಿಡ ಮೂಲದ ಬುಡಕಟ್ಟು ಸಮುದಾಯಗಳಿಂದ ನಾಗರೀಕ ಸಮುದಾಯಗಳವರೆಗೆ ಈ ಮಾತು ನಿಜ.

ಈ ಮಾತೃಮೂಲವಾದ ಆರಾಧನೆ ಬಹು ಪ್ರಾಚೀನವಾದುದು ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಹಾಗೆ ನೋಡಿದರೆ ಇಡೀ ಜಗತ್ತಿನ ಆದಿಯೇ ಮಾತೃಮೂಲವಾದದ್ದು. ಕ್ರಿಶ್ಚಿಯನ್ ಪೂರ್ವದ ಇಡೀ ಯುರೋಪಿನಲ್ಲಿ ಮಾತೃದೇವತೆಯ ಆರಾಧನೆಯೇ ಪ್ರಬಲವಾಗಿತ್ತು. ಪ್ರಾಚೀನ ಗ್ರೀಕ್ ಮತ್ತು ರೋಮ್‌ನಲ್ಲಿ ಕೂಡ ಇದು ನಿಚ್ಚಳವಾಗಿತ್ತು. ಹಾಗೆಯೇ ಆಫ್ರಿಕಾ ಮತ್ತು ಆಸ್ಟ್ರೇಲಿಯಾ ಖಂಡಗಳ ಮೂಲ ನಿವಾಸಿಗಳು ಇವತ್ತಿಗೂ ಮಾತೃ ಆರಾಧಕರು ಎಂಬುದನ್ನು ಸಾಬೀತುಪಡಿಸಲು ಅನೇಕ ಆಧಾರಗಳಿವೆ. ಏಷ್ಯಾದ ಪ್ರಮುಖ ಭೂಪ್ರದೇಶವೆನಿಸಿದ ಭಾರತ ಮಾತೃದೇವತೆಯರ ತವರು ಎಂದರೂ ನಡೆಯುತ್ತದೆ. ಆರ್ಯಪೂರ್ವ ಭಾರತದಲ್ಲಿ ದೇಶದ ಬಹುತೇಕ ಎಲ್ಲ ಪ್ರದೇಶಗಳೂ ಮಾತೃಮೂಲೀಯವಾಗಿದ್ದವು. ಹಾಗೂ ಮಾತೃ ಆರಾಧನೆ

ಅಬಾಧಿತವಾಗಿತ್ತು. ಮಾನವನ ಆದಿಮ ಆರ್ಥಿಕ ಚಟುವಟಿಕೆ ಎನಿಸಿದ ಆಹಾರ ಸಂಗ್ರಹಣೆಯ ಕಾಲದಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿದ ಸ್ತ್ರೀಯ ಸ್ಥಾನಮಾನ ತನ್ನ ಸೃಷ್ಟಿ ಶಕ್ತಿಯ ಜೊತೆಗೆ ಆಹಾರ ರಕ್ಷಣಾ ಶಕ್ತಿಯನ್ನು ಒಂದುಗೂಡಿಸಿಕೊಂಡು ಆರ್ಥಿಕ ಚಟುವಟಿಕೆಯ ಆರಂಭಿಕ ಹಂತದ ಉದಯಕ್ಕೆ ಕಾರಣವಾಯಿತೆನ್ನುವ ಖ್ಯಾತ ಚಿಂತಕ ಡಿ. ಡಿ. ಕೋಸಾಂಬಿಯವರ ಪ್ರಕಾರ ಈ ಹಂತವೆ ಮಾತೃದೇವತೆಯರ ಉಗಮಕ್ಕೂ ಕಾರಣವಾಗಿರಬಹುದು. ಹೀಗೆ ಉಗಮಗೊಂಡ ದೇವತೆಯನ್ನು ಅಂದಿನ ಅಲೆಮಾರಿ ಸ್ವರೂಪದ ಜನರು ತಮ್ಮ ಕಾರ್ಯಕಲಾಪಗಳನ್ನು ಮುಗಿಸಿ ಬಂದು ಸೇರುತ್ತಿದ್ದ ಕೂಡು ಹಾದಿಗಳಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಅದಕ್ಕೆ ನರಬಲಿ ಅಥವಾ ರಕ್ತ ಬಲಿಯನ್ನು ನೀಡಲಾಗುತ್ತಿತ್ತು. ಮತ್ತೊಬ್ಬ ಖ್ಯಾತ ಚಿಂತಕ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರ ಪ್ರಕಾರ ಹೀಗೆ ಉಗಮಗೊಂಡ ಮಾತೃದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು. ಮಾತೃವಿನ ಆರಾಧನೆ ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆಯೇ ಆರಂಭವಾಗಿರಬೇಕೆಂಬುದು ತಜ್ಞರ ಅಭಿಪ್ರಾಯ. ಭಾರತದಲ್ಲಿ ಹರಪ್ಪಾ ಸಂಸ್ಕೃತಿಯ ಅವಶೇಷಗಳ ಮೂಲಕ ಮಾತೃವಿನ ಆರಾಧನೆಯನ್ನು ಗುರುತಿಸುವ ಪ್ರಯತ್ನಗಳು ನಡೆದಿವೆ. "ಹರಪ್ಪಾ ಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆ ದೊರೆತಿದ್ದು ಇದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊರಹೊಮ್ಮುತ್ತಿರುವ ಸ್ತ್ರೀಚಿತ್ರವನ್ನು ಮಾತೃದೇವತೆಯೆಂದು ಹೇಳಲಾಗಿದೆ. ಈಕೆಯನ್ನು ಶಾಕಾಂಬರಿ ಎಂದು ಗುರುತಿಸುತ್ತಾರೆ. ಹೀಗೆ ಸಸ್ಯ ಸಂಬಂಧಿಯಾದ ದೇವತೆಯ ಇನ್ನೊಂದು ಮುದ್ರಿಕೆಯು ಹರಪ್ಪಾ ಸಂಸ್ಕೃತಿಯಲ್ಲೆ ದೊರಕಿದೆ. ಈ ಚಿತ್ರ ಒಂದು ಹೆಣ್ಣಿನದಾಗಿದ್ದು ಈಕೆ ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ನಿಂತಿದ್ದಾಳೆ. ಒಬ್ಬ ಭಕ್ತನು ಮರದ ಪಕ್ಕದಲ್ಲಿ ಬಾಗಿ ನಿಂತಿದ್ದಾನೆ. ಒಂದು ಮೇಕೆಯು ಭಕ್ತನ ಹಿಂದೆ ನಿಂತಿದೆ. ಇದರ ಕೆಳಭಾಗದಲ್ಲಿ ಏಳು ವಿಗ್ರಹಗಳನ್ನು ಕಾಣಬಹುದು. ಈ ಚಿತ್ರದ ಹೆಣ್ಣಿನ ವಿಗ್ರಹವನ್ನು ಮಾತೃದೇವತೆಯೆಂದು ಭಾವಿಸಲಾಗಿದೆ. ಇದರಲ್ಲಿನ ಏಳು ವಿಗ್ರಹಗಳನ್ನು ಕಡಿಮೆ ದರ್ಜೆಯ ಏಳು ದೇವತೆಗಳೆಂದು ಭಾವಿಸಲಾಗಿದೆ. ಇಲ್ಲಿರುವ ಮೇಕೆಗೆ ಮನುಷ್ಯನ ಮುಖವಿರುವುದರಿಂದ ಇದು ಬಲಿಗಾಗಿ ತಂದ ಪ್ರಾಣಿಯಲ್ಲವೆಂದು ವಿದ್ವಾಂಸರು ಭಾವಿಸುತ್ತಾರೆ. ದಕ್ಷಿಣ ಭಾರತದಲ್ಲಿ ಮಾತೃದೇವತೆ ಇಲ್ಲದಿರುವ ಹಳ್ಳಿಗಳೇ ಇಲ್ಲದಿಲ್ಲ. ಮಾತೃದೇವತೆಯೊಬ್ಬಳನ್ನು ಮನೆದೇವತೆ ಎಂದು ಪೂಜಿಸಿದ ಶೂದ್ರ ಕುಟುಂಬಗಳೂ ಇಲ್ಲದಿಲ್ಲ. ಮಾತೃದೇವತೆಯೊಬ್ಬಳನ್ನು ಮನೆದೇವತೆ ಎಂದು ಪೂಜಿಸಿದ ಶೂದ್ರ ಕುಟುಂಬಗಳು ಇಲ್ಲದಿಲ್ಲ. ಅಷ್ಟರ ಮಟ್ಟಿಗೆ ಈ ಮಾತೃ ಪರಂಪರೆ ದಕ್ಷಿಣದಲ್ಲಿ ತನ್ನ ಭದ್ರ ಬುನಾದಿಯನ್ನು ಕಂಡುಕೊಂಡಿದೆ. ಆದರೆ, ಈ ಆರಾಧನೆಯ ಸ್ವರೂಪ ಪ್ರಾಚೀನದಿಂದಲೂ ಒಂದೆ ತೆರನಾಗಿದೆ ಎಂದೇನೂ ಹೇಳುವಂತಿಲ್ಲ. ಸಮಾಜದಲ್ಲಿ ಉಂಟಾದ ಅನೇಕ ರೀತಿಯ ಅವಸ್ಥಾಂತರಗಳಿಗೆ ಅನುಗುಣವಾಗಿ ದೇವತೆಯರ ಅಸ್ತಿತ್ವದಲ್ಲಿಯೂ ಅನೇಕ ಬದಲಾವಣೆಗಳಾಗಿವೆ. ಸ್ತ್ರೀಪ್ರಧಾನವಾದ ವ್ಯವಸ್ಥೆ ಪುರುಷ ಪ್ರಧಾನವಾದ ಬಗೆ, ಅರಣ್ಯಗಳು ಕೃಷಿಭೂಮಿಗಳಾಗಿ ವಿಸ್ತರಿಸುತ್ತಾ ಬಂದಿದ್ದು ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಗೆ, ಬೇಟೆಯಿಂದ ಪಶುಪಾಲನೆಗೆ, ಪಶುಪಾಲನೆಯಿಂದ ಕೃಷಿಗೆ

ಬದುಕು ಬದಲಾದದ್ದು, ಸಮೂಹ ಕೃಷಿಯ ಸ್ವರೂಪ ಊಳಿಗಮಾನ್ಯ ಪದ್ಧತಿಗೆ ರೂಪಾಂತರಗೊಂಡದ್ದು, ವಿವಿಧ ಉತ್ಪಾದನೆ ಮತ್ತು ಪೂರಕ ವೃತ್ತಿಗಳ ಜನರನ್ನು ಶ್ರೇಣೀಕರಣಕ್ಕೆ ಒಳಪಡಿಸಿದ್ದು - ಮುಂತಾದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಕಾರಣದಿಂದಾಗಿ ಗ್ರಾಮಗಳ ಸ್ವರೂಪ ಬದಲಾದಂತೆ ಗ್ರಾಮದೇವತೆಯರ ಆರಾಧನೆಯ ಸ್ವರೂಪವು ಬದಲಾಗಿದೆ. ಆದರೆ, ಈ ಬದಲಾವಣೆಯ ಸ್ವರೂಪ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಹೆಚ್ಚಾಗಿಯೇ ಆಯಿತು ಆದ್ದರಿಂದಲೇ ಭಾರತದ ಸಾಮಾಜಿಕ ಮತ್ತು ಆರ್ಥಿಕ ಸ್ವರೂಪದ ತಾರತಮ್ಯಗಳು ಇಂದು ಕಣ್ಣಿಗೆ ರಾಚುವಷ್ಟು ಕಗ್ಗಂಟಾಗಿವೆ. ಆದರೆ, ಸಾಂಸ್ಕೃತಿಕ ಲೋಕದ ಮೇಲೆ ಅಂಥ ಪರಿಣಾಮಗಳು ಕಡಿಮೆ ಎಂದೇ ಹೇಳಬೇಕು. ಆದ್ದರಿಂದಲೇ ಗ್ರಾಮದೇವತೆಯರ ಆರಾಧನೆ ಸಾವಿರಾರು ವರ್ಷಗಳಿಂದ ಅಬಾಧಿತವಾಗಿ ನಡೆಯುತ್ತಾ ಬಂದಿದೆ. ಸಾಮಾಜಿಕ ಮತ್ತು ಆರ್ಥಿಕ ಪರಿಣಾಮಗಳು ಹಬ್ಬ ಮತ್ತು ಆರಾಧನೆಯ ಸ್ವರೂಪದಲ್ಲಿ ಅಲ್ಪಸ್ವಲ್ಪ ಬದಲಾವಣೆ ಉಂಟುಮಾಡಿರಬಹುದು. ಆದರೆ, ಭಾರತದ ಶೂದ್ರಶಕ್ತಿಗೆ ಎಂಥ ನಿರೋಧಕ ಗುಣವಿದೆ ಎಂದರೆ, ತಮ್ಮ ಒಳ ಆವರಣಗಳಿಗೆ ಧಕ್ಕೆ ಉಂಟಾದಾಗ ಅನೇಕ ಪರ್ಯಾಯ ಮಾರ್ಗಗಳನ್ನು ಕಂಡುಕೊಂಡು 'ತಮ್ಮತನ'ವನ್ನು ಅವರು ಉಳಿಸಿಕೊಂಡಿದ್ದಾರೆ. ಸಾಮಾಜಿಕವಾಗಿ ಅನಿಷ್ಟಯುತವಾದ ಶ್ರೇಣೀಕರಣವಿದ್ದರೂ, ಸಾಂಸ್ಕೃತಿಕ ಅಸ್ತಿತ್ವದ ವಿಚಾರ ಬಂದಾಗ ಭಾವೈಕ್ಯತೆಯ ಹಾದಿ ತುಳಿದು ತಮ್ಮ ಅನನ್ಯತೆಯನ್ನು ಕಾಪಾಡಿಕೊಂಡ ಅನೇಕ ಉದಾಹರಣೆಗಳು ನಮ್ಮ ಆಚರಣೆಗಳಲ್ಲಿ ಕಾಣಸಿಗುತ್ತವೆ. ನಮ್ಮ ಆಚರಣೆ ಮತ್ತು ಆರಾಧನೆಗಳು ಒಂದು ರೀತಿಯಲ್ಲಿ ಸಮಾಜದ ಸಾಮಾಜಿಕ ಮುಖಕ್ಕೆ ಹಿಡಿದ ಕನ್ನಡಿಯೂ ಹೌದು. ಸಾಂಸ್ಕೃತಿಕ ಹಿನ್ನೆಲೆಯ ಇತಿಹಾಸವೂ ಹೌದು. ಈ ಹಿನ್ನೆಲೆಯಲ್ಲಿ ಹುಲಿಗೆಮ್ಮ ದೇವಿಯ ಗ್ರಾಮದೇವತೆಯ ಈ ಅಧ್ಯಯನವು ಕೇವಲ ಸಾಂಸ್ಕೃತಿಕ ಆಶಯಗಳನ್ನಷ್ಟೇ ಹೊಂದಿರದೆ ಅದು ಸಮಾಜಶಾಸ್ತ್ರೀಯ ಆಯಾಮಗಳನ್ನು ಪಡೆದುಕೊಳ್ಳುತ್ತದೆ. ವೈದಿಕ ಪ್ರಣೀತ ಪುರುಷಪ್ರಧಾನ ವ್ಯವಸ್ಥೆಯನ್ನು ಧಿಕ್ಕರಿಸುವ, ಮಾತೃಮೂಲೀಯ ಮೌಲ್ಯಗಳನ್ನು ಹಲವು ಸಮುದಾಯಗಳಲ್ಲಿ ಪ್ರತಿಷ್ಠಾಪಿಸುವ ಅಥವಾ ನಿರಂತರ ಮುಂದುವರೆಸಿಕೊಂಡು ಹೋಗುವ ಒಂದು ಜೀವಂತ ವ್ಯವಸ್ಥೆಯಾಗಿ 'ಹುಲಿಗೆಮ್ಮ' ಪಂಥವು ಕಾರ್ಯನಿರ್ವಹಿಸುತ್ತಿದೆಯೆಂದರೆ ತಪ್ಪಾಗಲಾರದು. ಹುಲಿಗೆಮ್ಮ ಒಂದು ಹೆಣ್ಣು ದೇವತೆ, ಈ ದೇವತೆಯ ಮುಖಾಂತರ ಸಾಮಾನ್ಯ ಹೆಣ್ಣುದೇವತೆಗೂ ವ್ಯತ್ಯಾಸವಿದೆ. ಇವರ ಕಷ್ಟಗಳು, ಸಮಾಜ ಹೆಣ್ಣನ್ನು ನೋಡುವ ದೃಷ್ಟಿಕೋನ ಜೊತೆಗೆ ಒಂದು ಆದಿವಾಸಿ ಹೆಣ್ಣು ದೇವತೆಯಾಗಿ ಪರಿವರ್ತಿತಳಾದರೂ ಇವಳ ಮೇಲೆ ಪ್ರಭಾವ ಬೀರಿರುವ ವಿವಿಧ ಪಂಥಗಳು ವೈದಿಕ ಪ್ರಭಾವ ಮುಂತಾದ ವಿಷಯಗಳನ್ನು ಹುಲಿಗೆಮ್ಮನ ಆಚರಣೆ ವಿಧಿ ಸಂಪ್ರದಾಯ ಪೂಜಾ ವಿಧಾನ ಮುಂತಾದವುಗಳ ಮುಖಾಂತರ ಕಂಡುಕೊಳ್ಳುವ ಒಂದು ಚಿಕ್ಕ ಪ್ರಯತ್ನವನ್ನಿಲ್ಲಿ ಮಾಡುತ್ತಿದ್ದೇನೆ.

ಹುಲಿಗೆಮ್ಮ ದೇವತೆಯನ್ನು ಕುರಿತು ತಿಳಿಯುವ ಮುನ್ನ ರೇಣುಕೆಯ ಪ್ರತಿರೂಪ ಎಂದು ಹುಲಿಗೆಮ್ಮನನ್ನು ನಮ್ಮ ಜನಪದರು ಕರೆಯುವದರಿಂದ ರೇಣುಕಾ ಎಲ್ಲಮ್ಮ ಚರಿತ್ರೆಯನ್ನು ಅವಲೋಕಿಸುವುದು ಬಹುಮುಖ್ಯವಾದುದಾಗಿದೆ. 'ರೇಣುಕೆ ಕಾಶ್ಮೀರದ ಅರಸ ರೇಣುಕಾರಾಜನ ಮಗಳು. ಈ ರಾಜ ಇಕ್ಷ್ವಾಕು ವಂಶದವನು. ರೇಣುಕೆಯನ್ನು ಜಮದಗ್ನಿ ಋಷಿಗೆ ಕೊಟ್ಟು ಮದುವೆ ಮಾಡುತ್ತಾರೆ. ಜಮದಗ್ನಿ ಬಹಳ ಕೋಪಿಷ್ಠ. ಯಾವಾಗಲೂ ತಪಸ್ಸು ಆಚರಿಸುತ್ತಿದ್ದ. ರೇಣುಕೆ ರಾಜಮನೆತನದಿಂದ ಬಂದಿದ್ದರೂ ತನ್ನಲ್ಲಿ ಆಸ್ತಿ-ಐಶ್ವರ್ಯ

ಅಂತಸ್ತುಗಳನ್ನು ಮರೆತು ಪತಿ ಸೇವೆ ಮಾಡುತ್ತ ಆಶ್ರಮದಲ್ಲಿ ಕಾಲ ಕಳೆಯುತ್ತಿರುತ್ತಾಳೆ. ಪ್ರತಿ ದಿನವೂ ಮಳಲಿನ ಕೊಡದಲ್ಲಿ ನಾಗರಹಾವಿನ ಸಿಂಬೆ ಮಾಡಿಕೊಂಡು ಹೊಳೆಯಿಂದ ನೀರು ತಂದು ಜಮದಗ್ನಿಗೆ ಪೂಜೆಗೆ ಕೊಡುತ್ತಿದ್ದಳು. ಒಂದು ದಿನ ನೀರು ತರುತ್ತಿರುವ ಸ್ಥಳದಲ್ಲಿ ಗಂಧರ್ವನೊಬ್ಬ, ಗಂಧರ್ವ ಕನ್ಯೆಯೊಂದಿಗೆ ಸರಸವಾಡುತ್ತಿದ್ದುದನ್ನು ನೋಡಿ, ರೇಣುಕೆ ಮನಸ್ಸು ಚಂಚಲವಾಗುತ್ತದೆ. ಆಗ ರೇಣುಕೆ ಹೊತ್ತ ಮಳಲಿನ ಕೊಡ ಒಡೆದು, ನಾಗರಹಾವು ಸರಸರನೆ ಹರಿದುಹೋಗುತ್ತದೆ. ಜಮದಗ್ನಿಗೆ ತನ್ನ ಹೆಂಡತಿ ಅಶುದ್ಧಳು ಎಂದು ತಿಳಿಯುತ್ತದೆ ಮತ್ತು ಅವಳನ್ನು ಆಶ್ರಮದಿಂದ ಹೊರಗೆ ಹಾಕಿ ಕುಷ್ಟರೋಗದಿಂದ ಬಳಲುವಂತೆ ಶಾಪ ಕೊಡುತ್ತಾನೆ. ಇವಳ ನೋವನ್ನು ಕಂಡು ಒಬ್ಬ ವ್ಯಕ್ತಿ ಇಲ್ಲಿಯೇ ಹತ್ತಿರದಲ್ಲಿ ಕಾಳಿ ಎಂಬ ಶಕ್ತಿದೇವತೆ ನೆಲೆಸಿದ್ದಾಳೆ. ಅವಳ ಹತ್ತಿರ ಹೋದರೆ ನಿನಗೆ ಪರಿಹಾರ ಸಿಗಬಹುದು ಎಂದು ಹೇಳುತ್ತಾರೆ. ರೇಣುಕೆ ಕಾಳಿ ಹತ್ತಿರ ಹೋಗುತ್ತಿರುತ್ತಾಳೆ. ದಾರಿಯಲ್ಲಿ ಏಕನಾಥ ಜೋಗನಾಥರು ನಾವು ಅವಳ ಆರಾಧಕರು ನಿನ್ನ ರೋಗವನ್ನು ನಾವೇ ಪರಿಹರಿಸುತ್ತೇವೆ ಎಂದು ಹೇಳುತ್ತಾರೆ. ನಿನಗೆ ನಿನ್ನ ಗಂಡನ ಶಾಪದಿಂದ ಈ ರೋಗ ಬಂದಿದೆ. ನೀನು ಈ ಮಲೋಪಹಾರಿ ನದಿಯಲ್ಲಿ (ಮಲಪ್ರಭಾ) ಆ ಕಾಳಿ ಶಕ್ತಿಯನ್ನು ಸ್ಮರಿಸುತ್ತಾ ಸ್ನಾನ ಮಾಡು. ನಿನ್ನ ರೋಗಗಳು ಮಾಯವಾಗುತ್ತವೆ ಎಂದು ಹೇಳುತ್ತಾರೆ. ಅದನ್ನು ಕೇಳಿದ ರೇಣುಕೆ ಆ ಜೋಗಿಗಳು ಹೇಳಿದ ಹಾಗೆ ಮಾಡುತ್ತಾಳೆ. ಅವಳ ರೋಗವೆಲ್ಲ ಮಾಯವಾಗುತ್ತದೆ. ಅದನ್ನು ನೋಡಿದ ರೇಣುಕೆ ಆ ಜೋಗಿಗಳನ್ನು ಆರಾಧಿಸಿ ತನ್ನ ಸ್ಥಳಕ್ಕೆ ಬರಬೇಕೆಂದು ವಿನಂತಿಸಿಕೊಳ್ಳುತ್ತಾಳೆ. ಆ ಇಬ್ಬರೂ ಜೋಗಿಗಳು ಕಾಳಿಶಕ್ತಿಯ ಅನುಮತಿ ಪಡೆದು ರೇಣುಕೆಯ ಸೇವೆ ಸ್ವೀಕರಿಸಲು ಹೋಗುತ್ತಾರೆ ಎಂದು ಹೇಳಲಾಗುತ್ತದೆ.

ಆದಿಮ ಮನುಷ್ಯ ಎಂದು ಈ ಪ್ರಕೃತಿಯ ವೈಚಿತ್ರ್ಯಗಳನ್ನು ಕಂಡು ಭಯಭೀತನಾದನೋ ಅಂದೇ ಆರಾಧನೆಯನ್ನು ಮಾಡುವುದರ ಮೂಲಕ ತನ್ನ ಶಕ್ತಿಗಿಂತ ಮಿಗಿಲಾದ ಒಂದು ಶಕ್ತಿಗೆ ತಲೆಬಾಗಿ ಕೈಮುಗಿದ ನಂತರ ಅವನಿಗೆ ಪವಾಡವಾಗಿ ಕಂಡದ್ದು ಹೆಣ್ಣಿನ ಮೂಲಕ ಮತ್ತೆ ಈ ಪ್ರಪಂಚಕ್ಕೆ ತನ್ನ ಅಂಶವನ್ನು ಕೊಡುಗೆಯಾಗಿ ನೀಡುವ ಗರ್ಭಶಕ್ತಿಯನ್ನು ಹೊಂದಿರುವ ಹೆಣ್ಣು, ಹಾಗಾಗಿ ಹೆಣ್ಣನ್ನು ಗೌರವದಿಂದ ಕಾಣತೊಡಗಿದ. ಅದ್ಭುತವಾದ ಶಕ್ತಿಯನ್ನು ಹೊಂದಿರುವ ಹೆಣ್ಣು ಸಹ ಪೂಜೆಗೆ ಅರ್ಹವಾಗಿದ್ದು ಅವಳಲ್ಲಿರುವ ಗರ್ಭಧಾರಣ ಶಕ್ತಿ ಮತ್ತು ಅದರ ಜೊತೆಗೆ ಅವಳು ಕಂಡುಹಿಡಿದ ಬೀಜ ಮೊಳೆತು ಸಸಿಯಾಗುವ ಕ್ರಿಯೆಯಿಂದಾಗಿ ಹೆಣ್ಣು ಮತ್ತು ವೃಕ್ಷ ಇವೆರಡು ಧಾರಣ ಶಕ್ತಿಯಿರುವ ವಸ್ತುಗಳಾಗಿ ಮಾನ್ಯತೆಯನ್ನು ಪಡೆಯಲು ಪ್ರಾರಂಭವಾಯಿತು. ಹಾಗಾಗಿ ನಮ್ಮ ಗ್ರಾಮದೇವತೆಗಳ ಮೂಲವನ್ನು ಹುಡುಕುವಾಗ ಮೂಲದಲ್ಲಿ ವೃಕ್ಷ ಆರಾಧನೆಯು ಗಮನಸೆಳೆಯುತ್ತದೆ. ಹಾಗೆಯೇ ಪ್ರಕೃತಿಯಲ್ಲಿರುವ ಕಲ್ಲು-ಮಣ್ಣು-ಹುತ್ತ ಮತ್ತು ಶಿಲೆಗಳನ್ನು ಗ್ರಾಮೀಣರು ಒಂದು ಕಾಲಘಟ್ಟದಲ್ಲಿ ಅವುಗಳಲ್ಲಿ ಗ್ರಾಮದೇವತೆಗಳನ್ನು ಕಂಡುಕೊಂಡರು.

ಭಾರತದಲ್ಲಿ ಕೃಷಿ ಆರ್ಥಿಕ ಚಟುವಟಿಕೆಯಾಗಿ ರೂಪುಗೊಳ್ಳುವುದರ ಜೊತೆಗೆ ಶಾಕ್ತ ಪಂಥವು ತಲೆ ಎತ್ತಿತು. ಶಾಕ್ತಧರ್ಮವು ದೇವತೆಯನ್ನು ಪ್ರಪಂಚದ ಮೂಲಶಕ್ತಿಯ ಸಾಕಾರ ರೂಪವನ್ನಾಗಿ ಲೋಕದ ದೈವಿಕ ಮತ್ತು ಜೈವಿಕ ಬೆಳವಣಿಗೆಯ ಮೂಲಶಕ್ತಿಯನ್ನಾಗಿ ಪರಿಗಣಿಸಲಾಗುತ್ತದೆ. ಕೃಷಿ ಜನಾಂಗವೊಂದರ ಮಾತೃಪ್ರಧಾನ

ಕುಟುಂಬ ವ್ಯವಸ್ಥೆಯ ಪರಿಣಾಮವೇ ಇದಾಗಿರಬೇಕು. ಪ್ರಾಚೀನ ಸಮಾಜಗಳಲ್ಲಿ ಮುಕ್ತ ಲೈಂಗಿಕತೆಯಿದ್ದು ಆಯಾ ಗುಂಪುಗಳ ಸ್ತ್ರೀಯರ ಮೂಲಕ ನಿಯಂತ್ರಿಸಲ್ಪಡುತ್ತಿದ್ದುದರಿಂದ ಆಗ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿತ್ತು. ಮಕ್ಕಳಿಗೆ ಹೆತ್ತ ತಾಯಿಯನ್ನು ಮಾತ್ರ ಗುರುತಿಸಲು ಸಾಧ್ಯವಿದ್ದುದು ಈ ವ್ಯವಸ್ಥೆಯ ಹುಟ್ಟಿಗೆ ಕಾರಣವಿರಬೇಕು.

ಮನುಷ್ಯನ ಪ್ರಥಮ ಆರ್ಥಿಕ ಚಟುವಟಿಕೆಯಾದ ಆಹಾರ ಸಂಗ್ರಹಣೆಯ ಹಂತದಲ್ಲಿ ಸ್ತ್ರೀಯ ಪಾತ್ರ ಪ್ರಧಾನವಾಗಿತ್ತು. ಮಕ್ಕಳನ್ನು ಹೆರುವುದಲ್ಲದೆ ಅವರನ್ನು ಪಾಲನೆ ಮಾಡುವ ಮತ್ತು ಬೆಳೆಸುವ ಹೊಣೆಗಾರಿಕೆ ಅವಳದಾಗಿತ್ತು. ಎಲ್ಲ ಪದ್ಧತಿಗಳು ಮತ್ತು ಸಾಂಸ್ಕೃತಿಕ ಲಕ್ಷಣಗಳು ಹೆಣ್ಣಿನ ಮೂಲಕವೇ ಸಂವಹನಗೊಳ್ಳುತ್ತಿದ್ದವು. ಹೆಣ್ಣು ಒಂದು ಜನಾಂಗದ ಸಂಕೇತವಷ್ಟೇ ಅಲ್ಲ ಜೀವೋತ್ಪತ್ತಿಯ ಮೂಲ ಶಕ್ತಿಯಾಗಿದ್ದಳು. ಆಕೆಯ ಅಂಗಾಂಗಳು ಮತ್ತು ಗುಣಶಕ್ತಿಗಳಿಗೆ ಸೃಷ್ಟಿಶಕ್ತಿಯ ಸಾಮರ್ಥ್ಯವಿದೆಯೆಂದು ಭಾವಿಸಲಾಯಿತು. ಅವುಗಳನ್ನು ಚೈತನ್ಯ ಶಕ್ತಿಯ ಸಂಕೇತಗಳೆಂದು ತಿಳಿಯಲಾಯಿತು. ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಾತೃವೇ ಧರ್ಮದ ಕೇಂದ್ರ ಸ್ಥಾನದಲ್ಲಿದ್ದಳು. ಆಹಾರ ಸಂಗ್ರಹಣೆ ಮತ್ತು ಆಹಾರದ ಉತ್ಪಾದನೆ ಸ್ತ್ರೀಯ ಕರ್ತವ್ಯವಾಗಿತ್ತು. ಇದರಿಂದ ಸ್ತ್ರೀಯ ಸ್ಥಾನಮಾನ ಹೆಚ್ಚಿತು. ಈ ಮಾನ್ಯತೆ ಅವಳನ್ನು ದೈವತ್ವಕ್ಕೇರಿಸುವವರೆಗೆ ಹೋಯಿತು. ಹೀಗೆ ಗ್ರಾಮದೇವತೆಯ ಕಲ್ಪನೆಯ ಮೂಲವನ್ನು ಹುಡುಕುವಾಗ ವೃಕ್ಷ, ಹುತ್ತ, ಶಿಲೆ, ಹೆಣ್ಣಿನ ಸ್ತನ, ಯೋನಿ, ಇವುಗಳ ಪೂಜೆಯು ನಮ್ಮ ಕೃಷಿ (ಪ್ರಧಾನ ವ್ಯವಸ್ಥೆಯ) ಸಮುದಾಯದಲ್ಲಿ ಕಂಡುಬರುತ್ತದೆ. ಇದರಿಂದಲೇ ಶಾಕ್ತಪಂಥದ ಉದಯಕ್ಕೆ ಕಾರಣವಾಯಿತು. ಶಾಕ್ತ ಆಚರಣೆಗಳು ಪ್ರಧಾನವಾಗಿ ಕೃಷಿಯ ಉತ್ಪನ್ನಗಳ ಸಮೃದ್ಧಿಗಾಗಿ ಹುಟ್ಟಿಕೊಂಡಿವೆ.

ಮಾತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಂಡು ಮಾತೃದೇವತೆಗಳ ಪ್ರತಿನಿಧಿಗಳಾದ ಗ್ರಾಮದೇವತೆಗಳು ಗ್ರಾಮಗಳಲ್ಲಿ ಆರಾಧನೆಗೆ ಒಳಗಾದವು. ಸಮೃದ್ಧಿಯ ಆಚರಣೆಗಳೆಲ್ಲಾ ಸ್ತ್ರೀಸಂಬಂಧಿ ಆಚರಣೆಗಳಾದ್ದರಿಂದ ಅನೇಕ ಸಂಸ್ಕೃತಿಗಳಲ್ಲಿ ಗಂಡಿಗೆ ಆಚರಣೆಯ ಹಕ್ಕನ್ನು ಆಚರಣೆಯ ಸ್ಥಳಕ್ಕೆ ಪ್ರವೇಶವನ್ನೂ ನಿರಾಕರಿಸಲಾಗಿದೆ. ಮಾನವನ ಜೀವನ ವಿಧಾನ ಬದಲಾದಂತೆ ಕೃಷಿಯ ಮುಂದುವರೆದ ಘಟ್ಟದಲ್ಲಿ ಗಂಡು ಮಹತ್ವದ ಸ್ಥಾನವನ್ನು ಗಳಿಸುತ್ತಾನೆ. ಆಗ ಸಮೃದ್ಧಿಯ ಆಚರಣೆಗಳನ್ನು ನೆರವೇರಿಸುವ ಹೊಣೆಗಾರಿಕೆ ಅವನದಾಗುತ್ತದೆ. ಆದರೆ ಹಿಂದೆ ಆಚರಣೆಗಳು ಹೆಣ್ಣಿನ ಮೇಲ್ವಿಚಾರಣೆಯಲ್ಲಿ ಆಗುತ್ತಿದ್ದವು. ಈ ತೊಡಕನ್ನು ನಿವಾರಿಸಲು ಈ ಗಂಡು ಪೂಜಾರಿಯು ಸ್ತ್ರೀ ವೇಷಧಾರಿಯಾಗುತ್ತಾನೆ. ಗಂಡಿನ ಈ ವರ್ತನೆಯನ್ನು ಸತಿಪತಿ ಭಾವದ ಉದಾಹರಣೆಯೆಂದು ಹೇಳಲು ಅವಕಾಶವಿದೆ. ಆದರೆ ಈ ಸಂಬಂಧವನ್ನು ಸತಿಪತಿ ಭಾವದ ಪರಿಕಲ್ಪನೆಗಿಂತ ಸ್ತ್ರೀ ಸ್ಥಾನಪಲ್ಲಟವಾದ ಚಾರಿತ್ರಿಕ ಸತ್ಯವನ್ನು ಗಮನದಲ್ಲಿಟ್ಟುಕೊಳ್ಳುವುದೇ ಒಳ್ಳೆಯದು. ಏಕೆಂದರೆ ಸಮೃದ್ಧಿಯ ಆಚರಣೆ ಮೂಲದಲ್ಲಿ ಹೆಣ್ಣಿಗೆ ಸಂಬಂಧಿಸಿದ, ಹೆಣ್ಣಿನ ಮೇಲ್ವಿಚಾರಣೆಯಲ್ಲಿ ನಡೆಯುತ್ತಿದ್ದ ಆಚರಣೆಯಾಗಿದೆ. ಮತ್ತು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಗಂಡಿಗೆ ಪ್ರಾಧಾನ್ಯ ನೀಡಿದ್ದರೂ, ಹೆಣ್ಣುದೇವತೆ ಗಂಡಿನ ಕೋರಿಕೆಯನ್ನು ಈಡೇರಿಸಬಹುದೆಂಬ ಭೀತಿ ಇಲ್ಲಿ ನೆಲೆಗೊಂಡಿದೆ. ಹೆಣ್ಣು ಪ್ರಧಾನವಾಗಿದ್ದ ಸಾಂಸ್ಕೃತಿಕ ಘಟ್ಟವನ್ನು ಮರೆಯಲಾಗದೆ, ಸಾಂಕೇತಿಕವಾಗಿ

ಅದನ್ನು ಅಭಿನಯಿಸುವ ಆಚರಣೆಯಾಗಿಯೂ ಗಂಡು ಪೂಜಾರಿಯ ಸ್ತ್ರೀ ವೇಷಧಾರಣೆಯನ್ನು ಗಮನಿಸಬಹುದಾಗಿದೆ.

ಸಾವಿರಾರು ಸಂಖ್ಯೆಯಲ್ಲಿರುವ ಜನಪದ ದೈವಗಳಿಗೆ ಪ್ರಾದೇಶಿಕ ವಿಶಿಷ್ಟತೆಯ ಗುಣಲಕ್ಷಣಗಳಿವೆ. ಅವುಗಳಲ್ಲಿ ಕೆಲವು ಪ್ರಮುಖ ಲಕ್ಷಣಗಳ ಬಗೆಗೆ ಇಲ್ಲಿ ಕೆಲ ಅಂಶಗಳ ಮೂಲಕ ಕಂಡುಕೊಳ್ಳಬಹುದಾಗಿದೆ. ಜನಪದ ದೈವಗಳ ವಾಸಸ್ಥಾನ, ಅವುಗಳ ಸ್ವರೂಪ, ವೇಷ-ಭೂಷಣ, ವಾಹನ-ವಾದ್ಯ-ಲಾಂಛನ, ಪಾನೀಯ-ಆಹಾರ ಜಾತ್ರೆ-ಬಲಿ. ಆಚರಣೆಗಳು, ಫಲಾಫಲ, ಸಂಬಂಧಗಳು ಸಾಂಸ್ಕೃತಿಕ ಸಂಘರ್ಷ, ಸಮನ್ವಯತೆ ಈ ಅಂಶಗಳನ್ನು ಸೂಕ್ಷ್ಮವಾಗಿ ಬಿಚ್ಚುತ್ತಾ ಹೋದರೆ ಜನಪದ ದೈವಗಳ ವಿಶಿಷ್ಟ ಲಕ್ಷಣಗಳು ಸ್ಪಷ್ಟವಾಗುತ್ತ ಹೋಗುತ್ತವೆ.

**ಹೆಣ್ಣು ದೈವಗಳ ವಿಶಿಷ್ಟ ಲಕ್ಷಣಗಳು**

ಪ್ರಾರಂಭದಲ್ಲಿ ಜನಪದ ಹೆಣ್ಣು ದೈವಗಳಿಗೆ ಗುಡಿಗಳೇ ಇರಲಿಲ್ಲ. ನೆರಳು ನೀಡುವ ಬೇವಿನಮರ, ಆಲದಮರ ಅಥವಾ ಮರಗಳ ಗುಂಪಿನಲ್ಲಿ ಒಂದು ಕಲ್ಲುಗುಂಡನ್ನೋ, ಮೂರುಕಲ್ಲುಗುಂಡುಗಳನ್ನೋ ಇಟ್ಟು ದೇವತೆಯೆಂದು ಪೂಜಿಸಲು ಪ್ರಾರಂಭಿಸಿದರು. ಕೆಲವು ಕಡೆ ಬಯಲಲ್ಲಿರುವ ಕಲ್ಲುಬಂಡೆಯೇ ದೇವತೆಯಾಯಿತು. ಇನ್ನು ಕೆಲವು ಕಡೆ ಬಯಲಲ್ಲಿರುವ ಕಲ್ಲು ಬಂಡೆಯೇ ದೇವತೆಯಾಯಿತು. ಇನ್ನು ಕೆಲವು ಕಡೆ ನೆಲದಲ್ಲಿ ತ್ರಿಶೂಲವನ್ನಿಟ್ಟು, ಇಲ್ಲವೇ ಒಂದು ಈಟಿಯನ್ನಿಟ್ಟು ಅದನ್ನೇ ದೇವತೆಯೆಂದು ತಿಳಿದು ನಡೆದದ್ದುಂಟು. ನಂತರ ದಿನಗಳಲ್ಲಿ ಅಲ್ಲಲ್ಲಿ ಈ ಹೆಣ್ಣು ದೈವಗಳಿಗೂ ಗುಡಿಗಳು ನಿರ್ಮಾಣಗೊಂಡವು. ಆದರೆ ಈ ಗುಡಿಗಳು ಶಿಷ್ಟ ದೈವಗಳ ಗುಡಿಗಳಂತೆ ವೈಭವದಿಂದ ಕೂಡಿರದೆ ಬಹಳ ಸೀದಾಸಾದಾ ಇರುತ್ತವೆ. ಗರ್ಭಗುಡಿ, ಪ್ರಕಾರ, ಪೌಳಿ ಈ ಮುಂತಾದ ಅನುಕೂಲತೆಗಳು ಜನಪದ ದೈವಗಳಿಗಿರುವುದು ಕಡಿಮೆ. ಗ್ರಾಮದೈವಗಳಂತೂ ಈಗಲೂ ಬಯಲಲ್ಲಿವೆ. ಪ್ರಾಂತದೈವಗಳು, ನಾಡದೈವಗಳಿಗೆ ಗುಡಿಗಳಿವೆ. ಅನೇಕ ಕಡೆ ಹುತ್ತ, ಅಥವಾ ಮಣ್ಣಿನ ಗದ್ದುಗೆ ಅಥವಾ ನೆಲದಲ್ಲಿಯೇ ಉದ್ದ ದುಂಡುಗಲ್ಲು ದೇವತೆಗಳಾಗಿವೆ. ಮರದೈವ ಮಡಿಕೆದೈವ ಕಲ್ಲುದೈವ ಮಣ್ಣುದೈವ ಎನ್ನುವ ಬಸವಣ್ಣನ ವಚನದಲ್ಲಿ ಈ ಜನಪದ ದೈವಗಳ ಸ್ವರೂಪ ಸ್ಪಷ್ಟವಾಗಿ ಮೂಡಿದೆ. ಅನೇಕ ಗ್ರಾಮದೇವತೆಗಳು ಊರಿನ ಗಡಿ ರಕ್ಷಣೆಯ ಜವಾಬ್ದಾರಿ ಹೊತ್ತು ಊರ ಹೊರಗೆ ನೆಲೆಸಿರುತ್ತವೆ. ಇಂತಹ ದೇವತೆಗಳಿಗೆ ರಕ್ಷಣಾ ದೇವತೆಗಳೆಂದು ಕರೆಯುತ್ತಾರೆ. ಶಿಷ್ಟ ದೇವತೆಗಳಂತೆ ಸುಂದರವಾದ ಶಿಲ್ಪ ಸೌಂದರ್ಯವಾಗಲಿ, ವೈಭವೀಕರಣವಾಗಲಿ ಜನಪದ ದೈವಗಳಿಗಿಲ್ಲವೆಂಬುದನ್ನು ಗಮನಿಸಬಹುದಾಗಿದೆ. ಅನೇಕ ಹೆಣ್ಣು ದೈವಗಳಿಗೆ ದಿನನಿತ್ಯ ಸ್ನಾನ ಪೂಜೆಗಳೇ ಇರುವುದಿಲ್ಲ. ಬಹಳಷ್ಟು ದೈವಗಳಿಗೆ ಪೂಜಾರಿಗಳಿರುವುದಿಲ್ಲ. ಹೆಣ್ಣು ದೈವಗಳಿಗೆ ಸ್ತ್ರೀರೂಪದ ಆಕೃತಿಯಿರಬೇಕೆಂದೇನೂ ಇಲ್ಲ. ಒಂದು ಕಲ್ಲು ಗುಂಡಿಗೆ ಹಸಿರು ಸೀರೆಸುತ್ತಿದರಾಯಿತು. ಒಂದು ಹೆಣ್ಣು ದೈವ ಸಿದ್ಧವಾಗುತ್ತದೆ. ಇಂತಹ ಗುಡಿಗಳನ್ನು ಸೂಚಿಸುವುದಕ್ಕಾಗಿ ಎದುರಿಗಿರುವ ಮರದ ಮೇಲೆ ಕೆಂಪು ಅಥವಾ ಕೇಸರಿ ಬಣ್ಣದ ಧ್ವಜಗಳನ್ನು, ಪತಾಕೆಗಳನ್ನು ಕಟ್ಟಿರುತ್ತಾರೆ. ಅನೇಕ ಹೆಣ್ಣು ದೈವ ಮುಂಡವಿಲ್ಲದೆ ಬರೀ ರುಂಡದ ಮೂಲಕವೇ ಪೂಜೆಗೊಳ್ಳುತ್ತವೆ. ಜಮದಗ್ನಿಯ

ಅಪ್ಪಣೆಯಂತೆ ಪರಶುರಾಮ ಎಲ್ಲಮ್ಮನ ರುಂಡವನ್ನು ಹಾರಿಸಿದ ಕತೆ ಜನಜನಿತವಾಗಿದೆ. ಆ ರುಂಡಗಳೇ ಗ್ರಾಮದೇವತೆಗಳಾಗಿ ಇಂದಿಗೂ ಪೂಜೆಗೊಳ್ಳುತ್ತಿವೆಯೆಂಬ ಪ್ರತೀತಿ ಇದೆ.

ಈ ಜನಪದ ದೈವಗಳ ವಾಸಸ್ಥಾನ ತುಂಬಾ ಸರಳವಾದುದೆಂಬ ಮಾತಂತೂ ಸತ್ಯ. ಶಿಷ್ಟದೈವಗಳಂತೆ ಇವು ದೇವಾಲಯಗಳಲ್ಲಿರದೆ, ಸಾಮಾನ್ಯ ಜನ ವಾಸಿಸುವ ಹಾಗೆ ಹರಕು ಮುರುಕು ಗುಡಿಗಳಲ್ಲಿ ವಾಸಮಾಡುತ್ತಿವೆ. ಜನಪದ ದೈವಗಳಲ್ಲಿ ವ್ಯಕ್ತಿ ದೈವಗಳೂ ಸೇರಿಕೊಂಡಿವೆ. ಸತಿಹೋದವಳು, ತ್ಯಾಗ ಬಲಿದಾನ ಮಾಡಿದವರು ಪೂಜ್ಯರಾಗಿ ನಮ್ಮ ಜನಪದರಿಗೆ ಕಂಡಿದ್ದಾರೆ. ಅಂತವರನ್ನೂ ಅವರು ದೈವಗಳೆಂದೇ ಪರಿಗಣಿಸಿ ಪೂಜಿಸುತ್ತಾರೆ. ಇಂತಹ ಮಾಸ್ತ್ಯಮ್ಮಗಳು ಊರ ಹೊರಗೆ ನೆಟ್ಟಿರುವ ಒಂದು ಕಲ್ಲಿನಲ್ಲಿ ಆಕೃತಿ ಪಡೆದು ಆಗಾಗ್ಗೆ ಪೂಜೆಗೊಳಪಡುತ್ತವೆ. ಮಾಸ್ತ್ಯಮ್ಮಗಳಿಗೆ ಗುಡಿಗಳಿರುವುದಿಲ್ಲ. ಕೆಲವು ಹೆಣ್ಣುದೈವಗಳಿಗೆ ಪೂಜಾರಿಗಳುಂಟು. ಇವರೆಲ್ಲಾ ಕೆಳವರ್ಗದಿಂದ ಬಂದವರೇ ಆಗಿರುತ್ತಾರೆ. ದುಡಿವ ವರ್ಗದಿಂದ ಬಂದವರೇ ಆಗಿರುತ್ತಾರೆ. ಜನಪದ ದೈವಗಳಿಗೆ ಬ್ರಾಹ್ಮಣೇತರರೇ ಪೂಜಾರಿಗಳಾಗಿರುತ್ತಾರೆ. ಈ ಪೂಜಾರಿಗೆ ಗುಡ್ಡ, ತಮ್ಮಡಿ ಎಂದು ಕರೆಯುತ್ತಾರೆ. ಅಮ್ಮನ ಜಾತ್ರೆಯಲ್ಲಿ ಗುಡಿಯನ್ನು ಸಿಂಗರಿಸಿ ತೋರಣ ಕಟ್ಟುತ್ತಾರೆ. ಜನಪದರು ತಮ್ಮ ಕಾವ್ಯದಲ್ಲಿ ಅಮ್ಮನ ಗುಡಿಯನ್ನೂ, ಆಕೆಯ ವಾಸಸ್ಥಾನವನ್ನು ವರ್ಣನಾತ್ಮಕವಾಗಿ ವಿಶ್ಲೇಷಿಸಿದ್ದಾರೆ.

"ಗಚ್ಚೀನ ಗುಡಿಯಾರೆ ಗಜನ ಮಂಟಪದಾಕಿ
ಇದ್ದವರ ಮಗಳ ಏಸಾದನಂತೆ| ಜಗದಂಬಾ
"ಅಲ್ಲ್ಯಾಳ ಇಲ್ಲ್ಯಾಳ ಎಲ್ಲಾಯಳ ಎಲ್ಲಮ್ಮ
ಕಲ್ಲು ಗುಡ್ಡದಲಲಿ ಬರುದಾಳೇ ಬೆರುದಾಳೆ"
"ನಿನ್ನ ಸುತ್ತ ಮುತ್ತ ಏಳುಕೊಳ್ಳಮಾದೇವಿ
ನಿನ್ನ ನಟ್ಟನಡುವೆ ಗಚ್ಚಿನಗುಡಿಯೆ ಮಾದೇವಿ
ನಿನ್ನ ಗುಡಿಯ ಮಯಾಲೆ ಬಂಗಾರಕಳಸ ಮಾದೇವಿ"
"ಏಳು ಕೊಳದಾಗಬಂದ ನೆನೆದಾಳೊ ರೇಣುಕಾಜಗದಂಬ
ನಾಕು ಮೂಲಿಮ್ಯಾಲಗಂಭ ಮ್ಯಾಲಕೆ ಸಿಡಿಗಂಭ"
"ಮುತ್ತಿನ ಮೂಗುತಿ ಸಕ್ಕರೆ ಸುಲಿಹಲ್ಲ
ಅಕ್ಕ ನೀನ್ಯಾರ ಮಗಳವ್ವ-ಹಗರಟಗಿ
ಗಚ್ಚಿನ ಗುಡಿಯ ದ್ಯಾಮವ್ವ||"
"ಎಲ್ಲಾ ದೇವರಿಗೂ ನೆಲ್ಲುಲ್ಲ ಮಾಳಿಗೆ

ನಮ್ಮಪ್ಪಾನ ಮನೆಯಾ ಕುಲತಾಯಿ| ಚೌಡಮ್ಮಗೆ

ಜಂತೀವುಲಿನ ಅರಮನೆ||"

"ಹಳ್ಳಿಮನೆಯೋಳೆ ಬೆಳ್ಳಿಯಮಕದೋಳೆ

ಹನ್ನೆರಡಂಕಣ ಗುಡಿಯೊಳೆ ಚೌಡಮ್ಮ

ಒಟ್ಟು ಹೊಳೇದಾವು ಬಿಸಲಿಗ"

ಜನಪದ ಗರತಿಯ ಈ ಹಾಡುಗಳಲ್ಲಿ ದೇವಿಯ ಜಂತೀವುಲ್ಲಿನ ಗುಡಿಯೇ ಅರಮನೆಯಾಗಿ ಕಂಡಿದೆ. ಇದ್ದುದರಲ್ಲಿಯೇ ಸೌಂದರ್ಯವನ್ನು ಕಂಡುಕೊಳ್ಳುವುದು ಜನಪದರ ಗುಣ. ಹನ್ನರಡಂಕಣದ ಗುಡಿಯಲ್ಲಿಯೇ ಸಕಲೈಶ್ವರ್ಯವನ್ನು ಕಂಡಿದ್ದಾಳೆ. ಗಚ್ಚಿನ ಗುಡಿಯಲ್ಲ. ಕಲ್ಲುಗುಡ್ಡದಲ್ಲಿ ವಾಸಿಸುತ್ತಿರುವ ದೇವಿಯ ನೆಲೆಯನ್ನು ಇಲ್ಲಿ ಜನಪದರತಿ-ಕಾವ್ಯಮಯವಾಗಿ ಕಟ್ಟಿಕೊಟ್ಟಿದ್ದಾಳೆ. ದೇವಿಯ ವಾಸಸ್ಥಾನದ ವಿವಿಧ ಬಗೆಗಳನ್ನು ಜನಪದರು ತಮ್ಮ ಸೃಜನಶೀಲ ಹಾಡುಗಳಲ್ಲಿ ಕಂಡುಕೊಂಡಿದ್ದಾರೆ. ನಾಕು ಮೂಲಿಯ ಮ್ಯಾಲಗಂಭ, ಗುಡಿಯ ಕಳಸ ಇವುಗಳನ್ನೂ ಬಿಡದೆ ಚಿತ್ರಿಸಿದ್ದಾರೆ. ದೇವಿ ಮರದವ್ವನಾಗಿರಿಸಿ ಗಿಡದವ್ವನಾಗಿ ಬನದವ್ವನಾಗಿ ವಾಸಿಸುವ ಪರಿಯನ್ನು ಈ ಕೆಳಗಿನ ನುಡಿಗಳಲ್ಲಿ ಕಾಣಬಹುದಾಗಿದೆ.

"ಸೌದತ್ತಿ ದಾರ್‍ಯಾಗ ಸಾಲುಟೆಂಗಿನ ಮರ

ಒಂಬೈನೂರು ಎಳಮಾವಿನ ಸರ| ರಂಭಿ

ನಡದಳಾ ಎಲ್ಲವ್ವ||"

"ಎಲ್ಲಾ ದೇವರ ಗುಡಿ ಕಲ್ಲಲಿಕಟ್ಟಿ

ಎಲ್ಲಿದ ಎಲ್ಲವ್ವನ ಹೊಸಗುಡಿ| ಗಗ್ಗರಗಟ್ಟೆ

ಬಲ್ಲಿಗೆ ಹೂವಿನಲಿ ಮುಗಿದಾವು"

"ನಾಲ್ವಾರದ ದಾರೀಗಿ ಸಾಲು ಹುಣಚಿಯಗಿಡ

ಸಾರಿ ಹೊಂಟಾಳ ಮರಿಯಮ್ಮನ ಗುಡಿ ಮುಂದ

ಲಗ್ಗಿ ಹೂಡ್ಯಾವ ಕುರಿಕ್ಯಾಣ||"

"ಊರು ಮುಂದೊಂದು ಎಳೆಯ ಬೇವಿನ ಮರ

ಹೋಗಿನಿಲ್ಲಾಕೆ ನೆರಳಿಲ್ಲಾ ದೊಡ್ಡಮ್ಮ

ಈ ಬೇವಿನ ಮರವ ನಂಬ್ಕೊಳ್ಳಿ||"

"ಹೆಣ್ಣುಮಕ್ಕಳಲ್ಲಿ ಪುಣ್ಯವಂತೆ ಮಾಯವ್ವ

ಹಣ್ಣು ಹಲಸಿನ ಮರಿದತೀರಿ| ಕೊಡಗೊಂಡು

ವಾಲುತಾಳೆ ತಾಯಿ ಜೋಲುತಾಳೆ||"

"ಹತ್ತುರೂಪಾಯಿ ಸೀರಿ ಮುತ್ತೀನ ಉಡಿಯಕ್ಕಿ

ಹೊತ್ತೆಲ್ಲ ನಮಗ ಮುಳುಗ್ಯಾವ| ಮಾಪುರತಾಯಿ

ಹತ್ತುಸಾವಿರದ ಗಿಡದಾಗ||"

"ಗಂಗೆ ತಡೆಯಲ್ಲಿ ಯಾಕ್ನಿಂತ ಕಾಳಮ್ಮ

ಸೀತಾಳಗಾನ ಸುಳಿಗಾನ| ಕಾಳಮ್ಮ

ತೋಪೊಳ್ಳೆದೆಂದು ನೆಲೆಗೊಂಡೆ||"

ಈ ತ್ರಿಪದಿಗಳಲ್ಲಿ ಜನಪದ ಗರತಿ ಹೆಣ್ಣು ದೈವಗಳನ್ನು ಹಸಿರಿನ ಐಸಿರಿಯಲ್ಲಿ ಕಂಡುಕೊಂಡಿದ್ದಾಳೆ. ಗಿಡ-ಮರಬಳ್ಳಿ-ನೆಲ-ಜಲಗಳನ್ನೇ ದೈವಗಳೆಂದು ಆರಾಧಿಸುವ ಸಂಸ್ಕೃತಿ ತುಂಬಾ ವಿಶಿಷ್ಟವಾದುದು. ಟೆಂಗಿನ ಮರಗಳಲ್ಲಿ, ಮಾವಿನಮರಗಳಲ್ಲಿ, ಬನ್ನಿಯಮರಗಳಲ್ಲಿ ದೇವಿಯ ವಾಸಸ್ಥಾನವನ್ನು ಗುರುತಿಸುವ ಮಹತ್ವದ ಸಂಗತಿಯಾಗಿದೆ. ಫಲಗಳ ನಡುವಿದ್ದು ಫಲಗಳನ್ನು ಕೊಡುವವರಿಂದಲೇ ಜನಪದ ದೈವಗಳು ಫಲದೇವತೆಗಳಾಗಿವೆ. ಗಂಗೆಯತಡಿಯಲ್ಲಿ, ತುಂಗೆಯ ಬದಿಯಲ್ಲಿ ನೆಲೆಸಿರುವ ಈ ದೈವಗಳು ಜಲದೇವತೆಗಳೂ ಆಗಿವೆ. ಪ್ರಕೃತಿಯೆ ವಿವಿಧ ರೂಪಗಳಲ್ಲಿ ಜನಪದ ದೈವವಾಗಿ ಕಂಡಿದ್ದಾಳೆ.

ಜನಪದ ಹೆಣ್ಣು ದೈವಗಳು ರೂಪ, ಸ್ವರೂಪದಲ್ಲಿ ತುಂಬಾ ವಿಶಿಷ್ಟವಾಗಿ ಕಾಣಿಸುತ್ತವೆ. ಮಣ್ಣು-ಮರ-ಕಲ್ಲುಗಳಿಂದ ಮಾಡಿದ ವಿಗ್ರಹಗಳಿರುತ್ತವೆ. ಎಲ್ಲಮ್ಮನ ಪರಂಪರೆಯ ದೈವಗಳು ಆಕರ್ಷಕವಾದ ಕಪ್ಪು ಮುಖವನ್ನು ಹೊಂದಿರುತ್ತವೆ. ನೀಳವಾದ ಮೂಗು, ಅಗಲವಾದ ಕಣ್ಣುಗಳಿಂದ ಕಂಗೊಳಿಸುತ್ತವೆ. ಮಾರೆಮ್ಮನ ಪರಂಪರೆಯ ದೈವಗಳು ಭಯಂಕರವಾಗಿದ್ದು ಕೆಂಪು ವರ್ಣದಿಂದ ಕೂಡಿಕೊಂಡಿದ್ದು ರಕ್ತವರ್ಣದ ಕಣ್ಣುಗಳಿಂದ ಭಯಹುಟ್ಟಿಸುತ್ತವೆ. ಕೋರೆ ಹಲ್ಲು, ಕೋರೆ ಮೀಸೆ ಮುಖ ಭಾಗದಲ್ಲಿರುತ್ತವೆ. ಚತುರ್ಭುಜಗಳಿಂದ ಕೂಡಿದ ಈ ದೇವತೆ ಒಂದು ಕೈಯಲ್ಲಿ ಕುಂಕುಮ, ಇನ್ನೊಂದರಲ್ಲಿ ಖಡ್ಗ, ಮತ್ತೊಂದರಲ್ಲಿ ಢಮರುಗ ಹಾಗೂ ನಾಲ್ಕನೇ ಕೈಯಲ್ಲಿ ತ್ರಿಶೂಲ ಹಿಡಿದು ವೀರಾಗ್ರಣಿಯಂತೆ ಕಾಣಿಸುತ್ತಾಳೆ. ಈಕೆಯ ತಲೆಯ ಮೇಲೆ ಕಿರೀಟವಿರುತ್ತದೆ. ಮಾಸ್ತೆಮ್ಮನ ಪರಂಪರೆಯ ದೈವಗಳ ಸ್ವರೂಪ ಸಾಮಾನ್ಯವಾಗಿ ಒಂದೇ ರೀತಿಯಾಗಿರುತ್ತದೆ. ಒಂದು ಕಲ್ಲಿನಲ್ಲಿ ಕೇವಲ ತೋಳು ಇದ್ದ ಶಿಲ್ಪವಿರಬಹುದು. ಆಕೆಯನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುವ ಚಿತ್ರವಿರಬಹುದು. ಇವೆಲ್ಲಾ ಮಾಸ್ತ್ಯಮ್ಮಗಳಾಗಿರುತ್ತವೆ. ಮಾಸ್ತ್ಯಮ್ಮಗಳು ಹೆಚ್ಚಾಗಿ ಊರ ಹೊರಗಿನ ಶಿಲೆಗಳಲ್ಲಿ ಶಿಲ್ಪಗಳ ರೂಪದಲ್ಲಿ ಪೂಜೆಗೊಳ್ಳುತ್ತವೆ.

ಎಲ್ಲಮ್ಮನ ಪರಂಪರೆಯ ಹಾಗೂ ಮಾರೆಮ್ಮನ ಪರಂಪರೆಯ ಎಲ್ಲ ಹೆಣ್ಣು ದೈವಗಳು ಅಗಲವಾದ ಕುಂಕುಮದ ಬೊಟ್ಟನ್ನು ಹಣೆಗಿಟ್ಟುಕೊಂಡು ಕೈಗಳ ತುಂಬ ಬಳೆಗಳನ್ನು ಧರಿಸುತ್ತವೆ. ಎಲ್ಲವ್ವ-ದ್ಯಾಮವ್ವ ಹಸಿರು ಬಳೆಗಳನ್ನು ಧರಿಸಿದ್ದರೆ, ಉಗ್ರದೈವಗಳಾದ ಮಾರೆಮ್ಮ-ಪ್ಲೇಗಮ್ಮ ದೈವಗಳು ಕೆಂಪು ಬಳೆಗಳನ್ನು ಧರಿಸಿರುತ್ತವೆ. ಸಾಮಾನ್ಯವಾಗಿ ಈ ಗ್ರಾಮದೇವತೆಗಳು ಊರಿನ ದಕ್ಷಿಣದ ಗಡಿಭಾಗದಲ್ಲಿ ಪೂರ್ವಾಭಿಮುಖವಾಗಿರುತ್ತವೆ. ಕೆಲವು ದೇವತೆಗಳು ಕುಳಿತಿರುತ್ತವೆ. ಕೆಲವು ದೇವತೆಗಳು ನಿಂತಿರುತ್ತವೆ. ಕೆಲವು ಕಡೆ ಎರಡು-ಮೂರು ವಿಗ್ರಹಗಳು ಒಂದು ಕಡೆ ನೆಲೆನಿಂತು ಪೂಜೆಗೊಳ್ಳುತ್ತವೆ. ಹೀಗೆ ರೂಪದಲ್ಲಿ ವೈವಿಧ್ಯಮಯವಾಗಿರುವ ಈ ಹೆಣ್ಣುದೈವಗಳನ್ನು ಕುರಿತಂತೆ ಜನಪದ ಗರತಿಯರು ತುಂಬ ವರ್ಣರಂಜಿತವಾಗಿ ಹಾಡುಕಟ್ಟುತ್ತಾರೆ. ಅವುಗಳಲ್ಲಿ ಕೆಲವು ಹಾಡುಗಳನ್ನಿಲ್ಲಿ ಗಮನಿಸಬಹುದು.

"ಎಲ್ಲಾ ದೇವರ ಮುಂದೆ ಕಲ್ಲೀನ ವಲೆಗುಂಡ
ಹೊನ್ನಾದ ಹುಲಿಗವ್ವ ಬಾಳಾದು ನಿಜವಂತೆ
ಸಲ್ಲೇದ ಮೂರೇನ ವಲೆಗುಂಡ ಹುಲಿಗೆವ್ವ"

"ನಡುವೊಂದು ಹಿಡಿಯಲ್ಲೆ ಜಡೆಯೊಂದು ಮಾರಲ್ಲೆ
ಗಡಿಯಾರದೆಣ್ಣೆ ಚೌಡಮ್ಮ| ಉಜ್ಜನಿಯ
ಗಡಗೀಗೆ ತನಿಯ ಎರೆದಾಳೇ"

"ಕೈಯ್ಯಾಕಂಕಣದೋಳೆ ಮಯ್ಯಬಾಸಣದೋಳೆ
ವೈಯಾರಿ ಸಣ್ಣ ದನಿಯೋಳೆ| ಚೌಡಮ್ಮ
ಉಯ್ಯಾಲೆಯನ್ನಿಳಿದು ಬಂದ್ಹೋಗೆ"

"ಕೆಂಜೆಡೆಯನ್ನು ಬಿಟ್ಟು ಮುಂದೆಕ್ಕ ಸಾಗುತ
ಕೆಂಡದಂತೆ ಸಣ್ಣ ಕಿಡಿಕಡಿ ಸೂಸುತ
ಕರಕರ ಹಲ್ಲು ಕಡಿದು ದೇವಿಬರುತ್ತಾಳ"

ಈ ತ್ರಿಪದಿಗಳಲ್ಲಿ ಜನಪದ ಹೆಣ್ಣುದೈವಗಳ ರೂಪ ಕಲಾತ್ಮಕವಾಗಿ ಮೂಡಿಬಂದಿರುವುದನ್ನು ಕಾಣಬಹುದಾಗಿದೆ. ಕಲ್ಲಿನ ವಲೆಗುಂಡಿಗಳ ರೂಪದ, ನಡುವಿನ ಉದ್ದ ಜಡೆಯುಳ್ಳ ದೇವಿ, ಕಂಕಣದ ಕೈಯವಳು ಸಣ್ಣ ದನಿಯವಳು ಅಮ್ಮ, ಕೆಂಜೆಡೆಯುಳ್ಳವಳು, ಕೆಂಗಣ್ಣುಬಿಟ್ಟವಳು ಕರಕರ ಹಲ್ಲು ಕಡಿಯುವ ಹೆಮ್ಮಾರಿ ದೈವ ಹೀಗೆ ಈ ದೈವಗಳ ರೂಪ-ಸ್ವರೂಪಗಳಿಗೆ ಸಂಬಂಧಿಸಿದಂತೆ ಜನಪದ ಗರತಿಯರು ವರ್ಣಮಯವಾದ ಕಾವ್ಯಕಟ್ಟಿದ್ದಾರೆ. ಆಯಾ ಪ್ರದೇಶಗಳಿಗೆ ತಕ್ಕಂತೆ ಅಲ್ಲಿಯ ವೈಶಿಷ್ಟ್ಯತೆಗಳನ್ನು ಸಾರುವ ದೇವಿಯ ಸ್ವರೂಪ ಜನಪದ ಕಾವ್ಯದಲ್ಲಿ ವೈವಿಧ್ಯಮಯವಾಗಿ ಮೂಡಿಬಂದಿದೆ.

"ಬನ್ನೀಯ ಮರದಾಕಿ ಬೆಳ್ಳಿಯ ಮರದಾಕಿ"

"ಎಳೇಸೂಸಿ ಎಲೆಯೋಳೆ ಮಳೆಪೈರ ಮುಡಿಯೋಲೆ"

"ಪಚ್ಚೆಯ ಮುಡಿಯೋಳೆ ಪಾಲೀಸಿ ಮೆರಿಯೋಳೆ"

"ಕಣ ಕೈಯಕ್ಕಯೋಲೆ ಕಸ್ತೂರಿ ಮೈಯ್ಯವಳೆ"

"ಚಿರತೆ ರೂಪ ತೊಟ್ಟು ಮಾರೆಮ್ಮ ಬಂದಾಳೊ"

"ಕಣ್ಣಬಿಟ್ಟು ತೊಟ್ಟವಳೆ ಕ್ವಾರಮೀಸಿ ಮುಖದವಳೆ"

ಇಂತಹ ನುಡಿಗಳಲ್ಲಿ ಈ ಹೆಣ್ಣು ದೈವಗಳ ರೂಪ ನಿಚ್ಚಳವಾಗಿ ಮೂಡಿರುವುದನ್ನು ಕಾಣಬಹುದಾಗಿದೆ. ರೂಪ-ಸ್ವರೂಪದ ದೃಷ್ಟಿಯಿಂದಲೂ ಲಕ್ಷಣಗಳು ವಿಶಿಷ್ಟವಾಗಿವೆ.

ಪ್ರಾರಂಭದಲ್ಲಿ ಜನಪದ ದೈವಗಳು ಅಲಂಕಾರ ಪ್ರಿಯರಾಗಿರಲಿಲ್ಲ. ನಂತರದ ದಿನಗಳಲ್ಲಿ ಅನೇಕ ಬೆಳವಣಿಗೆಗಳಾದವು. ಎಲ್ಲಮ್ಮ-ದ್ಯಾಮವ್ವ ದೇವತೆಗಳು ಹಸಿರು ಸೀರೆಯನ್ನುಟ್ಟರೆ, ಮಾರೆಮ್ಮಸಿಡುಬಮ್ಮ ದೇವತೆಗಳು ಕೆಂಪುಸೀರೆಯನ್ನುಟ್ಟಿರುತ್ತವೆ. ತಲೆಯ ಮೇಲೆ ಹೂವಿನ ಈ ದಂಡಿ, ಕಿವಿಯಲ್ಲಿ ಮುತ್ತಿನಮಾಲೆ, ಕೊರಳಲ್ಲಿ ಕವಡೆಸರ ಧರಿಸಿರುವ ಈ ದೈವಗಳು ಕೈಯಲ್ಲಿ ಖಡ್ಗಗಳನ್ನು ಹಿಡಿದಿರುತ್ತವೆ. ಈ ಉಡಿಗೆ ತೊಡಿಗೆಗಳನ್ನು ಕುರಿತಾದ ವರ್ಣನೆಯನ್ನು ಜನಪದ ಗರತಿಯಿಂದಲೇ ಕೇಳಬೇಕು.

"ನಿನ್ನ ತಲೆಯ ಮ್ಯಾಲ ಮುತ್ತಿನ ದಂಡಿ ಮಾದೇವಿ

ನಿನ್ನ ಹಣೆಯ ಮ್ಯಾಲ ಕೂಕುಮರೇಖ ಮಾದೇವಿ

ನಿನ್ನ ಕಿವಿಯಲ್ಲಿ ಮುತ್ತಿವಾಲ್ಯ ಮಾದೇವಿ

ನಿನ್ನ ಮೂಗಿನಲ್ಲಿ ರಾಗೋಡಿನತ್ತು ಮಾದೇವಿ

ನಿನ್ ನ ಕೊರಳಲ್ಲಿ ಕವಡೆಯ ಸರವೈತಿ ಮಾದೇವಿ

ನಿನ್ನ ಟೊಂಕದಲ್ಲಿ ಮಕ್ಮಲ್ ಡಾಬ ಮಾದೇವಿ

ನಿನ್ನ ಕೈಯಲ್ಲಿ ಉರಿಯಪತ್ತಿ ಮಾದೇವಿ

ನಿನ್ನ ಕೈದೊಳಗ ಭಂಡಾರ ಪರಡಿ ಮಾದೇವಿ

ನಿನ್ ನ ಕಾಲಲ್ಲಿ ಗಿಲ್‌ಗಿಲ್ ಗೆಜ್ಜೆ ಮಾದೇವಿ"

ಎಲ್ಲಮ್ಮನ ಉಡಿಗೆ ತೊಡಿಗೆಗಳನ್ನು ಕುರಿತಂತೆ ಎಲ್ಲಮ್ಮನ ಜೋಗತಿಯರು, ಭೂತೆಯರು ಹಾಡುವ ಹಾಡು ಇದು. ಕಾಲಮ್ಮನ ಉಡಿಗೆ ತೊಡಿಗೆಗಳನ್ನು ಕುರಿತು ಕಾಲಮ್ಮನ ಭಕ್ತರು ಈ ರೀತಿ ಹಾಡುತ್ತಾರೆ.

"ಸಣಾನೆ ಎದಿಮಾಯ್ನ ನೊಸಲಲ್ಲೆ ಹಚ್ಚಿಕೊಂಡು

ಕನ್ನಡಿ ಹಿಡಿದು ತಾನು ನುಗತ್ತಾಳೆ

ಉಂಗುರ ಕೂದಲ ನಕ್ಕರಿಕರಿಹಲ್ಲ

ಚಿಕ್ಕಮ್ಮ ಲಕೀನ ತುಂಬಾ ಹೆಡಕಿಲ್ಲೇಳಮ್ಮ

ಅವಳಿಸರ ಗವಳಿಸರ ಜೋಡು ಮುತ್ತಿನ ಹಾರ

ಹಾರಕವಡಿಯೆಸರ ಕೊರಳಿಗೇಳಮ್ಮ

ಮಕರ ಮಲ್ಲಿಗಿ ಹೂವು ತುರಬಿಗೇಳಮ್ಮ"

ಈ ಹಾಡಿನಲ್ಲಿ ಕಾಳಮ್ಮ ಅಲಂಕೃತ ಮೂರ್ತಿ ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗಿದೆ. ಉಡಿಯಲ್ಲಿ ಭಂಡಾರ ತುಂಬಿಕೊಂಡು, ಹಣೆಯಲ್ಲಿ ಕುಂಕುಮ ಹಚ್ಚಿಕೊಂಡಿರುವ ಈ ದೈವಗಳ ವೇಷಭೂಷಣಗಳು ಅದ್ಭುತವಾಗಿ ಕಾಣಿಸುತ್ತವೆ.

ಈ ದೈವಗಳು ಉಡುವ ಸೀರೆಯ ಪರಿಯನ್ನು ಕುರಿತಂತೆ ಜನಪದ ಗರತಿ ಹೀಗೆ ಹೇಳುತ್ತಾಳೆ.

"ಎಲ್ಲಮ್ಮ ಎಡುವದು ಎಳ್ಳ ಹೂವಿನ ಸೀರಿ

ಬಡವರದಾಕೆ ದ್ಯಾವ್ವ ಉಡವಸೀರಿ

ಎಳಿಎಳಿಗೆಲ್ಲ ಬಿಳಿಮುತ್ತು"

"ಕಾಳಮ್ಮ ಉಟ್ಟಾಗ ಕಾಡಿಗಣಿನ ಸೀರಿ

ಕಾಲಗ್ಹಾಕ್ಯಾಳರುಳಿಕಡ| ಹಳಕಟ್ಟಿ

ಈರಣ್ಣಗ ಈಳ್ಯಾಮಡಚ್ಯಾಳ||

"ಎಲ್ಲಮ್ಮ ಉಡುವಾದುಳ್ಳ ಹೂವಿನ ಸೀರಿ

ಜಗದುಂಬುಡುವಾದು ಜರತಾರಿ ಚೆಂಚೂರು

ಮಾಪೂರುಡುವಾದುದು ಎಲಿ ಬೇವು

ನಾಗರಗಂಬಿ ಸೀರೆ ನಾಕ್ವಾರದ್ಮೊ ನ್ಮೋಲೆ

ಪಂಚಕದ ಗಿಂಡಿ ಬಲಗೈಲಿ ಹಿಡ್ಕೊಂಡು

ಪಂಚಮಿಯ ಮಾಡ್ಯಾಳೆ ಮಾಕಾಳಿ

ಈ ತ್ರಿಪದಿಗಳಲ್ಲಿ ಎಲ್ಲಮ್ಮ, ಕಾಳಮ್ಮ ಮಾಪೂರತಾಯಿ, ಮಾಕಾಳಿ ಈ ದೈವಗಳು ಉಡುವ ಸೀರೆಗಳ ಸ್ವರೂಪದ ಬಗೆಗೆ ತಿಳಿಸಿದರೆ, ಕೆಳಗಿನ ತ್ರಿಪದಿಗಳಲ್ಲಿ ಆಭರಣಗಳ ವಿಶಿಷ್ಟತೆ ಕುರಿತು ಹೇಳುತ್ತಾಳೆ.

"ಉಂಗುರದ ಕಾಲ ಊರೂತ ಜಾರೂತ

ಬಂಗಾರದ ನಡುವ ಬಳಕುತ| ಚೌಡಮ್ಮ

ಬಂದಾಳು ಬಳೆಯ ಹಸುರಾಕೆ"

"ಪಿಲ್ಲಿ ಕಾಲೋಳೆ ಪಿರಿಯಾಪಟ್ಟಣದೋಳೆ

ಕಲ್ಲ ಮೇಲೆ ಪಾದ ತೊಳೆಯೋಳೇಮಾಕಾಳಮ್ಮ

ಪಿಲ್ಲಿ ಸಾವಿಕಕ್ಕೆ ಬೆಲೆಯಾದೂ"

ಎನ್ನುವಲ್ಲಿ ಕಾಲುಂಗರ, ಕಾಲಪಿಲ್ಲಿ, ಹಸಿರು ಬಳೆಗಳ ಪ್ರಸ್ತಾಪ ಬರುತ್ತದೆ. ಜನಪದ ಗರತಿಯ ಭಾವನೆಯಲ್ಲಿ ಈ ಹೆಣ್ಣುದೈವಗಳು ಸಕಲಾಂಕಾರಭೂಷಿತೆಯರಾಗಿ ಕಂಡಿವೆ. ಕಸ್ತೂರಿ ಸೀರೆಯವಳು, ಕಣ್ಣಕಪ್ಪಮುಖಕದೋಳು, ಚಿತ್ತಾರವನುಟ್ಟವಳು, ಬೈತಲೆಯ ಬಿಟ್ಟವಳು, ಅಂಚಿನಸೀರೆಯವಳು, ಕಂಚಕಸ್ತೂರಿಯವಳು - ಇಂತಹ ಪದಗಳಲ್ಲಿ ಕಾಣಿಸುವ ವರ್ಣನೆ ಗಮನಸೆಳೆಯುತ್ತದೆ.

ಈ ಹೆಣ್ಣು ದೈವಗಳ ವಾದ್ಯಗಳುವಾಹನಗಳು ವಿಶಿಷ್ಟವಾಗಿವೆ. ಹುಲಿ, ಕುದುರೆ, ಸಿಂಹ, ಗರುಡ ಪ್ರಾಣಿಗಳು ಈ ದೈವಗಳ ವಾಹನಗಳಾಗಿರುತ್ತವೆ. ಕ್ರೂರ ಪ್ರಾಣಿಗಳನ್ನು ಪಳಗಿಸಿ ತನ್ನ ವಾಹನಗಳನ್ನಾಗಿ ಮಾಡಿಕೊಂಡು ಮೆರೆಯುವ ಅಮ್ಮನವರ ಪ್ರಭಾವವನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ. ದುಷ್ಟರನ್ನು ಸಂಹರಿಸಲು ಅಮ್ಮ ಕ್ರೂರ ಪ್ರಾಣಿಗಳನ್ನೇ ತನ್ನ ವಾಹನಗಳನ್ನಾಗಿ ಉಪಯೋಗಿಸಿಕೊಳ್ಳುತ್ತಿರುವುದು ಗಮನೀಯ. ಕೆಲವು ದೇವತೆಗಳು ವಾಹನಗಳನ್ನೆ ತಮ್ಮ ವಾಹನಗಳನ್ನಾಗಿ ಮಾಡಿಕೊಂಡಿರುತ್ತವೆ. ಜಾತ್ರೆಯ ದಿವಸ ಅಮ್ಮನವರ ಈ ವಾಹನಗಳ ಪೂಜೆ ಮೆರವಣಿಗೆ ನಡೆಯುತ್ತದೆ. ಈ ಅಮ್ಮ ಭಯಂಕರವಾದ ಪ್ರಾಣಿಗಳ ಮೇಲೆ ಕೂತ ಸವಾರಿಬರುವುದನ್ನು ಜನಪದ ಗರತಿ ಹೀಗೆ ವರ್ಣಿಸಿದ್ದಾಳೆ.

"ಹೌದನ್ನದೇವಿ ಗರಡಾನೇರ್‍ಯಾಳ ರಾಮನ ತಾಯಿ

ಆನಂದಮಾಯಿ ಕುದರಿಯೇಳ ರಾಮನತಾಯಿ

ಬಂಗಾರದ ಕುಪ್ಪೆಬ್ಯಾರಿಮ್ಯಾಲ ಜಗದಂಬಾ

ಕುಂತಾಳ ಹುಲಿಯೇರಿ"

"ಮಾಯ್ನ ನಿಂತವ್ಳೆ ನೀರಾಲ ನೋಡ್ತವ್ಳೆ

ಏರಿಗು ನೀರಿಗು ಸಮನೆಂದು| ಕಾಳಮ್ಮ

ಏರಿವೈ ಹೊನ್ನ ಕುದುರೇಯ"

ಕೊಡಬೇಕೋ

ಚಿಂತೆಯ ಅಮ್ಮನ ನೋಡಬೇಕೊ

ಈ ಮೊದಲಾದ ಹಾಡುಗಳಲ್ಲಿ ಈ ದೈವಗಳ ವಾಹನಗಳನ್ನು ಕುರಿತಂತೆ ವಿವರವಾಗಿ ಹೇಳಲಾಗಿದೆ. ಶಿಷ್ಟದೈವಗಳು ಸಾಧುಪ್ರಾಣಿಗಳು ಮೇಲೆ ಸವಾರಿಮಾಡಿದರೆ ಈ ಶಕ್ತಿದೈವಗಳು ಕ್ರೂರಪ್ರಾಣಿಗಳ ಮೇಲೆ ಸವಾರಿ ಮಾಡುವುದು ವಿಶಿಷ್ಟವಾಗಿ ಕಾಣಿಸುತ್ತದೆ. ಹುಲಿಯ ಮೇಲೆ ಕುಳಿತು ಸವಾರಿ ಮಾಡುತ್ತಲೇ ಇರುವ ಸವಾರೆಮ್ಮನೆಂಬ ದೇವತೆ ರಾಯಚೂರಿನ ಮಡ್ಡೀಪೇಟೆಯಲ್ಲಿದ್ದಾಳೆ.

ಚರ್ಮದಿಂದ ಮಾಡಿದ ವಾದ್ಯಗಳೇ ಈ ಶಕ್ತಿದೇವತೆಗಳ ಜಾತ್ರೆಗಳಲ್ಲಿ ಉತ್ಸವಗಳಲ್ಲಿ ಬಳಕೆಯಾಗುತ್ತವೆ. ತಮಟೆ, ಹಲಗೆ, ಕಹಳೆ, ಚೌಡಿಕಿ, ತಿಂತಿಣಿಯಂತಹ ವಾದ್ಯಗಳನ್ನು ಇಲ್ಲಿ ಉಲ್ಲೇಖಿಸಬಹುದು. ನಾಜೂಕಿನ ದೇವತೆಗಳಿಗೆ ಇಂತಹ ವಾದ್ಯಗಳಿಂದ ಕಿವಿಗಡುಚಿಕ್ಕಬಹುದಾದರೂ, ಅಮ್ಮನಿಗೆ ಮಾತ್ರ ಇಂತಹ ವಾದ್ಯಗಳೇ ಪ್ರಿಯವಾಗಿವೆ.

ಈ ಶಕ್ತಿ ದೈವಗಳ ಆಹಾರ ಪದ್ಧತಿಯಲ್ಲೂ ವಿಶಿಷ್ಟತೆಯಿದೆ. ಇವು ಸಾಮಾನ್ಯವಾಗಿ ಮಾಂಸಹಾರಿ ದೈವಗಳು. ಶಾಖಾಹಾರಿ ಭಕ್ತರು ನೈವೇದ್ಯ ಸಲ್ಲಿಸಿದರೂ ಅಲ್ಲಿಯೂ ಕೂಡ ಜನಪದ ಆಹಾರವೇ ಆಗಿರುತ್ತದೆ. ಸಜ್ಜಿರೊಟ್ಟಿ, ಹಿಂಡಿಪಲ್ಯೆ, ಎಣ್ಣೆಬದನೆಕಾಯಿ, ಉಳ್ಳಾಗಡ್ಡಿ ಇಂತಹ ಸಸ್ಯಹಾರವನ್ನೇ ದೇವಿ ಸ್ವೀಕರಿಸುವುದು. ಕುರಿ-ಕೋಣದ ಆಹಾರ ಮಾತ್ರ ಈಕೆಗೆ ಸಂತೃಪ್ತಿನೀಡಬಲ್ಲ ಆಹಾರವಾಗಿದೆ. ಇನ್ನು ಕೆಲವು ಶಕ್ತಿ ದೈವಗಳು ಕಂಡಾತಿಂದು ಹೆಂಡಾಕುಡಿಯುತ್ತವೆ. ಹೆಂಡದ ಮಾರೆವ್ವದೇವತೆಗೆ ಆಹಾರವಿರದಿದ್ದರೂ ನಡೆದೀತು. ಆದರೆ ಹೆಂಡಮಾತ್ರ ನಿತ್ಯಬೇಕು.

ಅಮ್ಮನವರ ಜಾತ್ರೆ-ಉತ್ಸವ-ಬಲಿಪ್ರಸಂಗಗಳು ಕುತೂಹಲಕಾರಿಯಾಗಿರುತ್ತವೆ. ಮಂಗಳವಾರ ಮತ್ತು ಶುಕ್ರವಾರ ಇವು ಶಕ್ತಿದೇವತೆಯ ವಾರಗಳಾಗಿವೆ. ಮಂಗಳವಾರ ರೋಗರುಜಿನಗಳನ್ನು ಗುಣಪಡಿಸುವ ವಾರವಾದರೆ, ಶುಕ್ರವಾರ ಮಳೆ-ಬೆಳೆ ಕೇಳುವ ದಿನವಾಗಿದೆ.

"ವಾರದಿನದಲ್ಲಿ ಮನಿಮಾರು ಸಾರಸ್ಯಾಳ

ಗಂಧದ ಸೀಗಿ ತಾ ಬರದಾಳು| ಜಗದಂಭ

ಕೂಕಮ ಭಳೆಯತಾ ಹೊಡದಾಳು"

ಎಂಬಂತಹ ತ್ರಿಪದಿಗಳಲ್ಲಿ ಗರತಿರಣ್ಣನವರ ನಿರ್ದಿಷ್ಟ ವಾರಗಳನ್ನು ಗುರುತಿಸಿದ್ದಾಳೆ.

ಈ ದೇವತೆಗಳ ಹಬ್ಬ-ಜಾತ್ರೆಗಳು ವಿಶಿಷ್ಟವಾಗಿವೆ. ಹಬ್ಬ ಪ್ರತಿ ವರ್ಷ ಸುಗ್ಗಿಯ ನಂತರ ಯುಗಾದಿಗೆ ಮೊದಲು ನಡೆದರೆ, ದೇವಿ ಜಾತ್ರೆ ಕೋಣನ ಬಲಿ ಮಾತ್ರ ಮೂರು-ಐದು ವರ್ಷಕ್ಕೆ, ಇಲ್ಲವೆ ಒಂಬತ್ತು ವರ್ಷಕ್ಕೆ

ಇಲ್ಲವೆ ಹನ್ನೊಂದು ವರ್ಷಕ್ಕೊಮ್ಮೆ ನಡೆಯುತ್ತದೆ. ಪ್ರತಿವರ್ಷ ನಡೆಯುವ ಹಬ್ಬದಲ್ಲಿ ಜನಪದ ಕಲೆಗಳೆಲ್ಲ ಪ್ರದರ್ಶನಗೊಳ್ಳುತ್ತವೆ. ಚುಂಚೂರಮಾಪುರ ತಾಯಿಯ ಹಬ್ಬ ಮಳೆಗಾಲ ಮತ್ತು ಬೇಸಿಗೆ ಕಾಲ ಹೀಗೆ ವರ್ಷಕ್ಕೆ ಎರಡುಬಾರಿ ನಡೆಯುತ್ತದೆ. ಅನೇಕ ದೇವತೆಗಳ ಹಬ್ಬ ಉತ್ಸವಗಳು ವರ್ಷಕ್ಕೊಮ್ಮೆ ನಡೆಯುತ್ತವೆ.

"ವರಸಕ ಬರುವಾದು ದೊಡ್ಡಸರಿಹಬ್ಬ

ಬೀಸಿ ತುಂಬ್ಯಾಳ ಅರಿಸೀನ ಜಗದಂಬ

ಆರತೀಲೇ ರ್‍ಯಾಳ ಜಗಲೀಗೆ"

ಹೀಗೆ ವರ್ಷಕ್ಕೊಮ್ಮೆ ಹಬ್ಬವಾದರೆ, ಮೂರು ವರ್ಷಕ್ಕೊಮ್ಮೆ ಅಥವಾ ಐದು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಸಾಮಾನ್ಯವಾಗಿ ಈ ಶಕ್ತಿದೇವತೆಗಳ ಜಾತ್ರೆ ಬಯಲಿನಲ್ಲಿಯೇ ನಡೆಯುವಂತಹದ್ದಾಗಿದೆ.

"ಬನ್ನಿಯ ಮರದಾಕಿ ಬೆಳ್ಳಿಯ ಮಕದಾಕಿ

ಹೊನ್ನಮಾಪುರಿ ಹೊರ ಹೊಂಟು ಬರುವಾಗ

ಮತ್ತೀನ ಪರಸಿ ಎದುರಾಗ"

"ಎಲ್ಲವ್ವ ನಿಮ್ಮತೇರು ಕಲ್ಲಾಗಿಳೆದಾವು

ಬಲ್ಲೀದ-ಬಡವ ಒಂದಾಗಿ| ಕೂಡ್ಯಾರ

ಎಲ್ಲವ್ವನ ಜಾತ್ರಿಮಾಡ್ಯಾರ"

"ಹೂವನೋಡ ಹೂವಿನ ಮಾಲೆಯ ನೋಡ

ಗೋಕಾವಿ ಲಕ್ಕವ್ವನ ಪೂಜೆಯ ನೋಡ

ತೇರವ ನೋಡ ತೇರಿನ ಗಾಲಿಯ ನೋಡ

ಗೋಕಾಲಕ್ಕವ್ವನ ಪಾಲಿಕಯನೋಡ"

ಇಂತಹ ಅನೇಕ ಹಾಡುಗಳಲ್ಲಿ ಶಕ್ತಿ ದೇವತೆಯ ಜಾತ್ರೆಗಳ ವರ್ಣನೆಗಳನ್ನು ಕಾಣಬಹುದಾಗಿದೆ. ಜಾತ್ರೆಯಲ್ಲಿ ದೇವಿಗೆ ಭಕ್ತರು ಕುರಿಕೋಣಗಳ ಬಲಿಕೊಡುತ್ತಾರೆ.

"ಕರಿಯ ಕೋಣನ ತಂದು ಕಲ್ಲುಕಂಬಕೆ-ಕಟ್ಟಿ

ಎಲ್ಲಿಗೆ ಹೋಗಿದ್ದೆ ಕಬ್ಬಾಳೆ| ಕರಿದುರ್ಗಿ

ನಿರ್ಮರೆತವರ ಮನೆಯ ಮುರಿಯೋಕೆ"

"ಗೋಕಾವಿ ದ್ಯಾಮವ್ವ ಲೋಕಕ ಪರಸಿದ್ದಿ

ಕುಡಗೋಲ ಕೊಡ್ಲಿ ಹಿಡಿದಾಳೋ| ದ್ಯಾಮವ್ವ

ಕ್ವಾಣನ ಗೋಣ ಕಡಿದಾಳೊ"

ಎಂಬಂತಹ ತ್ರಿಪದಿಗಳಲ್ಲಿ ಬಲಿಯ ಪ್ರಸಂಗಗಳನ್ನು ವಿವರಿಸಲಾಗಿದೆ. ಹೀಗೆ ಈ ಅಮ್ಮನವರು ಜಾತ್ರೆ-ಬಲಿ ಪ್ರಸಂಗಗಳು ವಿಚಿತ್ರವಾಗಿ ಕಂಡರೂ ಅವುಗಳಲ್ಲಿ ದ್ರಾವಿಡ ಜನಾಂಗದ ಆಹಾರಪದ್ಧತಿ ಮತ್ತು ವರ್ಷಕ್ಕೊಮ್ಮೆ ಸಂಭ್ರಮಿಸುವ ಅವಕಾಶವಿರುವುದನ್ನು ಕಾಣಬಹುದಾಗಿದೆ. ಬಲಿಯ ಪ್ರಸಂಗಗಳು ಮಾಂಸಹಾರ ಪದ್ಧತಿಗೆ ಸಂದ ಗೌರವಗಳಾಗಿವೆ. ಜನಪದ ಆಹಾರ-ಪಾನೀಯಗಳೇ ಇಲ್ಲಿ ಅವರು ನಂಬಿಕೊಂಡಿರುವ ಅವರ ದೈವಗಳ ಆಹಾರ ಪಾನೀಯಗಳೂ ಆಗಿರುವುದು ಗಮನಿಸುವ ಅಂಶವಾಗಿದೆ.

ಈ ದೈವಗಳ ಆಚರಣೆಯಲ್ಲಿ ವಿಶಿಷ್ಟವಾದ ಲಕ್ಷಣಗಳಿವೆ. ಹಬ್ಬದ ಆಚರಣೆಗಳು-ಜಾತ್ರೆಯ ಆಚರಣೆಗಳು, ಹರಕೆಗಳು, ಸೇವೆಗಳು ಇಂತಹ ಅನೇಕ ಆಚರಣೆಗಳಲ್ಲಿ ಶಕ್ತಿ ದೇವತೆಗಳ ವೈಶಿಷ್ಟ್ಯ ಎದ್ದು ಕಾಣುತ್ತದೆ. ಉತ್ಸವದ ಅಂಗವಾಗಿ ನಡೆಯುವ ಆಚರಣೆಗಳಲ್ಲಿ ಕೆಂಡತುಳಿಯುವುದು, ಸಿಡಿಯಾಡುವುದು, ಚಾಟಿಯಿಂದ ಮೈಗೆ ಹೊಡೆದುಕೊಳ್ಳುವುದು, ನಾಲಗೆ ಗಲ್ಲಗಳ ನಡುವೆ ತಾಮ್ರದ ತಂತಿಚುಚ್ಚಿಕೊಳ್ಳುವುದು, ಎದೆ ಹಣೆಗೆ ಖಡ್ಗದಿಂದ ತಿವಿದು ರಕ್ತ ಚಿಮ್ಮಿಸಿಕೊಳ್ಳುವುದು, ಈಟಿಯಿಂದ ಹೊಟ್ಟೆಗೆ ಚುಚ್ಚಿಕೊಳ್ಳುವುದು, ತಲೆನೀಡಿ ಮುಡಿಸೇವೆ ಮಾಡುವುದು, ಉರುಳು ಸೇವೆ ಮಾಡುವುದು, ಬಸವಿ ಬಿಡುವುದು, ಬೆತ್ತಲೆ ಸೇವೆ ಮಾಡುವುದು ಹೀಗೆ ವಿವಿಧ ರೀತಿಯ ಆಚರಣೆಗಳಲ್ಲಿ ಈ ದೈವಗಳ ವಿಶಿಷ್ಟ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

ಏಕತೆಯಲ್ಲಿ ಅನನ್ಯತೆಯನನ್ನು ಕಾಣುವ ವಿಶಿಷ್ಟ ಆಚರಣೆಗಳನ್ನು ಹಟ್ಟಿಮಾರೆಮ್ಮನ ಜಾತ್ರೆಯಲ್ಲಿ ಮತ್ತು ಹುಲಿಗೆಮ್ಮನ ಜಾತ್ರೆಯಲ್ಲಿ ಕಾಣಬಹುದಾಗಿದೆ. ಮಧುಗಿರಿಯ ದಂಡಿನ ಮಾರೆಮ್ಮ ಜಾತ್ರೆಯ ಸಂದರ್ಭದಲ್ಲಿ ಪ್ರತಿಹಟ್ಟಿಗಳಲ್ಲೂ ಹುಟ್ಟಿ ಮೆರವಣಿಗೆಗೊಳ್ಳುತ್ತಾಳೆ. ಸಿದ್ಧನಾಯಕನ ಹಟ್ಟಿಮಾರಮ್ಮ, ದೊಡ್ಡಟ್ಟೆ ಮಾರಮ್ಮ, ಕುಲುಮೆ ಬೀದಿ ಹಟ್ಟಿಮಾರಮ್ಮ, ಹೂವಾಕಿಗರ ಬೀದಿ ಹಟ್ಟಿಮಾರಮ್ಮ ಹೀಗೆ ಆಯಾ ಹಟ್ಟಿಗಳ ಬೀದಿಗಳ ಹೆಸರಿನ ಮೂಲಕ ಈ ದೇವಿ ಬೆಳೆದು ನಿಂತು ಅನಂತ ರೂಪದಲ್ಲಿ ಕಾಣಿಸಿಕೊಳ್ಳುತ್ತಾಳೆ. ಇದೇ ರೀತಿ ರಾಯಚೂರ ಜಿಲ್ಲೆಯ ಮುನಿರಾಬಾದ ಹುಲಿಗೆಮ್ಮನ ಜಾತ್ರೆಯಲ್ಲಿ ಭಕ್ತರು ಹುಲಿಗೆಮ್ಮನ ಮೂಲಗುಡಿಯ ದೇವಿಯನ್ನು ತಾವಿದ್ದಲ್ಲಿಯೇ ಸೃಷ್ಟಿಸಿಕೊಳ್ಳುತ್ತಾರೆ. ಇಂತಹ ವಿಶಿಷ್ಟಲಕ್ಷಣಗಳನ್ನು ಶಿಷ್ಟದೈವಗಳಲ್ಲಿ ಕಾಣಲಾಗುವುದಿಲ್ಲ.

ಗ್ರಾಮದೇವತೆಗಳೆಲ್ಲಾ ಫಲಾಫಲವನ್ನು ನೀಡುವ, ಮಳೆಬೆಳೆ ಕೊಡುವ ದೈವಗಳಾಗಿವೆ. ಮಳೆಯನ್ನು ತರುವುದು, ಬೆಳೆಯನ್ನು ರಕ್ಷಿಸುವುದು, ಹೈನುಹೆಚ್ಚಿಸುವುದು, ಒಡ್ಡುಗಳನ್ನು ಸಂರಕ್ಷಿಸುವುದು, ರೋಗಹರಡದಂತೆ ನೋಡುವುದು, ಶಿಶುಮರಣವನ್ನು ನಿಲ್ಲಿಸುವುದು, ಜಗಳ ಬಗೆಹರಿಸುವುದು, ಬಂಜೆಯರಿಗೆ ಮಕ್ಕಳನ್ನು ಕೊಡುವುದು, ಹೊಲದ-ಊರಿನ ಗಡಿಗಳನ್ನು ನಿರ್ಧರಿಸುವುದು, ಭೂತ-ಪ್ರೇತಗಳನ್ನು ನಿವಾರಿಸುವುದು, ಗ್ರಾಮವನ್ನು ಸಂರಕ್ಷಣೆ ಮಾಡುವುದು ಹೀಗೆ ನೂರಾರು ಕಾರ್ಯಗಳನ್ನು ಈ ದೇವತೆಗಳು ಮಾಡಬೇಕಾಗುತ್ತದೆ.

ಹೀಗಾಗಿ ಇವು ಅಲಸಿಗಳಾಗದೆ ನಿರಂತರ ಕ್ರಿಯಾಶೀಲವಾಗಿರುತ್ತವೆ. ಈ ದೇವತೆಗಳಿಗೆ ಮೈತುಂಬ ಕೆಲಸಗಳಿದ್ದುದರಿಂದ ವಿಶ್ರಾಂತಿ ಪಡೆಯಲು ಪುರುಸೊತ್ತೇ ಇರುವುದಿಲ್ಲ.

ಕೆಲವೊಮ್ಮೆ ಬೇಸತ್ತು ನಿರ್ಲಕ್ಷ್ಯಮಾಡಿದರೆ ಈ ದೇವತೆಗಳು ಸತ್ವಪರೀಕ್ಷೆಗೊಳಗಾಗುತ್ತವೆ. ಗ್ರಾಮದ ಭಕ್ತರು ದೇವತೆ ಫಲಕೊಡದಿದ್ದರೆ, ಒತ್ತಾಯ ಮಾಡುತ್ತಾರೆ, ಸತ್ಯಾಗ್ರಹ ಹೂಡುತ್ತಾರೆ. ಮೆಣಸಿನಕಾಯಿ ಪುಡಿಯ ಘಾಟಿ ಹಾಕುತ್ತಾರೆ. ಕೆಲವೊಂದು ಕಡೆ ಕಸಬರಗೆಯಿಂದ ಹೊಡೆಯುತ್ತಾರೆ. ಅಷ್ಟಕ್ಕೂ ದೇವತೆ ಒಲಿಯದಿದ್ದರೆ ಈಕೆಯನ್ನು ಕೈಬಿಟ್ಟು ಮತ್ತೊಬ್ಬ ದೇವತೆಯ ಹತ್ತಿರ ಹೋಗುತ್ತಾರೆ. ಹೀಗಾಗಿ ಈ ದೇವತೆಗಳು ಬಹಳ ಜಾಗರೂಕತೆಯಿಂದ ನಡೆದುಕೊಳ್ಳಬೇಕಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಭಕ್ತರು ಸತ್ವಪರೀಕ್ಷೆಗಳನ್ನೊಡ್ಡುತ್ತಾರೆ. ಆಗ ಈ ದೇವತೆ ಆ ಸತ್ವಪರೀಕ್ಷೆಯಲ್ಲಿ ಇಲ್ಲದಿದ್ದರೆ ಊರಲ್ಲಿ ಈಕೆಗೆ ಕವಡೆಯ ಕಿಮ್ಮತ್ತೂ ಇರುವುದಿಲ್ಲ. ಹೀಗಾಗಿ ಭಕ್ತರ ಅಗ್ನಿಪರೀಕ್ಷೆಗಳಿಗೆ ಅನೇಕ ಗ್ರಾಮದೇವತೆಗಳು ಭಯಭೀತರಾಗುತ್ತಾರೆ. ಹರಕೆ ಹೊತ್ತ ಭಕ್ತರ ಸಮಸ್ಯೆಗಳನ್ನಂತೂ ಈ ದೆವತೆಗಳು ಪರಿಹರಿಸಲೇಬೇಕು. ಇಲ್ಲದಿದ್ದರೆ ಹರಕೆ ಹೊತ್ತವರು ಶಾಪಕ್ಕೆ ಗುರಿಯಾಗಬೇಕಾಗುತ್ತದೆ. ಶಿಷ್ಟಸಂಸ್ಕೃತಿಯಲ್ಲಿ ಶಿಷ್ಟದೇವತೆಗಳು ಭಕ್ತರಿಗೆ ಶಾಪ ಕೊಟ್ಟರೆ, ಜನಪದ ಸಂಸ್ಕೃತಿಯಲ್ಲಿ ಭಕ್ತರೇ ದೇವತೆಗಳಿಗೆ ಶಾಪಕೊಡುತ್ತಾರೆ.

ಇಂದಿನ ಕಾಲದಲ್ಲಿ ಒಂದೊಂದು ರೋಗಕ್ಕೆ ಒಬ್ಬೊಬ್ಬ ವಿಶೇಷ ವೈದ್ಯನಿರುವಂತೆ, ಹಿಂದೆ ಈ ಕಾರ್ಯವನ್ನು ಈ ಶಕ್ತಿದೇವತೆಗಳೇ ಮಾಡುತ್ತಿದ್ದವು. ಗಂಟಲಮಾರಿ ರೋಗಕ್ಕೆ ಗದ್ಯಾಲಮ್ಮನೇ ಬೇಕು. ರೋಗದಲ್ಲಿ ಕೆನ್ನೆಗಳು ಬಾತುಕೊಂಡು ಗಂಟಲವರೆಗೂ ಹಬ್ಬುತ್ತವೆ. ಆಗ ಗದ್ಯಾಲಮ್ಮನ ಹತ್ತಿರ ಹೋದ ಭಕ್ತರ, ದೇವಿಯ ಹೆಸರಿನಲ್ಲಿ ತುಂಬೇ ಎಲೆಗಳನ್ನು ಬೆಲ್ಲದಲ್ಲಿ ಅರೆದು ರಸಮಾಡಿ ಅದಕ್ಕೆ ಹಸಿಸುಣ್ಣ ಬೆರೆಸಿ ಹಚ್ಚಿಕೊಳ್ಳುತ್ತಾರೆ. ಆಗ ಬಾವು ಇಳಿದು ಆರಾಮವಾಗುತ್ತದೆ. ಸಿಡುಬುರೋಗಕ್ಕೆ ಸಿಡುಬಮ್ಮನೇ ಬೇಕು. ಬೇವಿನ ಸೊಪ್ಪನ್ನು ಅರೆದು ಅರಿಷಿಣದಲ್ಲಿ ಕಲೆಸಿ ಅಮ್ಮನ ಹೆಸರು ಹೇಳಿ ಹಚ್ಚಿಕೊಂಡರೆ ಸಿಡುಬುಹೋಗಲೇಬೇಕು. ಬೆನ್ನು ಪಣೆ ಅಥವಾ ರಾಜುಣ್ಣು ನಿವಾರಣೆಗೆ, ಮೇಕೆಮಾಂಸವನ್ನು ರಸಬಾಳೇ ಹಣ್ಣಿನೊಂದಿಗೆ ಜಜ್ಜಿ ಅಮ್ಮನ ಹೆಸರಿನಲ್ಲಿ ಗಾಯಕ್ಕೆ ಕಟ್ಟುತ್ತಾರೆ.

ಪ್ಲೇಗುವಿನಂತಹ ದೊಡ್ಡ ರೋಗ ನಿವಾರಣೆಗೆ ಪ್ಲೇಗಮ್ಮ ಪ್ರಸಿದ್ಧಳು. ಅದೇ ರೀತಿ ಕಾಲರಾ ರೋಗಕ್ಕೆ ಕಾಲರಮ್ಮ ಬೇಕೇ ಬೇಕು. ಕುರುವಿಗೆ ಕುರವತ್ತಿಮಾರಮ್ಮ ಎತ್ತಿದ ಕೈ. ಹೀಗೆ ಬೆಂಕಿರೋಗ, ಸೀಡೆರೋಗ, ಸರ್ಪೇರೋಗ, ಚರ್ಮರೋಗ ಈ ಎಲ್ಲ ರೋಗಗಳಿಗೂ ಸಿದ್ಧೌಷದಿ ಶಕ್ತಿ ದೇವತೆಗಳಲ್ಲಿದೆ. ಇಡೀ ಸಸ್ಯಸಂಕುಲ ಪ್ರಾಣಿಸಂಕುಲ-ಪಕ್ಷಿಸಂಕುಲಗಳನ್ನು ರಕ್ಷಿಸುವ ಈ ಅಮ್ಮ ಮನುಷ್ಯ ಸಂಕುಲದ ರಕ್ಷಣೆಯನ್ನು ಹೊತ್ತಿದ್ದಾಳೆ.

ಶಿಷ್ಟಸಂಸ್ಕೃತಿಯಲ್ಲಿ, ಶಿಷ್ಟದೈವಗಳಲ್ಲಿ ಹೆಣ್ಣಿಗೆ ಪ್ರಾಧಾನ್ಯತೆ ಕಡಿಮೆ. ಆದರೆ ಜಾನಪದ ಸಂಸ್ಕೃತಿಯಲ್ಲಿ-ಜನಪದ ದೈವಗಳಲ್ಲಿ ಹೆಣ್ಣೇ ಪ್ರಮುಖಸ್ಥಾನದಲ್ಲಿದ್ದಾಳೆ. ಮಾತೃಪ್ರಧಾನ ಸಂಸ್ಕೃತಿಯ ಅನೇಕ ಆಚರಣೆಗಳನ್ನು ಈ ಜನಪದ ಹೆಣ್ಣು ದೈವಗಳ ಆಚರಣೆಗಳಿಗೆ ಹೋಲಿಸಿ ನೋಡಬಹುದಾಗಿದೆ. ಈ ದೈವಗಳಲ್ಲಿ ಬಹುವಚನದ ಬಳಕೆಯಿಲ್ಲ. ಇಲ್ಲಿಯ ಭಕ್ತರು ಮತ್ತು ದೇವತೆಗಳು ಏಕವಚನದಲ್ಲಿಯೇ ಮಾತನಾಡುತ್ತವೆ. ಭಕ್ತ-ದೇವತೆಯೆಂಬ

ತಾರತಮ್ಯವಿಲ್ಲ. ಅನೇಕ ವ್ಯಕ್ತಿಗಳೇ ಇಲ್ಲಿ ದೈವಗಳಾಗಿ ಬೆಳೆದು ನಿಂತಿರುವುದರಿಂದ ಈ ಜನಪದ ದೈವಗಳ ಪರಂಪರೆ ಮನುಷ್ಯ ಪ್ರಯತ್ನಕ್ಕೆ ಸಂದ ಗೌರವವಾಗಿದೆ.

ಎಲ್ಲಮ್ಮನ ಕಥೆಯನ್ನಿಟ್ಟುಕೊಂಡು ವಿಶ್ಲೇಷಿಸುವುದಾದರೆ ಮೂಲತಃ ದ್ರಾವಿಡ ಬುಡಕಟ್ಟು ಮೂಲದ ಮಹಿಳೆಯಾದ ಎಲ್ಲಮ್ಮ ಪಿತೃಪ್ರಧಾನ ವ್ಯವಸ್ಥೆಯ ನೀತಿನಿಯಮಗಳಿಂದ ಕೂಡಿದ ಕಟ್ಟುನಿಟ್ಟಾದ ಜಮದಗ್ನಿಯನ್ನು ಮದುವೆಯಾಗುವುದರ ಮೂಲಕ ಸ್ವಚ್ಛಂಧವಾಗಿ ಬದುಕುವ ಪರಿಸರದಿಂದ ಒಮ್ಮೆಲೆ ಜಮದಗ್ನಿಯ ಉಸಿರುಕಟ್ಟಿಸುವ ಬಿಗಿ ಬಂಧನದ ಪರಿಸರದಲ್ಲಿ ಬದುಕುವುದು ತುಂಬಾ ಕಷ್ಟವಾಗುತ್ತದೆ. ಆದರೂ ಒಗ್ಗಿಕೊಂಡು ಬಾಳುವಾಗ ಮತ್ತೆ ತನ್ನ ಪೂರ್ವಾಶ್ರಮದ ಯೋಚನೆಯಿಂದಾಗಿ ಅವಳಲ್ಲಿ ರತಿ ಮನ್ಮಥರ ಜಲಕ್ರೀಡೆಯ ಮೂಲಕವೋ, ಮೀನುಗಳ ಮಿಲನದಿಂದಲೋ ಅವಳಲ್ಲಿ ಚಿತ್ತ ಚಂಚಲವಾಗಿ ಅದನ್ನು ಸಂಕೇತಿಸುತ್ತಿರುವ ಮರಳಿನ ಕೊಡ, ಸರ್ಪದ ಸಿಂಬಿಯನ್ನು ಎಲ್ಲಮ್ಮಳಿಗೆ ಜಮದಗ್ನಿ ವಿಧಿಸಿರುವ ಕಟ್ಟುನಿಟ್ಟು ನೀತಿ ನಿಯಮಗಳನ್ನು ಸಂಕೇತಿಸುತ್ತವೆ. ಅದೇ ಮರಳಿನ ಕೊಡ ಸರ್ಪದ ಸಿಂಬಿ ಹರಿದು ಹೋಗುವುದು ಎಲ್ಲಮ್ಮ ಬೇರೆಯವರೊಂದಿಗೆ ಕೂಡಿರುವ ಇಲ್ಲವೆ ಜಮದಗ್ನಿ ಅನುಮಾನಪಟ್ಟಿರುವುದನ್ನು ಸೂಚಿಸುತ್ತದೆ. ಈ ಬಗೆಯ ಸಂಕೇತಗಳನ್ನು ನಾವು ಎಚ್ಚರದಿಂದಲೇ ತೆಗೆದುಕೊಳ್ಳಬೇಕಾಗುತ್ತದೆ. ಏಕೆಂದರೆ ಮರಳಿನಿಂದ ಕೊಡ ಮಾಡುವುದು ಸಾಧ್ಯವಿಲ್ಲ. ಹಾಗೆಯೇ ಸರ್ಪವನ್ನು ಯಾರೂ ಸಿಂಬಿಯಾಗಿ ಬಳಸುವುದೂ ಸಹ ಅಸಾಧ್ಯ. ಇಲ್ಲಿ ಮಾತೃಪ್ರಧಾನ ಸಂಸ್ಕೃತಿಯ ಮೇಲೆ ಪಿತೃಪ್ರಧಾನ ಸಂಸ್ಕೃತಿಯ ಸಂಸ್ಕೃತಿಯ ಪ್ರಭಾವವನ್ನು ಗುರುತಿಸಬಹುದು. ಈ ಕಥೆಯು ಮುಂದುವರೆದುದನ್ನು ಗಮನಿಸಿದಾಗ ಅಲ್ಲಿ ಮತ್ತೆ ಎಲ್ಲಮ್ಮ ಜಮದಗ್ನಿಯಿಂದ ಕುಷ್ಟರೋಗದ ಶಾಪಕ್ಕೊಳಗಾಗಿಯೋ, ಇಲ್ಲವೆ ಪಿತೃಪ್ರಧಾನ ಸಂಸ್ಕೃತಿಯ ಮೌಲ್ಯಗಳನ್ನು ಒಪ್ಪಿಕೊಳ್ಳದೆಯೋ ಮತ್ತೆ ತನ್ನನ್ನು ಸಮರ್ಥಿಸಿಕೊಂಡು ಜಮದಗ್ನಿಯಿಂದ (ತನ್ನ ಮೌಲ್ಯಗಳನ್ನು) ಅವನ ರೀತಿನೀತಿಗಳನ್ನು ಒಪ್ಪದೆ ಹೊರ ನಡೆದಾಗ ನಾಥಪಂಥದ ಉಕ್ಕಯ್ಯ ಜೋಗಯ್ಯನವರ ಪ್ರಭಾವಕ್ಕೆ ಮತ್ತೆ ಎಲ್ಲಮ್ಮ ಒಳಗಾಗಿ ದ್ರಾವಿಡ ಪಂಥದ ಮೇಲೆ ಈ ಜೋಗಿಗಳ ಮೂಲಕ ನಾಥಪಂಥದ ಪ್ರಭಾವವನ್ನು ಗುರುತಿಸಬಹುದಾಗಿದೆ. ಎಲ್ಲಮ್ಮಳಿಗೆ ಅವಳ ಕುಷ್ಟರೋಗವನ್ನು ಪರಿಹರಿಸುವ ಮೂಲಕ ವೈದ್ಯಪದ್ಧತಿಯನ್ನು ತಿಳಿದಿರುವ ನಾಥರು ಅಂದು ಬಳಸಿದ್ದ ಭಂಡಾರ ಬೇವಿನ ಎಲೆಯ ಮದ್ದು ಎಲ್ಲಮ್ಮಳ ಭಕ್ತರು ಇಂದೂ ಬಳಸುತ್ತಿರುವ ಭಂಡಾರ ಬೇವಿನ ಎಲೆ ತುಂಬ ಮಹತ್ವವನ್ನು ಪಡೆದು ಎಲ್ಲಮ್ಮ ಅಂದರೆ ಹುಲಿಗೆಮ್ಮ ಒಟ್ಟಾಗಿ ಅಮ್ಮ ಸಂಪ್ರದಾಯದಲ್ಲಿ ಬೇವಿನ ಮರ, ಎಲೆ, ಭಂಡಾರ ಬೇರೆ ಅಲ್ಲ, ದೇವತೆ ಎಲ್ಲಮ್ಮ ಬೇರೆಯಲ್ಲ ಎನ್ನುವಷ್ಟರ ಮಟ್ಟಿಗೆ ಬರೆತಿರುವ ಭಂಡಾರ ಮತ್ತು ಬೇವಿನ ಎಲೆಗಳು ನಾಥಪಂಥದ ಕೊಡುಗೆಗಳೇನೋ ಎಂದು ಅನಿಸದೆ ಇರುವುದಿಲ್ಲ. ಉಕ್ಕಯ್ಯ ಜೋಗಯ್ಯರ ಮತ್ತೆ ಎಲ್ಲಮ್ಮನ ಸಂಪ್ರದಾಯದ ಮೇಲೆ, ಕಥೆಯ ಮುಖಾಂತರ ಎಲ್ಲಮ್ಮ ಕುಷ್ಟರೋಗದಿಂದ ಗುಣಮುಖಹೊಂದಿ ಜಮದಗ್ನಿಯೊಂದಿಗೆ ನೊಂದರು ಪಿತೃವಾಕ್ಯ ಪರಿಪಾಲಕನಾದ ಪರಶುರಾಮ ತನ್ನ ತಾಯಿಯನ್ನು ಹತ್ಯೆಗೆಯ್ಯುವುದು ಮತ್ತೆ ಎಲ್ಲಮ್ಮನ ಮೇಲೆ ಪಿತೃಪ್ರಧಾನ ವ್ಯವಸ್ಥೆಯ ದೌರ್ಜನ್ಯವು ನಡೆದೇ ಹೋಗುತ್ತದೆ. ನಂತರದಲ್ಲಿ ಕಥೆಯ ಕೊನೆಗೆ ಮುಖವಾಡದೊಂದಿಗೆ ಪ್ರಜ್ವಲಿಸಲ್ಪಡುತ್ತಿರುವ ಎಲ್ಲಮ್ಮ ತನ್ನದೇ ಸಂಸ್ಕೃತಿಯ ಮಾತೃಪ್ರಧಾನ

ವ್ಯವಸ್ಥೆಯನ್ನು ಎತ್ತಿಹಿಡಿಯುವ ಜನಪದರ ದೈವವಾಗಿ ಹಲವು ಗ್ರಾಮಗಳಲ್ಲಿ ಹಲವು ಹೆಸರುಗಳಿಂದ ಕರೆಯಲ್ಪಡುತ್ತಿರುವ ಮಾತೃದೇವತಾ ಪರಂಪರೆಯ ಎಳೆಗಳಲ್ಲಿ ಇನ್ನಷ್ಟು ಕುತೂಹಲಕರ ಸಂಗತಿಗಳು ಅಡಗಿವೆಯೇ? ಪರಶುರಾಮ ಕಡೆದ ತಾಯಿಯ ಮುಖ ಹಲವು ಮುಖಗಳಾಗಿ ಚೆದುರಿ ಬಿದ್ದ ಸ್ಥಳಗಳಲ್ಲಿ ಹುಲಿಗಿಯ ಹುಲಿಗೆಮ್ಮನ ರೂಪವೂ ಒಂದು. ಹುಲಿಗೆಮ್ಮ ಎಲ್ಲಮ್ಮಳ ಪ್ರತಿರೂಪವಾಗಿದ್ದಾಳೆ. ಹುಲಿಗಿಯ ಗುಡಿಯನ್ನು ಒಮ್ಮೆ ಸುತ್ತಲು ಗಮನಿಸಿದಾಗ ಗರ್ಭಗುಡಿಯ ಮುಂದಿರುವ ಉಕ್ಕಯ್ಯ-ಜೋಗಯ್ಯರ ಶಿಲ್ಪಗಳು, ಗುಡಿಯ ಮುಂದಿರುವ ಮಾತಂಗಿ, ಹತ್ತಿರಕ್ಕಿರುವ ಪರಶುರಾಮನ ಗುಡಿ ಗಮನಸೆಳೆಯುತ್ತವೆ. ಜೊತೆಗೆ ಎಲ್ಲಮ್ಮಳೆ ಹುಲಿಗೆಮ್ಮಳಾಗಿ ಪೂಜಿಸಲ್ಪಡುತ್ತಿದ್ದಾಳೆಂಬುದು ಗೊತ್ತಾಗುತ್ತದೆ. ಹುಲಿಗೆಮ್ಮ ದೇವಿಯ ಬಗ್ಗೆ ಚರ್ಚಿಸುವಾಗ ಈ ದೇವತೆ ನೆಲೆಸಿರುವ ಹುಲಿಗಿ ಕ್ಷೇತ್ರವು ತುಂಬಾ ಮಹತ್ವವಾಗಿ ಕಂಡುಬರುತ್ತಿದೆ. ಏಕೆಂದರೆ ಒಂದು ಊರಿಗೆ ಒಂದು ಹೆಣ್ಣು ದೇವತೆಯ ಹೆಸರಿನಿಂದ ಊರಿಗೆ ಹೆಸರು ಬಂದಿದೆಯೊ ಇಲ್ಲವೆ ಊರಿನಿಂದ ದೇವತೆಗೆ ಹೆಸರು ಬಂದಿದೆಯೋ ಎಂದು ತಿಳಿಯುವುದು ಸಹ ಈ ಅಧ್ಯಯನದ ಸಂದರ್ಭದಲ್ಲಿ ತುಂಬಾ ಮುಖ್ಯ ಎಂದೆನಿಸುತ್ತದೆ. ಜನಪದರ ಪ್ರಕಾರ ಹುಲಿಗಿ ಗ್ರಾಮವು ಹಿಂದೆ ಹುಲಿಗಳ ವಾಸಸ್ಥಾನವಾಗಿದ್ದು ಇಲ್ಲಿ ಹುಲಿಗಳ ಸಂಖ್ಯೆ ಹೆಚ್ಚಾಗಿದ್ದು ಇವುಗಳನ್ನು ನಿಗ್ರಹಿಸಿದ ದೇವತೆಯೆ ಹುಲಿಗೆಮ್ಮಳಾಗಿ ಪರಿವರ್ತಿತಳಾದಳು. ಅಂದರೆ ಈ ಗ್ರಾಮದ ದೇವತೆಯು ಹುಲಿಗಳನ್ನು ನಿಗ್ರಹಿಸಿ ತನ್ನ ಹತೋಟಿಯಲ್ಲಿಟ್ಟುಕೊಂಡು ತನ್ನ ವಾಹನವಾಗಿ ಸ್ವೀಕರಿಸಿರುವ ಹಿನ್ನೆಲೆಯಲ್ಲಿ ಹುಲಿಗೆಮ್ಮ ಎಂದು ಇಲ್ಲಿಯ ಮಾತೃದೇವತೆಯನ್ನು ಕರೆಯಲಾಯಿತು ಎಂದು ತಿಳಿಸುತ್ತಾರೆ. ಹೀಗೆಯೇ ಇತ್ತೀಚಿಗೆ ಕೇಳಿಬರುತ್ತಿರುವ ಇನ್ನೊಂದು ಹೆಸರು ವ್ಯಾಘ್ರೇಶ್ವರಿ ಎಂದು. ಅಂದರೆ ವ್ಯಾಘ್ರೇಶ್ವರಿಯಿಂದ ಹುಲಿಗೆಮ್ಮ ಎಂದು ಹೆಸರು ಬಂದಿದೆ ಎಂದು ಇತ್ತೀಚಿನ ವೈದಿಕರ ವಾದವಾಗಿದೆ. ಆದರೆ ಎಂದಿಗೂ ಜನಪದದಿಂದ ಶಿಷ್ಟಪರಂಪರೆಯು ಆಸರೆ ಪಡೆಯುತ್ತದೆ ಎಂಬುದನ್ನು ಗಮನಿಸಬೇಕು. ವ್ಯಾಘ್ರೇಶ್ವರಿ ಇತ್ತೀಚಿಗೆ 'ಫ್ಯಾಶನ್ ಟ್ರೆಂಡ್' ಆಗಿರುವ ಹೆಸರು. ಯಾಕೆಂದರೆ ಮೂಲತಃ ಹುಲಿಗಳನ್ನು ನಿಗ್ರಹಿಸಿ ಹುಲಿಗೆಮ್ಮ ಎಂದು ಪ್ರಸಿದ್ಧಳಾದ ದೇವಿಯು ಇಂದು ಸಂಸ್ಕೃತೀಕರಣದ ಛಾಯೆಯಡಿ ವ್ಯಾಘ್ರೇಶ್ವರಿಯಾಗಿ ಮಾರ್ಪಾಡುಗೊಳ್ಳುತ್ತಿರುವುದನ್ನು ಗಮನಿಸಿದಾಗಲೂ ವ್ಯಾಘ್ರೇಶ್ವರಿಯಿಂದ ಹುಲಿಗೆಮ್ಮ ಎಂದು ಹೆಸರು ಬರಲು ಸಾಧ್ಯವಿಲ್ಲ. ಆದರೆ ಹುಲಿಗೆಮ್ಮಳಿಂದ ವ್ಯಾಘ್ರೇಶ್ವರಿ ಹೆಸರು ಬರುವುದಕ್ಕೆ ಸಾಧ್ಯತೆಗಳಿವೆ. ಹಾಗಾಗಿ ಹುಲಿಗೆಮ್ಮಳಿಂದಲೇ ವ್ಯಾಘ್ರೇಶ್ವರಿ ಹೆಸರು ಬಂದಿದೆ ಹಾಗೂ ಹುಲಿಗಳನ್ನು ನಿಗ್ರಹಿಸಿ ಈ ಸ್ಥಳದಲ್ಲೆ ನೆಲೆನಿಂತ ಈ ದೇವತೆಯಿಂದಾಗಿ ಈ ಗ್ರಾಮವು ಹುಲಿಗಿ ಕ್ಷೇತ್ರವಾಗಿ ಹೆಸರು ಪಡೆದಿರುವುದನ್ನು ಗಮನಿಸಿದರೆ ನಮ್ಮ ಮಾತೃಮೂಲ ಕುಟುಂಬ ವ್ಯವಸ್ಥೆಯಲ್ಲಿ ಕೇವಲ ತಾಯಿಯಿಂದ ಮಕ್ಕಳನ್ನು ಗುರುತಿಸುವುದಷ್ಟೇ ಅಲ್ಲ ಒಂದು ಊರಿನ ಹೆಸರೇ ಒಂದು ಹೆಣ್ಣಿನಿಂದ ಗುರುತಿಸಲ್ಪಡುತ್ತಿದೆ ಎಂಬುದು ನಮ್ಮ ಮಾತೃಮೂಲ ಪರಂಪರೆಯ ಗಟ್ಟಿತನ, ಶ್ರೇಷ್ಠತೆಯನ್ನು ಎತ್ತಿತೋರಿಸುತ್ತದೆ ಎಂದು ತಿಳಿಯಬಹುದು. ಹಾಗೆಯೇ ಹೆಣ್ಣಿನ ಶಕ್ತಿಶಾಲಿತನವನ್ನು ಇಲ್ಲಿ ಗುರುತಿಸಬಹುದು. ಗಂಡು ಪ್ರಾಣಿಗಳನ್ನು ನಿಗ್ರಹಿಸುವುದು ಸಾಮಾನ್ಯವಾದ ಸಂಗತಿ. ಆದರೆ ಹೆಣ್ಣು ಹುಲಿಗಳನ್ನು ನಿಗ್ರಹಿಸಿ ತನ್ನ ವೀರತ್ವವನ್ನು ಮೆರೆಸಲು ತಾನು ಯಾವ ಗಂಡಿಗಿಂತ ಕಡಿಮೆಯಲ್ಲ ಎಂದು ಸಾರಿ ಒಂದು ಊರನ್ನೇ ತನ್ನ ಹೆಸರಿನಲ್ಲಿ ನಿರ್ಮಿಸಿರುವ ಮಹಾತಾಯಿ ವೀರ ದೇವತೆ ಹುಲಿಗೆಮ್ಮ ದೇವಿಯ ಗರ್ಭಗುಡಿಯಲ್ಲಿ ದೇವತೆಯ ಮುಖವನ್ನೊಮ್ಮೆ ಗಮನಿಸಿದರೆ ಮುಖದ ಮೇಲೆ

ಪೌರುಷದ ಸಂಕೇತವೆನ್ನುವ ಮೀಸೆಯನ್ನು ಹೊತ್ತ ದೇವಿ ತಾನು ಯಾರಿಗಿಂತಲೂ ಕಡಿಮೆಯೇನಲ್ಲ ಎಂದು ಸಾರುತ್ತಿರುವುದನ್ನು ಕಾಣಬಹುದು. ಹೆಣ್ಣಿಗೆ ಹಲವು ಅಲಂಕಾರಗಳಿವೆ. ನಮ್ಮ ಸಾಮಾನ್ಯ ದೇವತೆಗಳು ಮುಡಿಯಿಂದ ಅಡಿಯವರೆಗೆ ಕೇವಲ ಅಲಂಕಾರಿಕವಾಗಿ ಆಭರಣಗಳನ್ನು ರೇಷ್ಮೆ ಸೀರೆ ಕುಪ್ಪಸಗಳನ್ನು ತೊಟ್ಟು ವಂಕಿ ಡಾಬು ಕಿರೀಟ ಕೊರಳಹಾರಗಳನ್ನು ತೊಟ್ಟರೆ ನಮ್ಮ ಗ್ರಾಮದೇವತೆಗಳು ಹಾವು, ಚೇಳು, ಹುಲಿ, ಸಿಂಹ, ಆನೆ, ಕಾಡುಮೃಗಗಳನ್ನು ತಮ್ಮ ವಾಹನವನ್ನಾಗಿ ಮಾಡಿಕೊಂಡು ಮೀಸೆಹೊತ್ತು ಯಾವ ಗಂಡಸಿಗಿಂತಲೂ ಕಡಿಮೆಯಿಲ್ಲ ಎಂದು ಸಾರುತ್ತಾ ಆಭರಣಕ್ಕಿಂತ ಹೆಚ್ಚಾಗಿ ಬೇವಿನ ಎಲೆ, ಉಪ್ಪು, ಮೆಣಸು ಹೀಗೆ ಪ್ರಾಕೃತಿಕ ವಸ್ತುಗಳೆ ಇವರಿಗೆ ಪ್ರಿಯವಾಗಿ ಇವುಗಳನ್ನು ದೇವತೆಗಳು ಧರಿಸುವುದಲ್ಲದೆ ತಮ್ಮ ಭಕ್ತರಿಗೂ ಬೇವಿನೆಲೆಯ ಉಡುಗೆ ತೊಡಿಸಿ ಭಂಡಾರ ಹಚ್ಚಿ ಅವರ ರೋಗರುಜಿನ ಸಂಕಟಗಳನ್ನು ಕಳೆಯುತ್ತ ಪ್ರಕೃತಿಯಿಂದಲೇ ಪರಿಹಾರಗಳನ್ನು ಸೂಚಿಸುತ್ತವೆ ಎಂದೆನಿಸುತ್ತದೆ.

ಒಂದು ಜನಪದ ದೇವತೆಯನ್ನು ಶಿಷ್ಟದೇವತೆಯಾಗಿ, ಹುಲಿಗೆಮ್ಮ ವ್ಯಾಘ್ರೇಶ್ವರಿಯಾಗಿ ಜನಪ್ರಿಯವಾಗುತ್ತಿರುವ ಕುರಿತು ಕೆಲವು ಮಾತನ್ನು ಹೇಳುವುದಾದರೆ, ಒಂದು ಕಡೆ ಕುರಿ ಕಡಿದು ದೇವತೆಗೆ ರಕ್ತ ತೋರಿಸಿ ಬೇವಿನ ಉಡುಗೆ ತೊಟ್ಟು ದೀಡ್ ನಮಸ್ಕಾರ ಹಾಕುತ್ತ ಉಪ್ಪಿನ ಹರಕೆ ತೀರಿಸುತ್ತ ಕಷ್ಟಗಳನ್ನು ಕಳೆಯುವಂತೆ ಬೇಡುವ ಜನಪದ ಭಕ್ತ ಸಮೂಹ, ಇನ್ನೊಂದೆಡೆ ಕುಂಕುಮಾರ್ಚನೆ, ಅಭಿಷೇಕ ಪೂಜೆ, ಎಲೆಪೂಜೆ ಹೀಗೆ ಹಲವು ವಿಶಿಷ್ಟ ಪೂಜೆಗಳನ್ನು ನಡೆಸುವ ಶಿಷ್ಟ ಸಮುದಾಯದ ವೈದಿಕ ಆಚರಣೆಗಳು ಒಂದು ಗ್ರಾಮದೇವತೆಯನ್ನು ತಮ್ಮದಾಗಿಸಿಕೊಳ್ಳುವ ಪ್ರಯತ್ನ ನಡೆಯುತ್ತಿದೆ ಎಂದೆನಿಸುತ್ತದೆ.

ಸಮಾಜವು ವ್ಯವಸ್ಥಿತವಾಗಿ ನಡೆಯಲು ಜನಪದರು ಕೆಲವೊಂದು ಆಚರಣೆಗಳನ್ನು ರೂಢಿಗೆ ತಂದರು. ರೂಢಿಗೆ ತಂದ ಇಂತಹ ಆಚರಣೆಗಳಲ್ಲಿ ಕೆಲವು ನಂಬಿಕೆಗಳನ್ನು ತಮ್ಮ ತೆಕ್ಕೆಯಲ್ಲಿಟ್ಟುಕೊಂಡು ಬಂದವುಗಳಾಗಿವೆ. ಉದಾಹರಣೆಗೆ, ದೇವರಿಗೆ ಕೋಳಿ, ಕುರಿಗಳನ್ನು ಬಲಿಕೊಡಬೇಕಾದರೆ ಮೂರು ಕಲ್ಲಿಟ್ಟು ಪೂಜೆ ಮಾಡಿ ಕೋಳಿ ಬಾಯಿಗೆ ನೀರು ಬಿಟ್ಟು, ಕುಯ್ದಾದ ಮೇಲೆ ರಕ್ತವನ್ನು ಕಲ್ಲಿನ ಮೇಲೆ ಹಾಕಿದರೆ ದೇವರು ಹೆಸರು ಹೇಳಿದರೆ ದೇವರಿಗೆ ಸಲ್ಲುತ್ತದಂತೆ.

ಇನ್ನು ಕೆಲವು ಆಚರಣೆಗಳಿಗೆ ನಂಬಿಕೆಗಳೇ ಮುಖ್ಯ ಕಾರಣಗಳಾಗಿರುತ್ತವೆ. ಆಚರಣೆಯಲ್ಲಿ ಬರುವ ಸಂಸ್ಕಾರಗಳು, ಬ್ರಹ್ಮದೇವಪಿತೃಮಾನವ ಮತ್ತು ಭೂತಗಳಿಗೆ ತೃಪ್ತಿ ಪಡಿಸುವ ಆಚರಣೆಗಳು ಇಂತಹ ನಂಬಿಕೆಗಳ ಹಿನ್ನೆಲೆಯಲ್ಲಿ ಬಂದಂತಹವುಗಳು. ಇಲ್ಲಿಯ ಆಚರಣೆಗಳಿಗೆ ಸಂಬಂಧಿಸಿದಂತೆ ನಂಬಿಕೆಯು ಗಣನೀಯವಾದ ಪಾತ್ರವನ್ನು ವಹಿಸುತ್ತದೆ.

ದೇವರು, ಭೂತ, ಪಿತೃಗಳ ಕಲ್ಪನೆಯು ಆದಿಮಾನವನಿಗೆ ಬಂದಂದಿನಿಂದ ಅವುಗಳ ಸಂತೃಪ್ತಿಗಾಗಿ ಮತ್ತು ಅವುಗಳು ತನಗೆ ಒಳ್ಳೆಯದನ್ನು ಮಾಡಲಿ ಎಂದು ಭಾವಿಸಿ ಆಚರಣೆಗಳನ್ನು ರೂಢಿಗೆ ತರಲಾ. ಇಂತಹ ಆಚರಣೆಗಳನ್ನು ನಡೆಸುವುದರಿಂದ ತನಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಮನುಷ್ಯನಿಗೆ ಆಳದಲ್ಲಿ ಮೂಡಿರಬೇಕು. ಅದನ್ನೆ ಇಲ್ಲಿಯವರೆಗೂ ಜನಪದರು ನಂಬಿ ಆಚರಿಸತೊಡಗಿರುವರು.

ಅಗೋಚರಚ ದೈವ ಶಕ್ತಿಗಳ ಪ್ರೀತ್ಯಾರ್ಥ ಮಾನವ ನಡೆಸುತ್ತ ಬಂದಿರುವ ಮತಾಚಾರಗಳಿಗೆ, ಕರ್ಮ ವಿಧಿಗಳಿಗೆ ಈ ಹೆಸರಿದೆ. ಆದಿಮ ಜನಪದ ಗುಂಪು ನಿಸರ್ಗದಲ್ಲಿ ಜೀವಿಸುತ್ತಿದ್ದರಿಂದ, ನಿಸರ್ಗದ ವ್ಯಾಪಾರಗಳನ್ನು ವಿಸ್ಮಯ ಭಯದಿಂದ ನೋಡಿ ನಿಸರ್ಗವನ್ನು ತನ್ನದೇ ರೀತಿಯಲ್ಲಿ ಅರಿಯುವ ಪ್ರಯತ್ನ ಮಾಡಿತು. ಪ್ರತಿನಿತ್ಯ ಉದಯಿಸುವ, ಮುಳುಗುವ ಸೂರ್ಯ, ಬೀಸುವ ಗಾಳಿ, ಉರಿಯುವ ಬೆಂಕಿ, ಸುರಿಯುತ್ತಿರುವ ಮಳೆಯ ಬಗ್ಗೆ ಜನಪದ ಗುಂಪು ಭಯ, ವಿಸ್ಮಯವನ್ನು ತೋರಿ ಅವುಗಳಲ್ಲಿ ಅತಿಮಾನುಷ ಶಕ್ತಿ ಇದೆ ಎಂದು ಅವುಗಳನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿತು. ಇಂತಹ ಅನುಭವಗಳು ವ್ಯಕ್ತಿಗತವಾಗಿ ಮತ್ತು ಸಾಮೂಹಿಕವಾಗಿ ಒಂದೇ ಆದುದರಿಂದ ಇಡೀ ಜನಪದ ವೃಂದ ತನ್ನ ರಕ್ಷಣೆಗಾಗಿ ಒಳಿತಿಗಾಗಿ, ಅಗೋಚರ ಶಕ್ತಿಯನ್ನು ಗಾಢವಾಗಿ ನಂಬಿ, ದೈವೀಕರಣಗೊಳಿಸಿ ಪೂಜಿಸುವ ಆರಾಧಿಸುವ ಪರಂಪರೆ ಜಗತ್ತಿನ ಅನೇಕ ಜನಪದ ಗುಂಪುಗಳಲ್ಲಿ ರೂಢಿಗೆ ಬಂದಿತು. ಈ ನಂಬಿಕೆಗಳು ಕ್ರಿಯೆಯ ಮೂಲಕ ಆಚರಣೆಗಳಾಗಿ ಜನಪದ ಸಮುದಾಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡವು.

ಆಚರಣೆ ಎಂಬ ಪದ ಇಂಗ್ಲಿಷಿನ Ritual ಎಂಬ ಪದಕ್ಕೆ ಸಂವಾದಿಯಾದುದು. Ritu ಎಂಬ ಲ್ಯಾಟಿನ್ ಮೂಲದ ಪದ. ಇದರ ಅರ್ಥ ಸಂಪ್ರದಾಯ ಎಂದಿದೆ.

Roy A. Rapport: "Ritual reters to any pratice... reguearly repeated in a set percise maner. So as to satisfy one's sense of fitness"

Monica Wilson: "By ritual we mean a primary religious action, that is action directed to serving the lessing of some power or powers"

ಆಚರಣೆ ಎಂಬುದು ಪ್ರಾದಿಮ ಧಾರ್ಮಿಕ ಕ್ರಿಯೆಯ ಮುಂದುವರೆದ ರೂಪ. ಅತೀಂದ್ರಿಯ ಶಕ್ತಿ ಅಥವಾ ಶಕ್ತಿಗಳಿಂದ ಅನುಗ್ರಹಕ್ಕೋಸ್ಕರ ಕೈಗೊಂಡ ಕ್ರಿಯೆ ಇದಾಗಿದೆ ಎಂದು ಮೋನಿಕಾ ವಿಲ್ಸನ್ ಹೇಳುತ್ತಾರೆ.

ಕ್ರಮವತ್ತಾದ ವಿಧಿ ಪೂರ್ವಕವಾದ, ಪರಂಪರಾನುಗತವಾಗಿ ನಡೆದು ಬಂದ ರೀತಿಯಲ್ಲಿ ನಡೆಸುವ ಇಂಥ ಕ್ರಿಯೆಗಳ ಹಿನ್ನೆಲೆಯಲ್ಲಿ ನಂಬಿಕೆ ಆಳವಾಗಿ ಬೇರು ಬಿಟ್ಟಿರುತ್ತದೆ. ಧರ್ಮ ಇದರ ಅಡಿಗಲ್ಲು, ಧಾರ್ಮಿಕ ವಿಧಿಗಳಿಂದ ತಾನು ನಂಬಿದ ಪವಿತ್ರ ವಸ್ತುಗಳ ಪ್ರೀತಿಯನ್ನು ಸಂಪಾದಿಸಬಹುದೆಂದು ಮನುಷ್ಯ ಎಣಿಸುತ್ತಾನೆ. ಇದು ಕ್ರಮವತ್ತಾದ ಅರ್ಚನಾಕ್ರಮವೂ ಹೌದು. ಲೌಕಿಕ ಹಿನ್ನೆಲೆಗಳಲ್ಲಿ ಸಂಪ್ರದಾಯನಿಷ್ಟ ರೀತಿಯಲ್ಲಿ ನಡೆಸುವ ಒಂದು ಕ್ರಿಯೆಯೂ ಹೌದು.

ಧಾರ್ಮಿಕ ಪಾವಿತ್ರ್ಯದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವೂ ಮಿಗಿಲಾದುದೇ ಆದುದರಿಂದ ಆಚರಣೆಗಳನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ. ನುಡಿಯಲ್ಲಿ ನಡೆಯಲ್ಲಿ ಸಣ್ಣತಪ್ಪಾದರೂ ಅನರ್ಥವಾದೀತೆಂಬ ಅಂಜಿಕೆ ಪ್ರತಿಯೊಂದು ಆಚರಣೆಗಳ ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ.

ಆಚರಣೆಗಳನ್ನು ವೈಯಕ್ತಿಕ ಎನ್ನುವುದಕ್ಕಿಂತ ಸಾಮೂಹಿಕ ಎನ್ನಬಹುದು. ಏಕೆಂದರೆ ಆಚರಣೆಗಳ ಉದ್ದೇಶಗಳಲ್ಲಿ ವೈಯಕ್ತಿಕತೆಯನ್ನು ಹೋಗಲಾಡಿಸಿ ಸಾಮೂಹಿಕತೆಯನ್ನು ಸಂಸ್ಥಾಪಿಸುವುದೂ ಒಂದು. ಅಲ್ಲದೇ ಲೌಕಿಕಾಸಕ್ತಿಯನ್ನುಹಾಗೂ ಕೆಲವು ದೈಹಿಕ ಅವಶ್ಯಕತೆಗಳನ್ನು ನೆರವೇರಿಸುವ ಕ್ರಿಯೆಗಳನ್ನು ಆಚರಣೆಗಳೆಂದು ಕರೆಯಲಾಗುವುದಿಲ್ಲ. ಆದರೆ ಕ್ರಿಯೆಗಳಿಗೆ ಅಲೌಕಿಕಾಸಕ್ತಿಯ ಪವಿತ್ರೋದ್ದೇಶ ಕಾರಣವಾಗಿದ್ದರೆ ಆಗ ಅವು ಆಚರಣೆಗಳೆನ್ನಿಸಿಕೊಳ್ಳುತ್ತವೆ. ಉದಾಹರಣೆಗೆ ನಮ್ಮ ಆರೋಗ್ಯ ರಕ್ಷಣೆಗಾಗಿ ನಿತ್ಯವೂ ದೇಹಕ್ಕೊಗ್ಗದ ಕೊಳೆಯನ್ನು ತೊಳೆದುಕೊಳ್ಳಲು ಮಾಡುವ ಸ್ನಾನ ಆಚರಣೆ ಎನ್ನಿಸಿಕೊಳ್ಳುವುದಿಲ್ಲ.

ಆದರೆ ಪುಣ್ಯ ಬರುತ್ತದೆಂಬ ಅಲೌಕಿಕೋದ್ದೇಶದಿಂದ ಪುಣ್ಯ ಕ್ಷೇತ್ರಗಳಲ್ಲಿ ಮಾಡುವ ಸ್ನಾನ ಆಚರಣೆ ಎನ್ನಿಸಿಕೊಳ್ಳುತ್ತದೆ. ಭಾವನೆ ಮತ್ತು ಆಲೋಚನೆಯ ರೂಪದಲ್ಲಿ ನಂಬಿಕೆ ಇದ್ದರೆ ಕ್ರಿಯಾರೂಪದಲ್ಲಿ ಆಚರಣೆ ಇರುತ್ತದೆ. ನಂಬಿಕೆಗಳು ಆಚರಣೆಗಳಿಗೆ ಶಾಸನ ಪ್ರಾಯವಾಗಿ ಇರುವುದೇ ಅಲ್ಲದೆ ಅವು ಸುರಕ್ಷಿತವಾಗಿ ಮುನ್ನಡೆದುಕೊಂಡು ಹೋಗಲು ಸಹಕಾರಿಯಾಗಿ ಇದೆ ಎನ್ನಬಹುದು.

**ಜೀವನಾವರ್ತನ ಆಚರಣೆಗಳು**

ಮನುಷ್ಯ ಹುಟ್ಟಿನಿಂದ ಹಿಡಿದು ಸಾಯುವ ತನಕ ಒಂದಿಲ್ಲೊಂದು ರೀತಿಯ ಆಚರಣೆಗಳನ್ನು ಬೇಕು ಅಥವಾ ಬೇಡವೆಂದು ನಿರಾಕರಿಸಬಹುದು. ಆದರೆ ಅವು ಒಂದು ರೀತಿಯಲ್ಲಿ ವೈಜ್ಞಾನಿಕವಾದ ರೀತಿಯಲ್ಲಿಯೇ ಅಡಕವಾಗಿರುತ್ತವೆ. ಆದ್ದರಿಂದ ಪ್ರತಿಯೊಬ್ಬ ಮನುಷ್ಯ ಸಾಯುವ ತನಕ ಒಂದಿಲ್ಲೊಂದು ಆಚರಣೆಗಳಲ್ಲಿ ತೊಡುಗತ್ತಾನೆ.

ಮನುಷ್ಯನ ಜೀವನದಲ್ಲಿ ಹುಟ್ಟು, ಮುಟ್ಟು, ಮದುವೆ, ಸಾವು ಬಹುಮಹತ್ವದ ಸ್ಥಾನವನ್ನು ಪಡೆದಿವೆ. ಈ ಸಂದರ್ಭದಲ್ಲಿ ಮನೆಯಲ್ಲಿರುವ ದೇವರು ಹುಲಿಗೆಮ್ಮಳಾಗಿದ್ದು ಈ ದೇವಿಗೆ ಸಂಬಂಧಪಟ್ಟಂತೆ ಭಕ್ತರು ಕೆಲವು ಆಚರಣೆಗಳನ್ನು ಪ್ರಾದೇಶಿಕವಾಗಿ ನಡೆಸಿಕೊಂಡು ಹೋಗುವುದನ್ನು ಕಂಡುಕೊಳ್ಳುತ್ತೇವೆ.

**ಜನನ**

ಮೊದಲು ದೇವಿಯನ್ನು ನೆನೆಯುವುದರ ಮೂಲಕ ಮತ್ತು ಹರಕೆಗಳನ್ನು ಹೊರುವುದರ ಮೂಲಕ ಈ ಹುಟ್ಟನ್ನು ಕಾಣಬಹುದಾಗಿದೆ. ಅಂದರೆ ಕೆಲವರು ಹುಲಿಗೆಮ್ಮ ದೇವಿಯನ್ನು ದೇವಿ ನನ್ನ ಹೆರಿಗೆ ಸುಸೂತ್ರವಾಗಿ ನೆರವೇರಲಿ ಅದು ಗಂಡಾಗಿರಲಿ ಆದರೆ ಹೆಣ್ಣಾದರೆ ಹುಟ್ಟುವ ಮಗುವಿಗೆ ನಿನ್ನ ಹೆಸರನ್ನಿಡುತ್ತೇನಮ್ಮಾ ಎಂದು ಬೇಡಿಕೊಳ್ಳುವುದನ್ನು ನೋಡುತ್ತೇವೆ.

ಮಗು ಮನೆಯಲ್ಲಿಯೇ ಹುಟ್ಟಿದರೆ ಮಾಸವನ್ನು ಮೂರನೇ ದಿನದಂದು ಮನೆಯ ತಲಬಾಗಿಲಿನ ಬಲಭಾಗದಲ್ಲಿ ಒಂದು ಸಣ್ಣಗುಂಡಿಯನ್ನು ತೋಡಿ ಅದರಲ್ಲಿ ಒಂದು ಹೊಸಮಡಿಕೆಯಲ್ಲಿ ಆ ಮಾಸವನ್ನು ತುಂಬಿ ಅದರಲ್ಲಿ ೩ ರೂಪಾಯಿ ದಕ್ಷಿಣೆಯನ್ನು ಹಾಕಿ ಹುಲಿಗೆಮ್ಮನ ಭಂಡಾರ ಕುಂಕುಮವನ್ನು ಹಾಕಿ ಅದನ್ನು ದೇವಿ ನನ್ನ ಮಗುವಿಗೆ ಯಾವುದೇ ತೊಂದರೆಗಳುಂಟಾಗದೇ ಕಾಪಾಡು ಎಂದು ಆ ಗುಂಡಿಯಲ್ಲಿ ಅದನ್ನಿರಿಸಿ ಗುಂಡಿಯನ್ನು ಮುಚ್ಚುವರು. ಇದು ಮೂರನೇ ದಿನದ ಕಾರ್ಯಕ್ರಮವಾಗಿರುತ್ತದೆ.

ಒಂದು ಸಮೃದ್ಧಿಯ ಸಂಕೇತವಾಗಿ ಮತ್ತು ಒಂದು ಲಕ್ಷ್ಮಿಯ ಸಂಕೇತವಾಗಿ ಅಂದರೆ ಒಂದು ಮಗುವಿಗೆ ಯಾವುದೇ ತೊಂದರೆಯಾಗದೆ ಒಳ್ಳೆ ಸಮೃದ್ಧಿಯಾಗಿ ಬೆಳೆಯಲೆನ್ನುವುದು ಎರಡನೆಯದಾಗಿ ಆ ಮಾಸವನ್ನು ಹೂಳದೇ ಹೋದರೆ ಅದನ್ನು ಹೊರಗಡೆ ಬಿಸಾಡಿದರೆ ನರಿ ನಾಯಿಗಳ ಪಾಲಾಗುತ್ತದೆ ಎನ್ನುವ ನಂಬಿಕೆ ಆದ್ದರಿಂದ ಅದನ್ನು ಗುಂಡಿಯಲ್ಲಿ ಹೂಳುತ್ತಾರೆ.

ಇನ್ನು ಐದನೇ ದಿನದಂದು ತಾಯಿ ಮತ್ತು ಮಗುವಿಗೆ ಮಡಿಯಿಂದ ಸ್ನಾನ ಮಾಡಿಸಿ ಹೊರೆಸಿನ ಪಕ್ಕ ಕರಿಕಾಡಿಗೆಯಿಂದ ಚಿತ್ರವನ್ನು ಬರೆಯುತ್ತಾರೆ. ಯಾಕೆಂದರೆ ಅಂದು ಹಣಬರಹ ಬರೆಯಲು ವಿಧಿಯ ದೇವತೆ ಬರುತ್ತಾಳೆಂಬ ನಂಬಿಕೆ. ಆದ್ದರಿಂದ ಹೊರೆಸಿನ ಹತ್ತಿರ ಸ್ಲೇಟು ಬಳಪವನ್ನು ಇಟ್ಟಿರುತ್ತಾರೆ. ನಂತರ ಮನೆಯನ್ನು ಶುಚಿಗೊಳಿಸಲಾಗುತ್ತದೆ. ಮಗುವಿಗೆ ೭ನೆಯ ದಿನ ಅಥವಾ ೯ನೆಯ ದಿನ ನಾಮಕರಣ ಮಾಡುವ ತನಕ ಮನೆಯಲ್ಲಿ ಯಾವುದೇ ವಿಧದ ಪೂಜೆ ಪುನಸ್ಕಾರಗಳು ನಡೆಯುವುದಿಲ್ಲ. ಅದಕ್ಕಾಗಿ ಮನೆಯನ್ನು ಶುಚಿಗೊಳಿಸಿ ೯ನೇ ದಿನದಂದು ಬಾಣಂತಿ ಮತ್ತು ಮಗುವನ್ನು ಮನೆಯ ಹತ್ತಿರ ಬಾವಿಯಿದ್ದರೆ ಗಂಗೆಯ ಪೂಜೆಗೆಂದು ಕರೆದೊಯ್ಯುತ್ತಾರೆ.

ಗಂಗೆಯ ಪೂಜೆಯಿಲ್ಲದೆ ಯಾವ ಕಾರ್ಯವನ್ನೂ ಪ್ರಾರಂಭಿಸುವುದಿಲ್ಲ. ಗಂಗೆಗೆ ಅರಿಶಿಣ, ಕುಂಕುಮ ಹಾಕಿ ಎಲೆಯಲ್ಲಿ ಅಡಿಕೆ, ಎಳ್ಳಿನ ಚಿಗುಳಿ, ಅಕ್ಕಿ, ಹಸಿ ಕಡಲೆಬೇಳೆ ಇಟ್ಟು ಪೂಜಿಸುವರು. ಬಾವಿಯಲ್ಲಿ ಸ್ವಲ್ಪ ಹಾಲುತುಪ್ಪವನ್ನು ಹಾಕುವುದರಿಂದ ತಾಯಿ ನಿನಗೆ ಹಾಲನ್ನು ಹಾಕುತ್ತಿದ್ದೇನೆ ನನ್ನ ಮಗುವಿಗೂ ಹೆಚ್ಚು ಹಾಲನ್ನು ನೀಡು ಎಂದು ಬೇಡಿಕೊಳ್ಳುವುದಾಗಿ ಈ ಪೂಜೆಯನ್ನು ಬಾಣಂತಿಯ ಕೈಯಿಂದ ಮಾಡಿಸುತ್ತಾರೆ.

ಮಗುವಿಗೆ ಹೆಸರಿಡುವಾಗ ಮನೆಯ ದೇವರ ಹೆಸರನ್ನು ಇಡುವುದು, ಗಂಡು ಮಗು ಹುಟ್ಟಿದರೆ ಹುಲಿಗೆಪ್ಪ ಎಂದು ಹೆಣ್ಣು ಮಗುವಾದರೆ ಹುಲಿಗೆಮ್ಮ ಈ ರೀತಿ ಹೆಸರಿಡುವುದು ಅಥವಾ ಕೆಲವರು ಮಗುವಿಗೆ ಮೊದಲು ದೇವರ ಹೆಸರನ್ನು ಕರೆದು ನಂತರ ತಮಗೆ ಇಷ್ಟವಾದ ಹೆಸರನ್ನು ಕರೆದುಕೊಳ್ಳುತ್ತ ಹೋಗುತ್ತಾರೆ. ಮಗು ಹುಟ್ಟಿ ಮೂರು ತಿಂಗಳ ನಂತರ ಹುಲಿಗಮ್ಮನ ದೇವಸ್ಥಾನಕ್ಕೆ ತಾಯಿ ಮಗು ಇಬ್ಬರು ಹೋಗಿ ದೇವಿಯ ದರ್ಶನ ಪಡೆದು ಹಣ್ಣುಕಾಯಿ ಮಾಡಿಸಿಕೊಂಡು ಬರುತ್ತಾರೆ.



### ಜವಳ ತೆಗೆಸುವುದು

ಮಗುವಿಗೆ ಒಂದು ವರ್ಷ ಇಲ್ಲವೆ ಮೂರು ವರ್ಷಕ್ಕೆ ಜವಳ ತೆಗಿಸುವ ಪದ್ಧತಿ ಇದೆ. ಹುಲಿಗೆಮ್ಮನನ್ನು ಮನೆ ದೇವರನ್ನಾಗಿ ಹೊಂದಿದವರು ಹುಲಿಗಿ ಕ್ಷೇತ್ರಕ್ಕೆ ಬಂದು ಜವಳ ತೆಗೆಸುತ್ತಾರೆ. ಜವಳ ತೆಗೆಸುವಾಗ ಸೋದರ ಮಾವನ ತೊಡೆಯ ಮೇಲೆ ಕೂರಿಸಿ ವೀಳ್ಯದೆಲೆಯಿಂದ ಕತ್ತರಿಯನ್ನು ಮಾಡಿ ದೇವರ ಹೆಸರನ್ನು ನೆನೆದು ಮಗುವಿಗೆ ಕೂದಲು ತೆಗೆದಂತೆ ಕತ್ತರಿಯನ್ನು ಹಿಡಿದು ತಲೆಯನ್ನು ಮುಟ್ಟುತ್ತಾರೆ. ನಂತರ ಹಜಾಮರು ಮಗುವಿನ ಕೂದಲನ್ನು ತೆಗೆಯುತ್ತಾರೆ. ಇಲ್ಲಿ ಸೋದರ ಮಾವನೇ ಇರಬೇಕೆನ್ನುವುದು ಒಂದು ಅಧಿಕೃತ ಮತ್ತು ಬಲದ ಸಂಕೇತ. ಮಗುವಿನ ತಾಯಿಗೆ ಯಾರಿಲ್ಲದಿದ್ದರೂ ತನ್ನ ತವರಿನ ಕಡೆಯವರಾದರೂ ಇದ್ದಾರೆಂಬ ನಂಬಿಕೆ ಮತ್ತು ಧೈರ್ಯ. ಆದ್ದರಿಂದ ಇಲ್ಲಿ ಸೋದರ ಮಾವನಿಗೆ ವಿಶೇಷ ಮಹತ್ವವಿರುವುದನ್ನು ಕಾಣುತ್ತೇವೆ.

ಜವಳ ತೆಗೆಸಿದ ನಂತರ ಮಗುವನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ನಮಸ್ಕರಿಸಿ ಬರುತ್ತಾರೆ. ಅಂದು ಅಲ್ಲಿ ಸಿಹಿ ಅಡುಗೆಯನ್ನು ಮಾಡಿ ದೇವಿಗೆ ನೈವೇದ್ಯವಿಟ್ಟು ನಂತರ ಎಲ್ಲರೂ ಊಟಮಾಡುತ್ತಾರೆ.



### ಋತುಮತಿ ಆಚರಣೆಗಳು

ಮನೆಯಲ್ಲಿ ಅಪ್ರಾಪ್ತ ಬಾಲಕಿಯು ಋತುಮತಿಯಾದಾಗ ಅವಳನ್ನು ಐದು ದಿನಗಳವರೆಗೆ ಮನೆಯ ಹೊರಕೋಣೆಯಲ್ಲಿ ಇಲ್ಲವೆ ಹೊರ ಮೂಲೆಯಲ್ಲಿ ಕೂಡಿಸುತ್ತಾರೆ. ಐದು ದಿನಗಳವರೆಗೆ ಅವಳನ್ನು ಯಾರು ಮುಟ್ಟಿಸಿಕೊಳ್ಳುವಂತಿಲ್ಲ. ಐದನೇ ದಿನ ಐದು ಜನ ಮುತ್ತೈದೆಯರು ಆ ಹುಡುಗಿಗೆ ಅರಿಶಿಣ ಹಾಗೂ ಎಣ್ಣೆಯನ್ನು ಹಚ್ಚಿ ತಲೆಸ್ನಾನ ಮಾಡಿಸುತ್ತಾರೆ. ನಂತರವಷ್ಟೆ ಅವಳನ್ನು ಒಳಗೆ ಕರೆತರುತ್ತಾರೆ.

ಮಡಿಯ ಮೈಲಿಗೆಯಾಗಿರುತ್ತದೆಂಬ ಕಾರಣಕ್ಕೆ ಮನೆಯಲ್ಲಿ ಆ ಐದು ದಿನಗಳ ಕಾಲ ಯಾವುದೇ ಪೂಜೆ ಮಾಡಿರುವುದಿಲ್ಲ. ಹಾಗೂ ದೇವಸ್ಥಾನಕ್ಕೆ ಹೋಗುವಂತಿಲ್ಲ. ಹುಡುಗಿಗೆ ೧೬ ದಿನದ ತನಕ ಎಣ್ಣೆ, ಅರಿಶಿಣ ಹಚ್ಚಿ ಸ್ನಾನ ಮಾಡಿಸುತ್ತಾರೆ. ಎಣ್ಣೆ ತಲೆಗೆ ತಂಪು ಮತ್ತು ಅರಿಶಿಣ ಹಚ್ಚುವುದರಿಂದ ಯಾವುದೇ ತರಹದ

ಮೊಡವೆಗಳು, ಕಲೆಗಳು ಬರುವುದಿಲ್ಲ ಮತ್ತು ಮುಖದಲ್ಲಿ ಕಾಂತಿ ಹೆಚ್ಚುತ್ತದೆಂದು ಅರಿಶಿಣವನ್ನು ಹಚ್ಚಿ ಸ್ನಾನ ಮಾಡಿಸುತ್ತಾರೆ. ಎಣ್ಣೆ ಮತ್ತು ಅರಿಶಿಣ ಹಚ್ಚುವುದರಿಂದ ಅವಳು ಪರಿಪೂರ್ಣಳು ಎನ್ನುವುದನ್ನು ಸೂಚಿಸುತ್ತದೆ. ಪ್ರತಿದಿನ ಸಂಜೆ ಅವಳನ್ನು ನೋಡಬಂದವರೆಲ್ಲ ಆರತಿ ಮಾಡಿ ಹಾಡನ್ನು ಹಾಡುತ್ತಾರೆ. ಹದಿನಾರನೆಯ ದಿನದವರೆಗೆ ಒಂದೊಂದು ವೇಷವನ್ನು ಹಾಕಿಸುವುದು ಕೆಲ ಮನೆಗಳಲ್ಲಿದೆ. ಅಥವಾ ಕೆಲ ಮನೆತನಗಳಲ್ಲಿ ಇಲ್ಲ. ಅನುಕೂಲವಿದ್ದವರು ವೇಷ ಹಾಕಿಸಿ ಕೂರಿಸುತ್ತಾರೆ. ಅನುಕೂಲವಿಲ್ಲದವರು ಇದನ್ನು ಮಾಡುವುದಿಲ್ಲ.

ಹದಿನಾರು ದಿನದೊಳಗೆ ಮನೆಯನ್ನೆಲ್ಲಾ ಶುಚಿಮಾಡಿ ಹುಡುಗಿಯನ್ನು ಮನೆಯ ಹತ್ತಿರವಿರುವ ಬಾವಿಗೆ ಕರೆದುಕೊಂಡು ಹೋಗಿ ಗಂಗೆಯ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಹುಡುಗಿಯ ಕೈಯಿಂದಲೇ ಬಾವಿಯಿಂದ ಒಂದು ಕೊಡ ನೀರನ್ನು ಎಳೆಸಿ ಬಾವಿಯಲ್ಲಿ ಅರಿಶಿಣ ಕುಂಕುಮ ಹಾಕಿ ಅಲ್ಲದೆ ಕೊಡಕ್ಕೆ ಅರಿಶಿಣ ಕುಂಕುಮವನ್ನು ಹಚ್ಚಿ ಪೂಜೆ ಮಾಡಿ ಗಂಗಮ್ಮ ನಮ್ಮ ಮಗಳಿಗೆ ಒಳ್ಳೆಯದನ್ನು ಮಾಡಲಿ ಎಂದು ಹರಸಿಕೊಳ್ಳುತ್ತಾರೆ. ತುಂಬಿದ ಬಿಂದಿಗೆಯನ್ನು ಹುಡುಗಿ ತೆಗೆದುಕೊಂಡು ಮನೆಗೆ ಬರುತ್ತಾಳೆ. ಅದರಿಂದ ಮನೆಯ ತುಂಬಾ ನೀರನ್ನು ಚಿಮುಕಿಸುತ್ತಾಳೆ. ಇದರಿಂದ ಗಂಗಮ್ಮ ಮನೆಯನ್ನು ಶುಚಿ ಮಾಡು ಎನ್ನುವುದಾಗಿದೆ. ಬಂಧು ಬಳಗದವರೆಲ್ಲಾ ಆರತಿ ಮಾಡಿ ತಂದ ಉಡುಗೊರೆ ಕೊಟ್ಟು ಊಟಮಾಡಿಕೊಂಡು ಹೋಗುತ್ತಾರೆ.

### ಮದುವೆ

ಮದುವೆ ಸಂದರ್ಭದಲ್ಲಿ ಹುಲಿಗೆಮ್ಮ ದೇವಿಗೆ ಸಂಬಂಧಪಟ್ಟ ಕೆಲವು ಆಚರಣೆಗಳನ್ನು ಕಾಣುತ್ತೇವೆ. ಗಂಡುಮಕ್ಕಳ ಮದುವೆಯಲ್ಲಿ ಉಟಿಗೆ ಮಾಡುವ ಆಚರಣೆಯನ್ನು ಮಾಡುತ್ತಾರೆ. ಹುಲಿಗೆಮ್ಮ ಮನೆದೇವರು ಇರುವವರು ಮದುವೆಗೆ ಒಂದು ತಿಂಗಳ ಮುಂಚೆ ಮನೆಯೆಲ್ಲಾ ಶುಚಿಮಾಡಿ ಹುಲಿಗೆಮ್ಮನನ್ನು ಮಾಡುತ್ತಾರೆ. ಅದು ಮಂಗಳವಾರದಂದು ಮಾಡುವ ಆಚರಣೆ. ಆ ದಿನ ಮುಂಜಾನೆಯಿಂದ ಉಪವಾಸವಿದ್ದು ಸಂಜೆ ೬ ಗಂಟೆಗೆ ಬೇವಿನ ಉಟಿಗೆಯನ್ನು ಉಟ್ಟು ತಲೆಯ ಮೇಲೆ ಕುಂಭವನ್ನು ಹೊತ್ತುಕೊಂಡು ಮನೆಯಿಂದ ಸ್ವಲ್ಪ ದೂರ ಹೋಗಿ ಬೇವಿನ ಉಟಿಗೆಯನ್ನು ಕಳಚಿ ಹೊಸ ಸೀರೆಯನ್ನುಟ್ಟು ನಂತರ ಆರತಿ ಮಾಡಿ ಮುಯ್ಯಿಯನ್ನು ಕೊಟ್ಟು, ಕುರಿ ಮಾಂಸದ ಊಟವನ್ನು ಎಲ್ಲರೂ ಸೇರಿ ಮಾಡುತ್ತಾರೆ.

ಈ ಆಚರಣೆಯನ್ನು ಮನೆಯ ಹಿರಿ ಸೊಸೆಯೇ ಮಾಡುವ ಪದ್ಧತಿ ಇದೆ. ಆದರೆ ಇತ್ತೀಚಿಗೆ ಈ ಪದ್ಧತಿಯನ್ನು ಬೇರೆ ರೀತಿಯಲ್ಲಿ ಜಾರಿಗೊಳಿಸಲಾಗಿದೆ. ಯಾಕೆಂದರೆ ಈ ಸೇವೆಯನ್ನು ಮಾಡಲು ಕೆಲವರು ಭಯಪಡುತ್ತಾರೆಂದು ಬೇವಿನ ಮರದ ಕೋಲೆಯನ್ನು ಉಟ್ಟಿಗೆ ರೂಪದಲ್ಲಿ ತಂದು ಅದನ್ನು ಕಂಬಳಿ ಮೇಲಿಟ್ಟು ದೇವಿ ಹುಲಿಗೆಮ್ಮನಿಗೆ ಉಧೋ ಹಾಕಿ ಪಡ್ಲಿಗಯನ್ನು ತುಂಬಿಸಿ ನಂತರ ಊಟ ಮಾಡುವುದನ್ನು ಕಾಣುತ್ತೇವೆ. ಮದುವೆಯ ದಿನ ಹುಡುಗನಿಗೆ ಸುರಿಗೆ ನೀರೆಂದು ಅರಿಶಿಣ ಹಚ್ಚಿ ನೀರನ್ನು ಮುತ್ತೈದೆಯರೆಲ್ಲಾ ಸೇರಿ ಎರೆದು ಮಧುಮಗನನ್ನು ಮಾಡಿ ನಂತರ ಪಡ್ಲಿಗಿ ತುಂಬಿಸುವ ಕಾರ್ಯಕ್ರಮವನ್ನು ಮಾಡುತ್ತಾರೆ.

ಇಲ್ಲಿ ಪಡ್ಲಿಗಿ ತುಂಬಿಸಲು ಸಿಹಿ ಅಡುಗೆ ಮಾಡುತ್ತಾರೆ. ಪಡ್ಲಿಗಿಯಲ್ಲಿ ಹಸಿಮೆಣಸಿನಕಾಯಿ, ಬದನೆಕಾಯಿ, ಈರುಳ್ಳಿ, ಮೂಲಂಗಿ, ಗಜ್ಜರಿ, ರಾಜಗೀರಿ ಪಲ್ಯೆ, ಪಲಕಂಪಲ್ಲೆಗಳನ್ನಿಟ್ಟು, ಕರಿಗಡುಬು, ಚಿತ್ರಾನ್ನ,

ಬದನಿಕಾಯಿಪಲ್ಯೆ ಅನ್ನ ತಿಳಿಸಾರು, ಅಲ್ಲದೆ ಅಕ್ಕಿ ಜೋಳವನ್ನು ಪಡ್ಲಿಗೆ ತುಂಬಿಸಿ ೪ ಜನ ಬೇಡ ಜನಾಂಗದ ಜೋಗತಿಯರನ್ನು ಕರೆಯಿಸಿ ಅವರಿಂದ ಉಧೋ ಹಾಕಿಸುತ್ತಾರೆ. ನಂತರ ಮಧುಮಗನು ಬಂದು ಅಡ್ಲಿಗಿಗೆ ಅರಿಶಿಣ ಕುಂಕುಮ ಹಾಕಿ ನಮಸ್ಕಾರ ಮಾಡಿ ಲೋಭಾನವನ್ನು ಹಾಕುತ್ತಾರೆ.

ಮೊದಲು ಈ ಎಲ್ಲಾ ಕಾರ್ಯಕ್ರಮಗಳನ್ನು ಮಾಡುವುದರ ಮೂಲಕ ದೇವಿಯನ್ನು ನೆನೆಯುವುದಲ್ಲದೆ ದೇವಿಯು ತೃಪ್ತಳಾಗುತ್ತಾಳೆ ಎನ್ನುವ ನಂಬಿಕೆ ಇದೆ. ಆದ್ದರಿಂದ ಹುಲಿಗೆಮ್ಮನ ಪೂಜೆಯಿಂದಲೇ ಮದುವೆ ಕಾರ್ಯ ಆರಂಭವಾಗುವುದು.

ನಂತರ ಒರಳು ಕಲ್ಲಿಗೆ ಪೂಜೆಮಾಡಿ, ಬೀಸುವಕಲ್ಲಿನ ಪೂಜೆಯನ್ನು ಮಾಡುತ್ತಾರೆ. ಈ ಆಚರಣೆಗೆ ಕಾರಣವಾದ ಅಂಶಗಳ ಕುರಿತ ಹಲವು ಕಥೆಗಳು ಜನಪದರಲ್ಲಿವೆ. ಒರಳು ಕಲ್ಲಿಗೆ ಅಕ್ಕಿಯನ್ನು ಹಾಕಿ ಐದು ಜನ ಮುತ್ತೈದೆಯರು ಅಕ್ಕಿಯನ್ನು ಕುಟ್ಟುತ್ತಾರೆ. ಒಂದು ದಿನ ಸಪ್ತ ಮಹರ್ಷಿಗಳು ತಪಸ್ಸಿಗೆ ಕೂತಾಗ ಶಿವನು ತಾನು ಈ ಮಹರ್ಷಿಗಳ ತಪಸ್ಸನ್ನು ಕೆಡಿಸಲೆಂದು ತಾನು ನಗ್ನ ರೂಪನಾಗಿ ಸಪ್ತಋಷಿಗಳ ಹೆಂಡತಿಯರ ಮುಂದೆ ನಿಂತುಕೊಂಡನಂತೆ. ಇದರಿಂದ ಕುಪಿತಗೊಂಡ ಮಹರ್ಷಿಯರು ನಿನ್ನ ಲಿಂಗ ಬಿದ್ದು ಹೋಗಿ ಅದರಲ್ಲಿರುವ ವೀರ್ಯ ಹಾಳಾಗಿ ಹೋಗಲಿ ಎಂದು ಶಾಪಕೊಟ್ಟರಂತೆ. ಇದು ಪಾರ್ವತಿಗೆ ಗೊತ್ತಾಗಿ ಪಾರ್ವತಿಯು ಇನ್ನೇನು ಶಿವನ ಲಿಂಗ ಬಿದ್ದು ವೀರ್ಯವು ಬೀಳಲಿದೆಯೆನ್ನುವಾಗ ಪಾರ್ವತಿ ಯೋನಿಯ ಆಕಾರವಾಗಿ ಹೋಗಿ ಅದನ್ನು ತಪ್ಪಿಸಿದಳಂತೆ. ಆದ್ದರಿಂದ ಒರಳು ಮತ್ತು ಒನಕೆಯನ್ನು ಲೈಂಗಿಕ ಪ್ರತಿಮೆಗಳನ್ನಾಗಿ ಸಾಂಕೇತಿಕವಾಗಿ ಪೂಜಿಸುವ ಮೂಲಕ ದೇವರನ್ನು ನೆನೆಯುವುದಾಗಿದೆ. ಆದ್ದರಿಂದ ಈ ಒರಳು ಕಲ್ಲಿನ ಪೂಜೆ ಮಾಡುತ್ತಾರೆ. ನಂತರ ಬೀಸುವಕಲ್ಲಿನ ಪೂಜೆಯಿಂದ ಸಂಸಾರವನ್ನು ಸಾಗಿಸುವುದರ ಸಂಕೇತ ಎಂದು ಅಂದರೆ ಬೀಸುವ ಕಲ್ಲು ಭೂಮಿ ಮತ್ತು ಅದರಲ್ಲಿ ಹಾಕುವ ಜೋಳವು ನಾವುಗಳು ಆದ್ದರಿಂದ ಈ ಬ್ರಹ್ಮಾಂಡದಲ್ಲಿ ನಾವು ಯಾವ ತರಹದ ಜೀವನ ಸಾಗಿಸುತ್ತೇವೆ ಎನ್ನುವುದು ಈ ಬೀಸುವಕಲ್ಲಿನ ಪೂಜೆ ಅರ್ಥೈಸುತ್ತದೆ. ಆದ್ದರಿಂದ ಇವುಗಳನ್ನು ಪೂಜೆ ಮಾಡಿ ನಂತರ ಮುಂದಿನ ಕಾರ್ಯವನ್ನು ಮಾಡುವುದಾಗಿದೆ.

ನಂತರ ಹಂದರವನ್ನು ಹಾಕಿ ಐದು ದೇವಸ್ಥಾನಕ್ಕೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬಂದು ಹಂದರಕ್ಕೆ ಹಾಲುಗಂಭ ಎಂದು ಆಲದ ಮರದ ಗಿಡವನ್ನು ತಂದಿರಿಸಿ ಹಂದರದಿಂದ ೪ ಭಾಗಕ್ಕೆ ಹಾಲುತುಪ್ಪವನ್ನು ಹಾಕುವುದು. ಅಂದರೆ ಆಲದ ಮರದಲ್ಲಿ ಸಕಲ ಎಲ್ಲ ದೇವತೆಗಳು ನೆಲೆಸಿರುತ್ತವೆ ಅಲ್ಲದೆ ಆಲದ ಮರವನ್ನೇ ಹುಲಿಗೆಮ್ಮನ ತಾಯಿ ಮುದ್ದಮ್ಮ ಎಂದು ಇಲ್ಲಿನ ಹುಲಿಗಿ ಕ್ಷೇತ್ರದಲ್ಲಿ ಹೇಳುತ್ತಾರೆ. ಆದ್ದರಿಂದ ಹುಲಿಗೆಮ್ಮನನ್ನು ನೆನೆಯುವುದಲ್ಲದೆ ಹುಲಿಗೆಮ್ಮನ ತಾಯಿಯನ್ನು ನೆನೆದ ಹಾಗೆ ಆಗುತ್ತೆ ಎಂದು ಒಂದು ರೀತಿಯಾದರೆ ನಾಲ್ಕು ಕಡೆ ಹಾಲು ತುಪ್ಪ ಯಾವ ಕಾಟಗಳು ಮದುವೆಗೆ ಬರದಿರಲಿ ಎಂದು ಸುತ್ತಲು ನಾಲ್ಕು ಕಡೆ ಹಾಲುತುಪ್ಪ ಹಾಕುತ್ತಾರೆ. ನಂತರ ಸೋದರ ಮಾವ ಹೆಣ್ಣನ್ನು ಕರೆದುಕೊಂಡು ಬಂದು ಮದುಮಗನಿಗೆ ಧಾರೆಯೆರೆಯುತ್ತಾನೆ. ಆಗ ಮಧುಮಗನು ಮಧುಮಗಳಿಗೆ ತಾಳಿಯನ್ನು ಕಟ್ಟುತ್ತಾನೆ. ತಾಳಿಯನ್ನು ಕಟ್ಟಿದ ಒಂದು ವಾರದ ನಂತರ

ಹುಲಿಗೆಮ್ಮ ದೇವಸ್ಥಾನಕ್ಕೆ ಮಧುಮಗ ಮಧುಮಗಳನ್ನು ಕರೆದೊಯ್ದು ದೇವಿಗೆ ಅಭಿಷೇಕ ಮಾಡಿಸಿ ಎಲ್ಲರೂ ಊಟ ಮಾಡಿಕೊಂಡು ಬರುತ್ತಾರೆ.

**ಸೀಮಂತ**

ಸೀಮಂತ ಮಾಡುವ ಕಾರ್ಯ ಎಲ್ಲರ ಮನೆಯಲ್ಲೂ ಇರುವುದಿಲ್ಲ. ಕೆಲವರ ಮನೆಯಲ್ಲಿ ಮಾತ್ರ ಇರುತ್ತದೆ. ಸೀಮಂತ ಕಾರ್ಯದಲ್ಲಿ ಹುಡುಗಿಗೆ ತವರಿನ ಕಡೆಯವರು ಹಲವಾರು ತಿನಿಸುಗಳನ್ನು, ಬಳೆ, ಕುಂಕುಮ, ಅರಿಶಿಣ, ಹೂವು, ಸೀರೆ, ರವಿಕೆ ಇವೆಲ್ಲವನ್ನು ತಂದಿರುತ್ತಾರೆ.

ಈ ಸೀಮಂತ ಕಾರ್ಯವನ್ನು ಮಾಡವುದರಿಂದ ತಾಯಿಗೆ ಖುಷಿಯಾಗುತ್ತದೆ ಎನ್ನುವ ನಂಬಿಕೆ. ಸೀಮಂತ ಮಾಡುವಾಗ ಹುಡುಗಿಗೆ ಹಸಿರು ಬಳೆಯನ್ನು ತೊಡಿಸುವುದು, ಹುಡುಗಿಗೆ ಯಾವುದೇ ರೀತಿಯ ದೃಷ್ಟಿಯು ತಾಗದಿರಲಿ ಎಂದು ಮತ್ತು ಹಸಿರನ್ನು ನೋಡುವುದರಿಂದ ಅವಳ ಕಣ್ಣಿಗೆ ಏನೋ ಒಂದು ತರಹದ ಆಕರ್ಷಣೆ ಮತ್ತು ಹಸಿರು ಸಮೃದ್ಧಿಯ ಸಂಕೇತವಾಗಿದೆ. ಮತ್ತು ಉಡಿ ತುಂಬುವಾಗ ಎಲೆ ಅಡಿಕೆ, ಒಣಕೊಬ್ಬರಿ, ಉತ್ತುತ್ತಿ ಹೇಗೆ ೯ ವಸ್ತುಗಳನ್ನು ಉಡಿ ತುಂಬುವುದು. ಅಂದರೆ ಸರಿ ಮತ್ತು ಬೆಸಸಂಖ್ಯೆಯನ್ನು ಸೂಚಿಸುವ ಈ ಎಲ್ಲ ವಸ್ತುಗಳನ್ನು ಕಾಣುವುದು.

ಮತ್ತು ಉಡಿ ತುಂಬಿಸಿ ಮಧುಮಗಳನ್ನು ಕಳಿಸುವುದು ಮತ್ತು ತವರು ಮನೆಯಲ್ಲಿ ಉಡಿಅಕ್ಕಿ ಹಾಕಿಸಿಕೊಳ್ಳುವುದು ಇದನ್ನೆಲ್ಲ ನೋಡಿದರೆ ತಾಯಿಯ ಮನೆಯಿಂದ ನೀನೇನು ತಂದಿದ್ದೀಯೋ ಎಂದು ಕೇಳಿದಾಗ ಉಡಿಯ ಅಕ್ಕಿಯಾದರೂ ತಂದಿದ್ದೇನೆ ಎಂದು ಹೇಳಿಕೊಳ್ಳುವ ಪದ್ಧತಿಗೆ ಈ ಕಾರ್ಯಗಳೆಲ್ಲಾ ಬಂದಿರಬಹುದೇನೋ ಎನ್ನುವಂತಹದ್ದು. ಸೀಮಂತ ಕಾರ್ಯವನ್ನು ಅನುಕೂಲವಿದ್ದವರು ವೈಭವಯುತವಾಗಿ ಮಾಡಿ ಎಲ್ಲರಿಗೂ ಊಟ ಹಾಕಿಸುತ್ತಾರೆ. ಆದರೆ ಅನುಕೂಲವಿಲ್ಲದವರು ಆಚರಣೆಯನ್ನು ಮನೆಗೆ ಮಾತ್ರ ಸೀಮಿತಗೊಳಿಸಿಕೊಳ್ಳುತ್ತಾರೆ.

**ಸಾವು**

ಸಾವು ಒಂದು ಸಂತಾಪದ ಸಂಕೇತ. ಸಾವಿನ ಸಂದರ್ಭದಲ್ಲಿ ಸಾಮಾನ್ಯವಾಗಿ ಎಲ್ಲರೂ ದುಃಖವನ್ನು ಸೂಚಿಸುತ್ತಾರೆ. ಮನೆಯ ಹಿರಿಯ ತೀರಿಕೊಂಡಾಗ ಮನೆಯ ಹಿರಿಯ ಮಗನೇ ಋಣವನ್ನು ಹಿಡಿದಿರುತ್ತಾನೆ. ಹೂಳುವಾಗ ಗರಿಕೆ ಹುಲ್ಲು ಮತ್ತು ಮಣ್ಣನ್ನು ಸೇರಿಸಿ ಮಣ್ಣು ಹಾಕುತ್ತಾರೆ. ಅಂದರೆ ಸತ್ತಂತ ವ್ಯಕ್ತಿಯ ಸಾವಿನಾಚೆಯ ಜಗತ್ತಿನಲ್ಲಿ ಪೂಜೆ ಸಲ್ಲಿಸಲು ಬೇಕಾಗುತ್ತದೆಯೆಂದು ಗರಿಕೆಯನ್ನು ಹಾಕುತ್ತಾರೆ. ಸ್ಮಶಾನಕ್ಕೆ ಹೋಗಿ ಬಂದ ವ್ಯಕ್ತಿಗಳೆಲ್ಲಾ ಮನೆಯಲ್ಲಿ ಸಗಣಿಯನ್ನು ತುಳಿದು ಒಳಗಡೆ ಹೋಗಬೇಕು. ಅಂದರೆ ಸಗಣಿ ಪಾವಿತ್ರ್ಯದ ಸಂಕೇತ. ಸಗಣಿಯನ್ನು ಎಡಗಾಲಿನಿಂದ ತುಳಿದು ಕತ್ತಲೆಯಾದ ಮನೆಯಲ್ಲಿ ಬೆಳಕಾಗಿ ದೀಪವನ್ನಿಟ್ಟಿರುತ್ತಾರೆ. ಸಂಸ್ಕಾರದ ನಂತರ ಆ ದೀಪವನ್ನು ನೋಡಬೇಕೆಂಬ ನಿಯಮವಿದೆ. ನಂತರ ಮೂರನೇ ದಿನ ಸತ್ತ ವ್ಯಕ್ತಿಗೆ ಬೇಕಾದ ತಿನಿಸುಗಳನ್ನು ಮಾಡಿಕೊಂಡು ಸ್ಮಶಾನಕ್ಕೆ ಹೋಗಿ ಸಮಾಧಿಯ ಮೇಲೆ ಇವುಗಳನ್ನು ಇಡುತ್ತಾರೆ. ಕಾಗೆಯು ಬಂದು ತನಗಿಷ್ಟವಾದದ್ದನ್ನು ಹೊತ್ತೊಯ್ದರೆ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿಯಾಗುತ್ತದೆಂದು ನಂಬುತ್ತಾರೆ. ನಂತರ

ಮನೆಗೆ ಬಂದು ಅಂದು ಮನೆಯಲ್ಲಿ ತಿಥಿಯನ್ನು ಆಚರಿಸುತ್ತಾರೆ. ಈ ತಿಥಿಯ ಸಂದರ್ಭದಲ್ಲಿ ಸತ್ತ ವ್ಯಕ್ತಿ ಪ್ರೀತ್ಯರ್ಥ ಅವನು ಇಷ್ಟಪಡುವ ಆಹಾರ ಪದಾರ್ಥಗಳನ್ನು ಸಿದ್ಧಪಡಿಸಿ ಊಟ ಮಾಡುತ್ತಾರೆ. ವ್ಯಕ್ತಿಯು ಮರಣ ಹೊಂದಿದ ೧೧ನೆಯ ದಿವಸದವರೆಗೆ ಯಾವುದೇ ಪೂಜಾ ವಿಧಿಗಳನ್ನು ಕೈಗೊಳ್ಳುವುದಿಲ್ಲ. ಮರಣಾನಂತರದ ೩, ೫, ೯, ೧೧ ನೆಯ ದಿನಗಳಲ್ಲಿ ಮಾಡುವ ಸಂಸ್ಕಾರದ ನಂತರದ ಕಾರ್ಯಗಳು ಬೆಸ ಸಂಖ್ಯೆಯನ್ನು ಸೂಚಿಸುತ್ತವೆ.

ಮನೆಯೆಲ್ಲ ಶುಚಿಮಾಡಿ ೧೧ನೇ ದಿನದಲ್ಲಿ ಅಂದು ಬ್ರಾಹ್ಮಣರನ್ನು ಮನೆಗೆ ಕರೆಯಿಸಿ ಅವರು ಬಂದು ಊಟ ಆಕಳು ಮೂತ್ರದಿಂದ ಮನೆಯನ್ನೆಲ್ಲಾ ಪರಿಶುಭ್ರಗೊಳಿಸಿ ಹೋದ ಮೇಲೆ ಪೂಜೆ ಮಾಡಿ ಸಂಜೆ ಬಂಧುಬಳಗಕ್ಕೆಲ್ಲಾ ಊಟಹಾಕುತ್ತಾರೆ. ಹುಲಿಗೆಮ್ಮ ಮನೆ ದೇರನ್ನಾಗಿ ಹೊಂದಿದವರ ಮನೆಯಲ್ಲಿ ಅಡ್ಲಿಕಿ ಇದ್ದರೆ ತಿಂಗಳಾಗುವುದರೊಳಗೆ ಹುಲಿಗೆಮ್ಮನ ದೇವಸ್ಥಾನಕ್ಕೆ ಹೋಗಿ ಅಲ್ಲಿ ನದಿಯಲ್ಲಿ ಹಳಪಲ್ಲಕ್ಕಿಯನ್ನು ಬಿಟ್ಟು ಹೊಸಪಲ್ಲಕ್ಕಿಯನ್ನು ಕೊಂಡುಕೊಂಡು ಮತ್ತೆ ಮನೆಯಲ್ಲಿ ಪ್ರತಿಷ್ಠಾಪಿಸುತ್ತಾರೆ.

ಸಾಮಾನ್ಯವಾಗಿ ಯುಗಾದಿಯಿಂದ ಯುಗಾದಿಯವರೆಗೆ ನಡೆಯುವ ಎಲ್ಲಾ ದಿನನಿತ್ಯದ ಕಾರ್ಯಕ್ರಮಗಳನ್ನು ವಾರ್ಷಿಕಾವರ್ತನದ ಆಚರಣೆಗಳು ಎನ್ನಬಹುದು. ಹುಲಿಗೆಮ್ಮ ದೇವಸ್ಥಾನದ ಧಾರ್ಮಿಕ ಆಚರಣೆಗಳನ್ನು ಹೇಳುವುದಾದರೆ ನಾವು ಅನೇಕ ಅಂಶಗಳನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗುತ್ತದೆ.

**ಪೂಜೆ**: ಮಾನವ ತನಗೆ ಶ್ರೇಯಸ್ಸನ್ನುಂಟು ಮಾಡುವವನ ಮನಸ್ಸನ್ನು ತೃಪ್ತಿ ಪಡಿಸುವುದಕ್ಕಾಗಿ ಮಾಡುವ ಕಾರ್ಯವಿಧಾನ. ಎಲ್ಲ ಮತಧರ್ಮಗಳಲ್ಲೂ ಕಂಡುಬರುವ ಪೂಜ್ಯವಾದ ಒಂದು ವಸ್ತುವಿಗೆ ವಿದ್ಯುಕ್ತವಾಗಿ ನೀಡುವ ಗೌರವ ಪೂಜೆಯ ಒಂದು ಅಂಶವೆಂದು ಹೇಳಬಹುದಾಗಿದೆ. ಒಂದೊಂದು ಮತದಲ್ಲಿ ಒಂದೊಂದು ರೀತಿಯ ಪೂಜಾವಿಧಾನವಿರುತ್ತದೆ. ಪೂಜಾ ವಿಧಿಯಲ್ಲಿ ಎರಡು ವಿಧ. ಇದನ್ನು ಮಾನವ, ದೈವವೆಂದು ಹೆಸರಿಸಬಹುದು. ಗುರುಗಳು, ಆಚಾರ್ಯರು, ಮಹಾತ್ಮರು, ಅತಿಮಾನುಷ ಶಕ್ತಿಯನ್ನು ಹೊಂದಿದ್ದ ಮತ್ತು ಸಮುದಾಯದ ಏಳ್ಗೆಗೆ ದುಡಿದ ವ್ಯಕ್ತಿಗಳು ಸಹ ಪೂಜಾರ್ಹರಾಗಿ ಪ್ರಚಲಿತದಲ್ಲಿರುತ್ತಾರೆ. ಉದಾಹರಣೆಗೆ ಸಮುದಾಯವೊಂದರ ಸಾಂಸ್ಕೃತಿಕರ ವೀರರಗಳ ಪಟ್ಟಿಯನ್ನೇ ನಾವು ಕೊಡಬಹುದಾಗಿದೆ.

ಎಲ್ಲೆಡೆಗೂ ಇರುವಂತೆ ಕರ್ನಾಟಕದಲ್ಲಿಯೂ ಸಹ ಪೂಜಾ ವಿಧಾನಗಳನ್ನು ಶಿಷ್ಟ ಮತ್ತು ಜನಪದ ಎಂದು ಎರಡು ಬಗೆಯಲ್ಲಿ ವಿಂಗಡಿಸಬಹುದಾಗಿದೆ. ಶಿಷ್ಟ ಪೂಜಾ ವಿಧಾನದಲ್ಲಿ ಪೌರಾಣಿಕ ಮತ್ತು ಆಗಮೋಕ್ತ ಮಾರ್ಗಗಳನ್ನು ಅನುಸರಿಸಿ ಬಹುತೇಕ ಸಂಸ್ಕೃತ ಮಂತ್ರಗಳ ಜೊತೆಯಲ್ಲಿ ಆಚರಿಸುವುದು ರೂಢಿ. ದೇವರ ಪೂಜೆ ಇಲ್ಲಿ ಒಂದು ಯಜ್ಞ. ಅವರವರ ಗುರುಗಳು ಹೇಳಿಕೊಟ್ಟ ಕ್ರಮದಲ್ಲಿ ಪೂಜೆಯನ್ನು ಮಾಡಬೇಕು.

ಆದರೆ ಇದಕ್ಕೆ ಭಿನ್ನವಾಗಿ ಜನಪದರು ತಮ್ಮ ಇಷ್ಟಾರ್ಥ ಸಿದ್ಧಿಯ ಮತ್ತು ಅನಿಷ್ಟ ನಿವಾರಣೆಗಾಗಿ ದೇವರನ್ನು ಒಲಿಸಿಕೊಳ್ಳುವ ಮಾರ್ಗಗಳಲ್ಲಿ ಅನುಸರಿಸುವ ಪೂಜೆಗಳು ವೈಶಿಷ್ಟ್ಯಮಯವಾದವು ಮತ್ತು ವೈವಿಧ್ಯಮಯವಾದವುಗಳಾಗಿವೆ. ಪೂಜೆಗಳಲ್ಲಿ ಪ್ರತಿಷ್ಠಾಪಿಸಿದ ದೇವರಿಗೆ ಅರಿಶಿನ ಕುಂಕುಮ ಹಚ್ಚಿ, ದೀಪಹತ್ತಿಸಿ, ಧೂಪಹಾಕಿ, ನೈವೇದ್ಯ ಮಾಡಿಸುವುದು ಒಂದು ಕ್ರಮ. ಕೆಲವು ದೇವರಿಗೆ ತಮ್ಮಡಿ, ಸಿದ್ಧ, ಜೋಗಿ ಕೆಲವೆಡೆ

ಬೆಸ್ತರು, ಬೇಡರು ಮುಂತಾದ ನಿರ್ದಿಷ್ಟ ಜಾತಿಗೆ ಸೇರಿದ ಜನರು ಹುಲಿಗೆಮ್ಮನಿಗೆ ಪೂಜೆ ಕೈಗೊಳ್ಳುತ್ತಾರೆ. ಇವರ ಮೂಲಕ ದೇವರನ್ನು ಪ್ರಾರ್ಥಿಸಿ ಬಂದಿರುವ ಕೇಡಿನ ಪರಿಹಾರಕ್ಕಾಗಿ ಜನ ಪೂಜೆ ಮಾಡಿಸುತ್ತಾರೆ. ಗೋದಿಯಮ್ಮ, ಉಡಸಲಮ್ಮ, ಹೊನಲಮ್ಮ ಮುಂತಾದ ದೇವತೆಗಳನ್ನು ಹೊಲದ ಬದುವಿನಲ್ಲಿ, ಹೊಳೆ ತೀರದಲ್ಲಿ ಸ್ಥಾಪಿಸಿ ಪೂಜೆ ಮಾಡಿ ಅಲ್ಲಲ್ಲಿಯೇ ವಿಸರ್ಜನೆ ಮಾಡಿ ಬಿಡುತ್ತಾರೆ. ಈ ಬಗೆಬಗೆಯ ಪೂಜೆಗಳು ಬೇರೆ ಬೇರೆ ಉದ್ದೇಶಕ್ಕಾಗಿ ಪ್ರತಿಹಳ್ಳಿಯಲ್ಲೂ ನಡೆಯುತ್ತಲೇ ಇವೆ.

ಜನಪದರ ಪೂಜಾಕ್ರಮವನ್ನು ನೋಡಿದಾಗ ಪೂಜೆ ಧಾರ್ಮಿಕತೆಯ ಕ್ರಿಯಾಂಗ ಎನಿಸುತ್ತದೆ. ಅದು ಗೌರವ, ಭಯ ಮತ್ತು ಆಪೇಕ್ಷಾಮೂಲವಾದುದು. ಜನಪದರ ಪೂಜೆಗಳು ಅವರ ದೈನಂದಿನ ಹುಟ್ಟು, ಸಾವು, ಮದುವೆ, ಹೆರಿಗೆ, ಋತುಮತಿತ್ವ, ಆಹಾರಾನ್ವೇಷಣೆಗಳಂಥ ಸಂದರ್ಭಗಳೊಂದಿಗೆ ಬೆಸೆದುಕೊಂಡಿದೆ. ಪ್ರಾರ್ಥನೆ, ಉಪಾಸನೆ, ಪ್ರತಿಜ್ಞೆ, ತಪಸ್ಸು, ತೀರ್ಥಯಾತ್ರೆ, ತ್ಯಾಗ, ಬಲಿ, ಅನ್ನ ಸಂತರ್ಪಣೆ, ಉತ್ಸವ, ಹಬ್ಬ, ನೃತ್ಯ, ಪರಿಶುದ್ಧತೆ, ಲೌಕಿಕ ನಿರಾಸಕ್ತಿ, ಮೋಕ್ಷ ಸಾಧನೆ, ಸ್ಥಿತಪ್ರಜ್ಞತ್ವ, ಸರಳತೆಯ ಆಚರಣೆ, ಮಂತ್ರವಾದಿತ್ವ, ಪೂಜಾರಿತನ, ಭಕ್ತಿ, ಪಶ್ಚಾತ್ತಾಪ, ನಿಷಿದ್ಧತೆ, ಕುಲದೇವತಾರಾಧನೆ ಇವೇ ಹಲವು.

೧. ದಿನನಿತ್ಯದ ಪೂಜೆಗಳು

೨. ಮಾಸಿಕ ಕಾರ್ಯಕ್ರಮಗಳು

೩. ರಥೋತ್ಸವ ಮತ್ತು ಜಾತ್ರೆ

೪. ಇತರೆ ಸಾಂಸ್ಕೃತಿಕ ಉತ್ಸವಗಳು ಮತ್ತು ಆಚರಣೆಗಳು

೧. ದಿನನಿತ್ಯದ ಪೂಜೆಗಳು

ಹುಲಿಗೆಮ್ಮನಿಗೆ ಬೆಳಗ್ಗೆ ೫ ಗಂಟೆಗೆ ಪೂಜೆಯನ್ನು ಮಾಡುತ್ತಾರೆ. ಹುಲಿಗೆಮ್ಮನ ಪೂಜೆ ಮಾಡುವಾಗ ದೇವಸ್ಥಾನದ ಆವರಣದಲ್ಲಿ ಮಹಿಳೆರೆಲ್ಲಾ ಊರಿನ ಮಹಿಳೆಯರೆಲ್ಲ ಕೂಡಿ ಸುಪ್ರಭಾತವನ್ನು ಹಾಡುವುದನ್ನು ಕಾಣುತ್ತೇವೆ. ನಂತರ ಬೆಳಿಗ್ಗೆ ೬ ಗಂಟೆಗೆ ದೇವಿಗೆ ಮಂಗಳಾರತಿಯನ್ನು ಮಾಡಿ ಪ್ರಸಾದವನ್ನು ಹಂಚುತ್ತಾರೆ. ಪ್ರತಿದಿವಸ ಪೂಜಾರಿಗಳು ಬೆಳಿಗ್ಗೆ ದೇವಿಗೆ ಸ್ನಾನ ಮಾಡಿಸುತ್ತಾರೆ. ಈ ಸೇವೆಯಿಂದಲೇ ನಿತ್ಯ ಪೂಜೆಗಳು ಶುರುವಾಗುತ್ತವೆ.

### ನೈರ್ಮಲ್ಯ ಪೂಜೆ

ನೆರ್ಮಲ್ಯ ಪೂಜೆ ಎಂದರೆ ಪೂಜಾರಿಗಳು ನಿನ್ನಿನ ದಿವಸ ಮಾಡಿರತಕ್ಕಂತ ಅಲಂಕಾರಗಳನ್ನು ಅಂದರೆ ಒಡವೆ ವಸ್ತ್ರಗಳನ್ನು ತೆಗೆದು ಹೂವಿನ ಹಾರಗಳನ್ನು ತೆಗೆದು ದೇವಸ್ಥಾನದ ಒಂದು ಕಡೆ ಇಡುತ್ತಾರೆ. ದೇವಿಗೆ ಸ್ನಾನವನ್ನು ಮಾಡಿಸುತ್ತಾರೆ. ಆನಂತರ ದೇವಿಗೆ ಬಣ್ಣದ ಸೀರೆಯನ್ನು ಆಕೆಗೆ ಉಡಿಸುತ್ತಾರೆ. ಆಭರಣಗಳನ್ನು ಹಾಕಿ ಹೂ ಮುಡಿಸಿ ಹೂವಿನ ದಂಡೆಯನ್ನು ಹಾಕುತ್ತಾರೆ. ಭಕ್ತರು ಕೊಟ್ಟ ಸೀರೆಗಳನ್ನು ದೈವಕ್ಕೆ ದಿನಾಲು

ಉಡಿಸುತ್ತಾರೆ. ವಸ್ತ್ರಗಳನ್ನುಡಿಸಿ ಆರತಿ ಮಾಡಿ ನಂತರ ನೈರ್ಮಲ್ಯ ಪೂಜೆ ಮಾಡುತ್ತಾರೆ. ಪೂಜೆಗೆ ಬಳಸಿದ ಹೂವನ್ನು ವಿಶೇಷ ಪೂಜೆಯನ್ನು ಮಾಡಿಸಿದಂತಹ ಮತ್ತು ಎಲ್ಲಾ ಭಕ್ತರಿಗೂ ಈ ಹೂವನ್ನು ಮತ್ತು ತೀರ್ಥವನ್ನು ಪ್ರಸಾದವೆಂದು ಕೊಡುತ್ತಾರೆ.

**ಪಂಚಾಮೃತ ಅಭಿಷೇಕ**

ನಂತರ ಪಂಚಾಮೃತ ಅಭಿಷೇಕ ಮತ್ತು ಗಂಧದ ಅಭಿಷೇಕ, ಕುಂಕುಮಾರ್ಚನೆ ಮುಂತಾದವುಗಳನ್ನು ಮಾಡುತ್ತಾರೆ. ಅಲಂಕಾರ ಪೂಜೆ ಅಂದರೆ ದೇವಿಗೆ ಆಭರಣಗಳನ್ನು ತೊಡಿಸುತ್ತಾರೆ. ಅಲಂಕಾರ ಪೂಜೆ ಅಂದರೆ ದೇವಿಗೆ ಆಭರಣಗಳೊಂದಿಗೆ ರೇಷ್ಮೆಯ ಸೀರೆಯನ್ನು ಉಡಿಸಿ ಹೂ ದಂಡೆಯನ್ನು ಹಾಕಿ ಚೆನ್ನಾಗಿ ದೇವಿಯನ್ನು ಸಿಂಗರಿಸುತ್ತಾರೆ. ಮತ್ತು ವಿಧ ವಿಧವಾದ ಆರತಿಗಳನ್ನು ಮಾಡುತ್ತಾರೆ. ಆರತಿಯನ್ನು ಮಾಡುವ ಕಾರಣ ದೇವಿಗೆ ಯಾವುದೇ ರೀತಿಯ ದೃಷ್ಟಿ ತಾಗದೇ ಇರಲಿ ಎಂದು ಆರತಿಯನ್ನು ಮಾಡುತ್ತಾರೆ. ದಿನಾಲು ವಿಧ ವಿಧ ಪ್ರಸಾದವನ್ನು ಮುಡಿಯಿಂದ ಅಡಿಗೆ ನೈವೇದ್ಯ ಮಾಡುವುದು ಇಲ್ಲಿನ ವೈಶಿಷ್ಟ್ಯ. ನಂತರ ಮಹಾ ಮಂಗಳಾರತಿಯನ್ನು ಮಾಡುತ್ತಾರೆ. ದೇವಿಗೆ ವಿವಿಧ ಪ್ರದೇಶಗಳಿಂದ ಭಕ್ತಾದಿಗಳು ಬಂದು ಕೈ ಮುಗಿದು ಹಣ್ಣು, ಕಾಯಿ ಮಾಡಿಸುತ್ತಾರೆ. ಕೆಲವರು ನಿಂಬೆಹಣ್ಣನ್ನು ದೇವಿಯ ಉಡಿಯಲ್ಲಿ ತುಂಬಿಸಿ ಮತ್ತೆ ತಮ್ಮ ಮನೆಗೆ ತೆಗೆದುಕೊಂಡು ಹೋಗುವ ರೂಢಿಯಿದೆ. ದೇವಿಯಲ್ಲಿ ತಮ್ಮ ಮೊರೆಯನ್ನು ಸಲ್ಲಿಸುವುದರಿಂದ ತಮ್ಮ ಬೇಡಿಕೆಗಳನ್ನು ಈಡೇರುತ್ತವೆಂದು ಭಕ್ತರು ನಂಬುತ್ತಾರೆ. ಆದ್ದರಿಂದ ಪ್ರೀತಿಯ ಮಾತಿಗೆ ಸೋಲುವ ತಾಯಿ ಹುಲಿಗೆಮ್ಮ ಎಂದು ಈಕೆ ಬೇಡಿದ್ದನ್ನು ಕೊಡುವ ಕಾಮಧೇನು ಎಂದು ಆಕೆಯನ್ನು ನಮ್ರತೆಯಿಂದ ಪೂಜಿಸುತ್ತಾರೆ.

ದೇವಿಯ ತಲೆಯ ಮೇಲಿಂದ ಹೂ ಬಿದ್ದರೆ ಭಕ್ತರ ಬೇಡಿಕೆಗಳು ಈಡೇರುತ್ತವೆ ಎಂಬ ನಂಬಿಕೆ. ಇಲ್ಲಿ ಮನುಷ್ಯನ ಮನಸ್ಥಿಯು ಹೇಗೆ ನಂಬಿಕೆಗಳನ್ನು ಆಧರಿಸಿದೆಯೆಂಬುದನ್ನು ಇದರಿಂದ ಅರಿಯಬಹುದಾಗಿದೆ. ಜನಪದರು ತಾವು ನಂಬಿರುವ ದೇವರುಗಳಿಗೆ ತಾವು ನಿಷ್ಠೆಯಿಂದ ನಡೆದುಕೊಂಡರೆ ಹಾಗೂ ದೇವತೆಯು ಸಂಪ್ರೀತಿಯಿಂದಿದ್ದರೆ ಸುತ್ತಮುತ್ತಲಿನವರಿಗೆ ಯಾವುದೇ ರೋಗರುಜಿನಗಳಿಂದ ತೊಂದರೆಯಾಗುವುದಿಲ್ಲವೆಂದು ನಂಬುತ್ತಾರೆ. ಹಾಗೆಯೇ ತನ್ನ ಸೃಷ್ಟಿಯಾದ ಮನುಷ್ಯರ ಮೇಲೆ ದೇವರ ಕೃಪಾಕಟಾಕ್ಷ ಸದಾ ಇರುತ್ತದೆಂದು ಜನಪದರು ನಂಬುತ್ತಾರೆ.

ಹುಲಿಗೆಮ್ಮ ದೇವಿಯ ಅತ್ಯಂತ ಪ್ರಿಯವಾದ ವಾರವೆಂದರೆ ಮಂಗಳವಾರ. ಪ್ರತಿ ಮಂಗಳವಾರದಂದು ಸಂಜೆ ವಿಶೇಷ ಪೂಜೆ, ಪಲ್ಲಕ್ಕಿ ಸೇವೆಯನ್ನು ಮಾಡುತ್ತಾರೆ. ಅಂದರೆ ದೇವಿಯ ಉತ್ಸವ ಮೂರ್ತಿಯನ್ನು ಅಲಂಕರಿಸಿ ಪಲ್ಲಕ್ಕಿಯಲ್ಲಿ ಕೂಡಿಸಿ, ಅಲಂಕರಿಸಿ ದೇವಸ್ಥಾನದ ಸುತ್ತ ಪ್ರದಕ್ಷಿಣೆಯನ್ನು ಹಾಕಿ ನಂತರ ತೊಟ್ಟಿಲಲ್ಲಿ ಕೂಡಿಸಿ ಜೋಗುಳ ಹಾಡು ಹೇಳಿ ದೇವಿಯನ್ನು ಮಲಗಿಸುತ್ತಾರೆ. ನಂತರ ಎಲ್ಲಾ ಭಕ್ತಾದಿಗಳಿಗೆ ಪ್ರಸಾದವನ್ನು ಹಂಚಲಾಗುತ್ತದೆ. ಇಲ್ಲಿಗೆ ಆ ದಿನದ ಕಾರ್ಯಕ್ರಮ ಅಂದರೆ, ಬೆಳಿಗ್ಗೆಯಿಂದ ರಾತ್ರಿಯವರೆಗಿನ ಸೇವೆಗಳು ಮುಂದುವರೆಯುತ್ತವೆ. ಹುಲಿಗೆಮ್ಮ ದೇವಿಯ ಪೂಜೆಯಲ್ಲಿ ವಿಧ ವಿಧವಾದ ಪೂಜೆಗಳು, ವಿಧವಿಧವಾದ ಸೇವೆಗಳು

ಇರುತ್ತವೆ. ಇವುಗಳಲ್ಲಿ ತುಳಸಿ ಅರ್ಚನೆಯೂ ಒಂದು. ತುಳಸಿಯನ್ನು ದಳ ದಳವಾಗಿ ಅಂದರೆ ನಾಲ್ಕು ನಾಲ್ಕು ಎಲೆಗಳು ಇರುವ ಒಂದು ಅತಿ ಸಣ್ಣ ರೆಂಬೆಯನ್ನು ಕಿತ್ತು ತಂದು ೧೦೮ ಅಥವಾ ೧೦೦೮ ದಳಗಳನ್ನು ದೇವಿಗೆ ಮಂತ್ರ ಹೇಳುತ್ತಾ, ಸರ್ವಮಂಗಳ ಮಾಂಗಲ್ಯೇ ಶಿವೇ ಸವಾರ್ಥಿಸಾಧಕೇ ಶರಣ್ಯೇಂತ್ರಂಬಕೇ ದೇವಿ ನಾರಾಯಣಿ ನಮೋಸ್ತುತೇ ಎಂದು ಮಂತ್ರ ಪಠಿಸುತ್ತಾರೆ. ಈ ಮಂತ್ರ ಪಠನೆ ಹಾಗೂ ಅರ್ಚನೆಯಿಂದ ತಮ್ಮ ಇಷ್ಟಾರ್ಥಗಳು ಸಿದ್ಧಿಸುತ್ತವೆ ಎಂದರ್ಥ. ಯಾವ ಹೂವು ಇಲ್ಲದಿದ್ದರೂ ಪರವಾಯಿಲ್ಲ ತುಳಸಿ ಒಂದು ಇದ್ದರೆ ಸಾಕು ಪೂಜೆ ಪೂರ್ಣಗೊಳ್ಳುವುದು ಎಂದು ಹೇಳಲಾಗುತ್ತದೆ. ವೈಜ್ಞಾನಿಕವಾಗಿಯೂ ಈ ತುಳಸಿ ಬಹಳ ಉಪಯೋಗಕಾರಿಯಾದುದೆಂದು ರುಜುವಾತಾಗಿದೆ. ಬೆಳಗಿನ ಸಮಯದಲ್ಲಿ ದೇವಿಗೆ ಈ ತುಳಸಿಯನ್ನು ಅರ್ಚನೆ ಮಾಡಿ ಅದರ ನೀರನ್ನು ಕುಡಿದರೆ ಶೀತಬಾಧೆಗಳು ನಿವಾರಣೆಯಾಗುತ್ತವೆಂದು ನಂಬಲಾಗಿದೆ. ದಿನನಿತ್ಯವೂ ಈ ತುಳಸಿ ಎಲೆಯನ್ನು ಉಪಯೋಗಿಸಿದರೆ ಮುಖದಲ್ಲಿ ಒಂದು ತರಹದ ತೇಜಸ್ಸು ಉಂಟಾಗುತ್ತದೆ. ಚರ್ಮರೋಗವೂ ಸಹ ನಿವಾರಣೆಯಾಗುತ್ತದೆ. ಇದರ ರೋಗನಿವಾರಕ ಶಕ್ತಿಯಿಂದಾಗಿಯೋ ಏನೋ ತುಳಸಿಗೆ ಪೂಜೆಗಳಲ್ಲಿ ಮೊದಲ ಸ್ಥಾನವಿದೆ. ನಿದರ್ಶನಕ್ಕೆ ಅಲುಮೇಲು ಮಂಗಮ್ಮ(ಪದ್ಮಾವತಿ)ಗೆ ಇಷ್ಟಾರ್ಥಗಳನ್ನು ಈಡೇರಿಸುವಂತೆ ತುಳಸಿಯ ಅರ್ಚನೆಯ ಜೊತೆಗೆ ತುಳಸಿಯ ಮಾಲೆಯನ್ನು ಸಹ ಹಾಕುತ್ತಾರೆ.

**ಗಂಧಾಭಿಷೇಕ**

ನಮಗೆ ಬಹಳ ಕಷ್ಟ ಬಂದಾಗ ಅಥವಾ ರೋಗ ರುಜಿನಗಳು ಬಂದಾಗ ಈ ಗಂಧಾಭಿಷೇಕವನ್ನು ಮಾಡಿಸುತ್ತಾರೆ. ಹೀಗೆ ಮಾಡುವುದರಿಂದ ದೇವಿ ತಂಪಾಗುತ್ತಾಳೆ ಮತ್ತು ಭಕ್ತರನ್ನೂ ತಂಪಾಗಿರಿಸುತ್ತಾಳೆ ಎನ್ನುವ ನಂಬಿಕೆಯಿದೆ. ಗಂಧಾಭಿಷೇಕದ ನಂತರ ಅಭಿಷೇಕ ಮಾಡಿದ ಗಂಧವನ್ನು ಭಕ್ತಾದಿಗಳಿಗೆ ಹಂಚಲಾಗುತ್ತದೆ. ಇಂತಹ ಗಂಧವನ್ನು ಹಚ್ಚಿಕೊಂಡರೆ ಚರ್ಮರೋಗಗಳು ನಿವಾರಣೆಯಾಗುತ್ತವೆಯೆಂದು ನಂಬಲಾಗಿದೆ. ಇದರಲ್ಲಿ ವಾಸ್ತವವೂ ಇದೆ. ಗಂಧಕ್ಕೆ ಔಷಧೀಯ ಗುಣವಿದ್ದು ಅದು ಚರ್ಮದ ಕಾಯಿಲೆಗಳನ್ನು ನಿವಾರಿಸುತ್ತದೆ.

ಈ ಎಲ್ಲಾ ಪೂಜಾವಿಧಿಗಳ ಹಿಂದಿನ ಆಶಯ ದೇವಿಯನ್ನು ಸಂತೃಪ್ತಿಗೊಳಿಸುವುದಾಗಿದೆ. ಹಾಗೆಯೇ ಸಂತೃಪ್ತಳಾದ ದೇವಿಯು ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುತ್ತಾಳೆಂಬುದಾಗಿದೆ.

ಹುಲಿಗೆಮ್ಮ ದೇವಿಗೆ ಮಂಗಳವಾರ ಮತ್ತು ಶುಕ್ರವಾರದ ದಿನಗಳು ಬಹಳ ಶ್ರೇಷ್ಠವಾದ ದಿನಗಳಾಗಿವೆ. ಮಂಗಳವಾರ ಅದರಲ್ಲೂ ಐದು ಮಂಗಳವಾರ ಅಥವಾ ಐದು ಶುಕ್ರವಾರ ದೇವಿಗೆ ನಡೆದುಕೊಂಡರೆ ಇಷ್ಟಾರ್ಥಗಳೆಲ್ಲಾ ಈಡೇರುತ್ತವೆ. ದೇವಿ ಬೇಡಿದ್ದನ್ನು ಕೊಡುತ್ತಾಳೆ ಎಂಬ ನಂಬಿಕೆಯಿದೆ. ದೇವಿಯ ಅರ್ಚನೆಗೆ ಲಕ್ಕಿಪತ್ರೆಗಳನ್ನು ಸಹ ಏರಿಸಲಾಗುತ್ತದೆ. ಹಾಗೆಯೇ ಹುಲಿಗೆಮ್ಮ ಭಂಡಾರದ ಮಾಯಕಾರತಿ. ಆದ್ದರಿಂದ ಭಂಡಾರ ಕುಂಕುಮವನ್ನು ಈಕೆಗೆ ಎರಚುವುದಲ್ಲದೆ ಭಕ್ತಾದಿಗಳೆಲ್ಲಾ ದೇವಸ್ಥಾನದ ತುಂಬಾ ಭಕ್ತಾದಿಗಳು ಭಂಡಾರವನ್ನು ಎರಚುತ್ತಾ ಭಕ್ತಿಯನ್ನು ಪ್ರದರ್ಶಿಸುತ್ತಾರೆ.

ಹುಲಿಗೆಮ್ಮನಿಗೆ ಕಾಯಿಪಲ್ಯಗಳಾದ ಬದನೆಕಾಯಿ, ಹಸಿಮೆಣಸಿನಕಾಯಿ, ಮೂಲಂಗಿ, ರಾಜಗೀರಿ ಪಲ್ಯೆ, ಉಳ್ಳಾಗಡ್ಡಿ ಎಂದರೆ ತುಂಬಾ ಇಷ್ಟ. ಅದಕ್ಕಾಗಿ ಪಡ್ಲಿಕಿ ತುಂಬಿಸುವಾಗ ಇವುಗಳನ್ನೆಲ್ಲಾ ಇಟ್ಟು ಪಡ್ಲಗಿಯನ್ನು ತುಂಬಿಸುತ್ತಾರೆ. ಹೀಗೆ ದಿನನಿತ್ಯದ ಕಾರ್ಯಕ್ರಮಗಳ ಪೂಜಾ ವಿಧಾನಗಳಲ್ಲಿ ಇಷ್ಟೆಲ್ಲಾ ಪೂಜೆಯ ವಿಧಾನವನ್ನು ನಾವು ನೋಡುತ್ತೇವೆ. ಹೀಗೆ ದಿನನಿತ್ಯದ ಕಾರ್ಯಕ್ರಮಗಳ ಪೂಜಾ ವಿಧಿಗಳಲ್ಲಿ ಇಷ್ಟೆಲ್ಲಾ ವಿಧಗಳನ್ನು ಕಾಣಬಹುದಾಗಿದೆ.

**ಮಾಸಿಕ ಕಾರ್ಯಕ್ರಮಗಳು**

ಯುಗಾದಿಯಿಂದ ಯುಗಾದಿಯವರೆಗೆ ನಡೆಯುವ ಕಾರ್ಯಕ್ರಮಗಳನ್ನು ಮಾಸಿಕ ಕಾರ್ಯಕ್ರಮಗಳೆನ್ನಬಹುದು.

೧. ಚೈತ್ರ ಮಾಸದಲ್ಲಿ ದೇವಿ ಹುಲಿಗೆಮ್ಮಳಿಗೆ ವಿಶೇಷ ಪೂಜೆಯನ್ನು ಮಾಡಲಾಗುತ್ತದೆ. ಚೈತ್ರಮಾಸ ಇದು ಯುಗಾದಿಯ ಮಾಸ. ಯುಗಾದಿಯಲ್ಲಿ ಬೇವು ಮತ್ತು ಬೆಲ್ಲಕ್ಕೆ ವಿಶೇಷ ಮಾನ್ಯತೆ ಇದೆ. ಅಂದು ಮನೆಯ ಬಾಗಿಲಿಗೆ ಬೇವು ಮತ್ತು ಮಾವಿನ ತೋರಣ ಕಟ್ಟುತ್ತಾರೆ. ನೀರಲ್ಲಿ ಬೇವಿನ ಎಲೆ ಹಾಕಿ ಸ್ನಾನ ಮಾಡುತ್ತಾರೆ. ಸಾಮಾನ್ಯವಾಗಿ ಹೊಸಪೇಟೆ ತಾಲ್ಲೂಕಿನಲ್ಲಿ ಯುಗಾದಿಯನ್ನು ಮೂರು ದಿವಸ ಆಚರಿಸುವ ರೂಢಿಯಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಒಂದು ದಿನಕ್ಕೆ ಸೀಮಿತಗೊಂಡಿದೆ. ಶ್ಯಾವಿಗೆ, ಬೇವಿನ ಪುಡಿ ಮಾಡಿ ಊಟ ಮಾಡುವ ಪದ್ಧತಿ ಇದೆ. ಮರುದಿನ ಹೋಳಿಗೆಯನ್ನು ಮಾಡಿ ದೇವಿಗೆ ನೈವೇದ್ಯ ಹಿಡಿದು ನಂತರ ಊಟ ಮಾಡುತ್ತಾರೆ.

೨. ವೈಶಾಖ ಮಾಸದಲ್ಲಿ ಹುಲಿಗೆಮ್ಮ ದೇವಿಯ ಜಾತ್ರೆಯು ನಡೆಯುತ್ತದೆ. ಪ್ರತಪಥೆಯಿಂದ ಕಂಕಣಧಾರಣ ಕಾರ್ಯ ಆರಂಭವಾಗಿ ಒಟ್ಟು ೧೦ ದಿವಸ ಜಾತ್ರೆ ನಡೆಯುತ್ತದೆ. ಅನುಕ್ರಮವಾಗಿ ೧. ಕಂಕಣ ಕಟ್ಟುವುದು ೨. ರಥೋತ್ಸವ, ೩. ಅಕ್ಕಿಪುಡಿ, ೪. ಬಾಳೆದಂಡು, ೫. ಪಾಯಸ, ೬. ಕೊಂಡ ಪೂಜೆ ಹೀಗೆ ಕ್ರಮವಾಗಿ ಉತ್ಸವಗಳು ನೆರವೇರುತ್ತವೆ.

**ಜಾತ್ರೆ**

ಜಾತ್ರೆ ಎಂದರೇನೆ ಸಾಮಾನ್ಯವಾಗಿ ಎಲ್ಲರಿಗೂ ಮನಃಪುಳಕಿಸುವ ಒಂದು ಪದ ಎನ್ನಬಹುದು. ಯಾಕೆಂದರೆ ಮನುಷ್ಯ ವರುಷವೆಲ್ಲಾ ದುಡಿದು ವಿಶ್ರಾಂತಿ ಬಯಸಿದಾಗ ಅಂದರೆ ದಣಿದ ದೇಹಕ್ಕೆ ಆರಾಮವಾಗಿ ಮತ್ತು ಖುಷಿಯಾಗಿರಲು ಈ ಜಾತ್ರೆಗಳು ಕಲ್ಪಿಸುವ ಒಂದು ಆರಾಮದ ಸುಸಮಯ ಎನ್ನಬಹುದು. ಯಾಕೆಂದರೆ ವರ್ಷವೆಲ್ಲಾ ಅವನು ಹೊಲ ಬಿಟ್ಟರೆ ಮನೆ, ಮನೆ ಬಿಟ್ಟರೆ ಹೊಲ ಇದರಲ್ಲಿಯೇ ತನ್ನ ಜೀವನದ ಸಮಯವನ್ನು ಕಳೆಯುವ ಅವನಿಗೆ ಜಾತ್ರೆಯಂಥ ಉತ್ಸವಗಳು ಮನಸ್ಸಂತೋಷ ಕಲ್ಪಿಸುತ್ತವೆ.

ಜಾತ್ರೆ ಎಂದಾಗ ಇದಕ್ಕಾಗಿಯೇ ಹೊಸ ಬಟ್ಟೆಯನ್ನು ತೆಗೆದುಕೊಳ್ಳುವುದು ಅದರಲ್ಲೂ ಬೆಳೆ ಚೆನ್ನಾಗಿದ್ದರಂತೂ ಇನ್ನೂ ಖುಷಿಯಿಂದ ಮನೆಯವರಿಗೆ ಮಕ್ಕಳಿಗೂ ಬಟ್ಟೆ ತೆಗೆದುಕೊಂಡು ಮಕ್ಕಳಾದಿಯಾಗಿ

ಮನೆಮಂದಿಗೆಲ್ಲ ಈ ಸಲ ಜಾತ್ರೆಯನ್ನು ಚೆನ್ನಾಗಿ ಆಚರಿಸೋಣ ಎಂದು ಹೇಳುವುದು ಜನಪದರ ಸಾಮಾನ್ಯ ಬದುಕಿನ ಚಿತ್ರಣವಾಗಿದೆ. ಇಂದಿಗೂ ಇದನ್ನು ನಾವು ಎಲ್ಲಡೆಯೂ ಕಾಣಬಹುದಾಗಿದೆ.

ಜಾತ್ರೆ ಎಂದರೆ ಅದು ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಾಗಿರಬಹುದು. ಅಥವಾ ಮೂರು ವರ್ಷಕ್ಕೊಮ್ಮೆ ಅಥವಾ ಐದು ವರ್ಷಕ್ಕೊಮ್ಮೆಯೂ ನಡೆಯುವ ಜಾತ್ರೆಯಾಗಿರಬಹುದು. ಸಾಮಾನ್ಯವಾಗಿ ಬಳಕೆ ಮಾಡುವ ಪದದಲ್ಲಿ ನಾವು ಅದನ್ನು ಜಾತ್ರೆ ಅಂತಲೇ ಕರೆಯುತ್ತೇವೆ. ಯಾಕೆಂದರೆ ಇಂದು ವಡಕಪ್ಪನ ತೇರು ಅಂತ ಕೆಲವರೆಂದರೆ ಇನ್ನು ಕೆಲವರು ಇಂದು ವಡಕಪ್ಪನ ಜಾತ್ರೆ ಅಂತ ಕರೆಯುತ್ತಾರೆ. ಅಂದರೆ ರಥದಲ್ಲಿ ದೇವರ ಉತ್ಸವ ಮೂರ್ತಿಯನ್ನು ಕೂರಿಸಿ ಎಳೆಯುವುದು ತೇರಾದರೆ ತದನಂತರ ಕಾಣಿಸಿಕೊಳ್ಳುವುದು ಜನರ ಜಾತ್ರೆ. ಕೆಲವೊಮ್ಮೆ ಹಿರಿಯರು ಹೇಳುವ ಪದ ನೆನಪಾಗುತ್ತದೆ. ಜನ ಮರುಳೋ, ಜಾತ್ರೆ ಮರುಳೋ. ಹೀಗೆ ಜಾತ್ರೆ ಅನ್ನುವ ಪದ ಹೆಚ್ಚಾಗಿ ನಮ್ಮ ಗ್ರಾಮೀಣ ಬದುಕಿನ ಸಂತೋಷವನ್ನು, ಜನರ ಹರುಷವನ್ನು ಎತ್ತಿತೋರಿಸುವಂತದಾಗಿದೆ. ನಾವು ಯಾಕೆ ಗ್ರಾಮೀಣ ಅನ್ನುವುದನ್ನೇ ಇಲ್ಲಿ ಹೆಚ್ಚಾಗಿ ಎತ್ತಿ ತೋರಿಸುತ್ತೇವೆ, ಅಂದರೆ ಹಳ್ಳಿಗಳಲ್ಲಾಗುವ ಜಾತ್ರೆ ಪೇಟೆಯಲ್ಲಿ ಕಾಣಿಸಿಕೊಳ್ಳವುದು ಸ್ವಲ್ಪ ಕಡಿಮೆ ಅಂತ ಇತ್ತೀಚಿಗೆ ಕಂಡುಕೊಂಡ ಮಾಹಿತಿ ಅಂತ ಹೇಳಬಹುದಾಗಿದೆ.

ಜಾತ್ರೆ ಎಂದರೇನು ಎನ್ನುವುದನ್ನು ನೋಡಿದಾಗ ಸಮಾಜದ ಒಳತಿಗಾಗಿ, ಸಾಮಾಜಿಕ ಹೊಂದಾಣಿಕೆಗಾಗಿ ವಿಶೇಷ ದಿನಗಳಲ್ಲಿ ಜನರು ಸಂತೋಷ, ಸಂಭ್ರಮಗಳಿಂದ ನಡೆಸುವ ಸಂಪ್ರದಾಯಾಚರಣೆಗಳೇ ಹಬ್ಬ ಅಥವಾ ಜಾತ್ರೆ ಎನ್ನಬಹುದು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸುಗ್ಗಿಯ ಸಮಯದಲ್ಲಿ ಸೀಮಿತ ಸಮಯಕ್ಕೆ ನಮ್ಮ ಜನಪದರೆಲ್ಲ ಸೇರಿ ಆಚರಿಸುವ ಸಂಪ್ರದಾಯದ ಆಚರಣೆಗಳನ್ನು ಜಾತ್ರೆ ಎಂದು ಕರೆಯುತ್ತೇವೆ.

ಸಂಸ್ಕೃತದ ಯಾತ್ರಾ ಪದದ ತದ್ಭವರೂಪವೇ ಜಾತ್ರೆ. ಕಿಟಲ್ ಕೋಶದಲ್ಲಿ 'ಜಾತ್ರೆ' ಪದಕ್ಕೆ ತೀರ್ಥಕ್ಷೇತ್ರ, ಪ್ರವಾಸ: ಯಾವುದಾದರೊಂದು ಹೆಸರಿನಲ್ಲಿ ಅಂದರೆ ಯಾವುದಾದರೊಂದು ದೇವರ ಹೆಸರಿನಲ್ಲಿ ಆಗಾಗ್ಗೆ ನಡೆಯುವ ಬೇರೆ ಬೇರೆ ಕಡೆಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಹಬ್ಬ: ತೇರು, ಮೆರವಣಿಗೆ ಎಂಬರ್ಥಗಳನ್ನು ಕೊಟ್ಟಿದೆ.

ಜಾತ್ರೆಗಳಲ್ಲಿ ದೇವರ ಮೆರವಣಿಗೆಗೆ ಆದ್ಯತೆ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಇಲ್ಲವೆ ತೇರಿನಲ್ಲಿ ಇಟ್ಟು ಎಳೆಯುವರು. ತೇರಿಗೆ ರಥ ಎಂತಲೂ ಹೆಸರು. ಪಲ್ಲಕ್ಕಿ ಹೆಗಲ ಮೇಲೆ ಹೊರುವಂತಹದು. ರಥಕ್ಕೆ ಗಾಲಿಗಳಿರುವುದರಿಂದ ಭಾರವಾಗಿದ್ದ ಅದನ್ನು ಹಗ್ಗಗಳಿಂದ ನೂರಾರು ಜನ ಸೇರಿ ಎಳೆಯುವುದು ವಾಡಿಕೆ. ಇದಕ್ಕೆ ಇದಕ್ಕಾಗಿ ರಥದ ಹಗ್ಗಗಳು ಪ್ರತ್ಯೇಕವಾಗಿಯೇ ವಿಶಿಷ್ಟ ರೀತಿಯಲ್ಲಿ ರಚನೆಗೊಂಡಿರುತ್ತವೆ. ತೇರಿಗೆ ಆಧ್ಯಾತ್ಮಿಕ ಸಂಕೇತವೂ ಬಂದಿದೆ. ತೇರು ದೇಹಕ್ಕೆ ಪ್ರತೀಕವೆಂತಲೂ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಂದ ಕೂಡಿದ ದೇಹದಂತಿರುವ ಈ ತೇರಿಗೂ ಮೂರುಭಾಗಗಳಿವೆ. ಕೆಲವು ಕಡೆ ಷಟ್‌ಸ್ಥಲಗಳ ಸಂಕೇತವಾಗಿ ಆರುಭಾಗಗಳು ಇವೆ. ಕಟ್ಟಿಗೆಯಿಂದ ಇದನ್ನು ವರುಷ ವರುಷಕ್ಕೆ ರಚಿಸುವ ವಾಡಿಕೆ ಇದೆ. ಕೆಲವು ಕಡೆಗೆ ಹಲವು ವರುಷಗಳವರೆಗೂ ಉಪಯೋಗಿಸುವರು. ಇದರಿಂದಾಗಿ ಒಮ್ಮೊಮ್ಮೆ ಜಾತ್ರೆಯ ಕಾಲದಲ್ಲಿ ಎಳೆಯುವಾಗಲೇ

ಕಟ್ಟಿಗೆ ಕೋಲಿರುವದರಿಂದ ತೇರು ಮುರಿದು ಬೀಳುವ ಸಾಧ್ಯತೆಯೂ ಇಲ್ಲದಿಲ್ಲ. ಅದಕ್ಕೆ ಜನ ಏನೇನೋ ಭಾಷ್ಯೆ ಬರೆಯುತ್ತಾರೆ. ತೇರಿನ ತುದಿಗೆ ಕಳಸ ಹೊಳೆಯುತ್ತದೆ. ಅಲ್ಲಿಂದ ಗಾಲಿಗಳ ಮಧ್ಯೆದಲ್ಲಿ ಹಲವಾರು ಚಟ್ಟಗಳಲ್ಲಿ ಸಿದ್ಧಗೊಳಿಸಿದ ರಥದಲ್ಲಿ ಕೆತ್ತನೆಯ ಕೆಲಸ ಏರುತ್ತದೆ. ಅಶ್ಲೀಲ ಚಿತ್ರಗಳನ್ನು ಕೆತ್ತಿರುತ್ತಾರೆ. ಉದಾಹರಣೆಗೆ ಹಂಪಿ ವಿರೂಪಾಕ್ಷೇಶ್ವರ ತೇರು ಇದಕ್ಕೆ ಉತ್ತಮ ನಿದರ್ಶನವಾಗಿದೆ. ಕಾಮಭಾವನೆಯನ್ನು ಕಳೆದುಕೊಂಡು ಒಳಗೆ ದೇವರ ದರ್ಶನ ಪಡೆಯಬೇಕು ಎನ್ನುವದಕ್ಕೆ ಸಂಕೇತವಾಗಿರುವಂತಿದೆ. ಇಹಲೋಕದಿಂದ ಪರಲೋಕಕ್ಕೆ ಸೇರುವ ಪ್ರತೀಕವೇ ಈ ತೇರು ಅಥವಾ ರಥ ಎನ್ನಬಹುದು.

ತೇರು ಮೊದಲೇ ಗೊತ್ತುಪಡಿಸಿದ ದಿನದಂದು ವೇಳೆಗೆ ಸರಿಯಾಗಿ ಎಳೆಲ್ಪಡುತ್ತದೆ. ದೂರ-ದೂರಲ್ಲಿದ್ದ ಭಕ್ತರು ಆದಿನ ಉಪವಾಸ ಇರುವ ಪರಿಪಾಠವಿದ್ದು ತೇರು ಎಳೆದಾದ ಮೇಲೆಯೇ ಊಟಮಾಡುತ್ತಾರೆ. ತೇರು ಎಳೆಯುವ ಮುನ್ನಾದಿನ ಸಣ್ಣ ತೇರೊಂದನ್ನು ಉಚ್ಛಾಯ ಎಳೆಯುವರು. ತೇರಿಗೆ, ಕಳಸಕ್ಕೆ ಹಣ್ಣು, ಕಾಯಿ, ಉತ್ತುತ್ತಿ ಇಲ್ಲವೆ ನಾರು ಒಗೆಯುವ ಸಂಪ್ರದಾಯವಿದೆ. ತೇರಿನ ಹಗ್ಗಕ್ಕೆ ಪುರುಷರು ಕೈಹಚ್ಚಿ ಎಳೆದು ಬರುವ ವಾಡಿಕೆಯಿದೆ. ಯಾವ ಭೇದಭಾವವಿಲ್ಲದೆ ಎಲ್ಲರೂ ಭಾಗವಹಿಸುವುದುಂಟು. ಇದು ಜನರಲ್ಲಿರುವ ಅದ್ವೈತ ಆಭಭಾವಕ್ಕೆ ಮತ್ತು ವಿಶ್ವಬಂಧುತ್ವಕ್ಕೆ ಸಾಕ್ಷಿ.

**ಜಾತ್ರೆಗಳ ವೈಶಿಷ್ಟ್ಯ**

ಯಾವುದೇ ಜಾತ್ರೆಯಿರಲಿ ಮೊದಲು ಆ ಊರ ದ್ಯಾಮವ್ವನ ಉಡಿತುಂಬುವರು. ಜಾತ್ರೆಯ ದಿನವನ್ನು ನಿರ್ಧರಿಸಿ ಡಂಗುರ ಹೊಡೆಸುವರು. ಒಂದು ವಾರದ ಮುಂಚೆಯೇ ಯಾರೂ ಕೆಲಸಕ್ಕೆ ಹೋಗದೆ ಜಾತ್ರೆಯ ಸಿದ್ಧತೆಗೆ ತೊಡಗುವರು. ತೇರಿನ ಜಾತ್ರೆಯಾಗಿದ್ದರೆ ಗಾಲಿ ಏರಿಸುವರು. ಇದುವೆ ಜಾತ್ರೆಗೆ ನಾಂದಿ ಹಾಡಿದಂತೆ. ಗಾಲಿ ಏರಿಸಿಯಾದ ಮೇಲೆ ಯಾವ ಕಾರಣದಿಂದಲೂ ಜಾತ್ರೆ ಸುಳ್ಳಾಗಲಾರದು.

ಜಾತ್ರೆಯಲ್ಲಿ ಒಂದು ಕಡೆ ಉತ್ಸವ ಮೂರ್ತಿಯ ಮೆರವಣಿಗೆ ನಡೆದು ಹೋಗುತ್ತದೆ. ಇನ್ನೊಂದೆಡೆಗೆ ಆ ದೇವರಿಗೆ ಹರಕೆ ತೀರಿಸುವ, ದಿಂಡುರಿಕೆ ಉರುಳುವ, ಬೆತ್ತಲೆ ಸೇವೆ ಸಲ್ಲಿಸುವ, ಸಿಡಿ ಆಡುವ, ಅಗ್ಗಿ ತುಳಿಯುವ, ಶಸ್ತ್ರ ಹಾಕಿಕೊಳ್ಳುವ, ವಾದ್ಯ ಓಲಗ ನುಡಿಸುವ, ಕಾಯಿ-ಕರ್ಪೂರ-ನೈವೇದ್ಯ ಅರ್ಪಿಸುವ, ಮುಡುಪು ಇಡುವ, ಹುಂಡಿಗೆ ಕಾಣಿಕೆ ಹಾಕುವ ಮೊದಲಾದ ಕಾರ್ಯಕ್ರಮಗಳು ತಿಳಿದೋ ತಿಳಿಯದೆಯೋ ಸಂಪ್ರದಾಯಕ್ಕೆ ಜೋತು ಬಿದ್ದು ಸಾಗುತ್ತಲೇ ಇರುತ್ತವೆ. ಪೂಜಾರಿಗಳಿಂದ, ಪೀಠಸ್ಥರಿಂದ ಪ್ರಸಾದ ಆಶೀರ್ವಾದ ಪಡೆದು ದಕ್ಷಿಣೆ ಇಟ್ಟು ಕೈ ಮುಗಿದು ಧನ್ಯರಾದೆವು ಎಂದು ಸಂತೋಷದಿಂದ ತಮ್ಮ ತಮ್ಮ ಮನೆಯ ಊರ ದಾರಿ ಹಿಡಿಯುವುದುಂಟು.

ಅನುಗ್ರಹ ಇಲ್ಲವೆ ವರಗಳ ಮೂಲಕ ಭಕ್ತರನ್ನು ಆಕರ್ಷಿಸುವ ಮೇಲ್ದರ್ಜೆಯ ದೇವತೆಗಳು ಮತ್ತು ರೋಗ ಕೇಡುಗಳು ಬೆದರಿಕೆ ಹಾಕಿ ಭಕ್ತರನ್ನು ಸೆಳೆಯುವ ಕ್ಷುದ್ರದೇವತೆಗಳು ಶ್ರೀ ಸಾಮಾನ್ಯರ ಜಾತ್ರೆಗಳ ಚೌಕಟ್ಟಿಗೆ ಸೇರಿಕೊಂಡಿರುತ್ತವೆ. ಶಕ್ತಿದೇವತೆಯ ಕಥೆ, ಪೌರಾಣಿಕ ಕಥೆ, ಕಟ್ಟುಕಥೆ - ಹೀಗೆ ಜನತೆಯ ನಂಬುಗೆಯ ಮೇಲೆ ಬೆಳೆದುಕೊಂಡ ಈ ಜಾತ್ರೆಗಳು ಮಾನವ ಬದುಕಿನ ಒಂದು ಅಂಗ ಎನ್ನುವ ರೀತಿಯಲ್ಲಿ ಮನುಷ್ಯನಿಗೆ

ಅಂಟಿಕೊಂಡು ಬಂದಿರುತ್ತವೆ. ಭವಿಷ್ಯದ ಈ ಮಾತುಗಳನ್ನು ಜನ ಈಗಲೂ ನಂಬುತ್ತಿರುವುದು ಒಂದು ಸೋಜಿಗದ ಸಂಗತಿಯೆನ್ನಬಹುದು. ಗದ್ದುಗೆಗೆ ಅಣಿಮಾಡುವ ಸಂಪ್ರದಾಯವೂ ಇದೆ. ಸುಳ್ಳು, ಸತ್ಯಗಳ ಒರೆಗಲ್ಲಿಗೆ ಸಾಕ್ಷಿ. ಇದು ನ್ಯಾಧೀಶರ ಆಜ್ಞೆಗಿಂತಲೂ ಇದು ನಂಬಿಗಸ್ಥವಾದುದಾಗಿದೆ.

ಜಾತ್ರೆಯ ಇತಿಹಾಸಕ್ಕೂ ದೇವಾಲಯಗಳ ಇತಿಹಾಸಕ್ಕೂ ಸಂಬಂಧವಿದೆ. ದೇವಾಲಯಗಳ ಮೂಲವಿರುವುದು ಜನಪದದಲ್ಲಿಯೇ. ಆದರ ನೆಲೆಯಿರುವುದು ಅಲ್ಲಿಯೇ. ಈ ಬಗೆಗೆ ದೇವಾಲಯಗಳ ವಿಕಾಸ ಮತ್ತು ಜಾತ್ರೆಗಳು ಬೆಳೆದು ಬಂದ ಬಗೆಯನ್ನು ಎಸ್. ಕೆ. ರಾಮಚಂದ್ರರಾವ್ ಅವರು ಅರ್ಥಪೂರ್ಣವಾದ ವಿಶ್ಲೇಷಣೆಯನ್ನು ಮಾಡಿರುತ್ತಾರೆ.

**ಜಾತ್ರೆಯ ಮಹತ್ವ**

ಜಾತ್ರೆ ಬಹುಪಯೋಗಿ ಉತ್ಸವವಾಗಿದೆ. ಜಾತ್ರೆ ಧರ್ಮವನ್ನು ಜನಪ್ರಿಯಗೊಳಿಸುತ್ತದೆ. ಭಕ್ತರನ್ನು ಒಂದೇ ದೇವರ ಒಕ್ಕಲುಗಳನ್ನು ಒತ್ತಟ್ಟಿಗೆ ತರುತ್ತದೆ. ಪೂಜೆ, ಹರಕೆ, ಕಾರಣಿಕಗಳ ಮೂಲಕ ದೈವದ ನಂಟನ್ನು ಬಿಗಿಗೊಳಿಸುತ್ತದೆ. ಎಲ್ಲ ದೇವರುಗಳು ನಮ್ಮೊಂದಿಗೆ ನಮ್ಮ ಬೆನ್ನಿಗಿದ್ದಾರೆ ಎಂಬ ಭರವಸೆಯನ್ನುಂಟುಮಾಡುತ್ತೆದೆ. ಕಾಯಿಲೆ-ಕಸಾಲೆ, ಕಷ್ಟ-ಕಾರ್ಪಣ್ಯಗಳಲ್ಲಿ ದೇವರಿಗೆ ಮುಡಿಪಿಟ್ಟು ಯಾತ್ರೆ ಜಾತ್ರೆ ಮಾಡುವ ಹರಕೆ ಹೊರುತ್ತಾರೆ. ಮನಸ್ಸಿಗೆ ನೆಮ್ಮದಿ ಸಿಗುತ್ತದೆ. ವರ್ಷಾವಧಿ ಜಾತ್ರೆಗೆ ಹೋಗಿ ಹರಕೆ ಸಂದಾಯ ಮಾಡುವುದು ನಮ್ಮ ಜನಪದರ ಕಷ್ಟಗಳಿಗೆ ಪರಿಹಾರ ಕೊಡುವ ಒಂದು ಮುಖ್ಯ ಉಪಾಯ. ಜಾತ್ರೆಯಿಂದ ಲಾಭವುಂಟು, ನಷ್ಟವೆಂಬುದು ಇಲ್ಲವೇ ಇಲ್ಲವೆಂಬುದು ಜನಪದರ ನಂಬಿಕೆ. ಊರಿನಲ್ಲಿ ಮಳೆ ಬೀಳದಿದ್ದಾಗ, ಬೆಳೆ ಹಾಳಾದಾಗ, ಬಾವಿಗಳ ನೀರು ಬತ್ತಿದಾಗ ಜನರಿಗೂ ದನಕರುಗಳಿಗೂ ಸೋಂಕುರೋಗಗಳು ಬಂದಾಗ ಜಾತ್ರೆ ನೆರೆಯಿಸುವ ರೂಢಿಯುಂಟು. ಇದರಿಂದ ಸಾರ್ವಜನಿಕ ಕ್ಷೇಮವುಂಟು ಎಂದು ಜನಪದರು ನಂಬುತ್ತಾರೆ. ಜಾತ್ರೆ ಊರ ಒಕ್ಕಟ್ಟಿನ ಸಂಕೇತ. ಗ್ರಾಮದೇವತೆಯ ಜಾತ್ರೆ ಎಲ್ಲರದು. ಇಡೀ ಊರಿಗೆ ಪ್ರಯೋಜನವುಂಟು.

**ಜಾತ್ರೆಯ ಉದ್ದೇಶ**

ಜಾತ್ರೆಯು ಸಮಷ್ಠಿ ಸಂಪತ್ತು. ಕ್ಷೇಮಾಭಿವೃದ್ಧಿಗಾಗಿ ಒಂದು ನಿಗದಿತ ಅವಧಿಯಲ್ಲಿ ಒಂದು ದೇವತೆ ಇಲ್ಲವೆ ಮಹಾಪುರುಷರ ಹೆಸರಿನಲ್ಲಿ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವ ಧಾರ್ಮಿಕ ವಿಧಿಯಾಗಿ ಇದು ರೂಡಿಯಲ್ಲಿದೆ.

ಜಾತ್ರೆಯು ಮೂಲೋದ್ದೇಶಗಳ ಸಮಷ್ಠಿಯ ಹಿತ. ಚತುರ್ವಿಧ ಪುರುಷಾರ್ಥದೆಡೆಗೆ ಸಾಮಾಜಿಕ ಮನಸ್ಸು ಅಭಿಮುಖವಾಗುವಂತೆ ಮಾಡುವ ಹವಣಿಕೆ ಜಾತ್ರೆಯಲ್ಲಿ ಹುದುಗಿದಂತಿದೆ. ಅನಾದಿ ಕಾಲದಿಂದಲೂ ಮಾನವ ಲೌಕಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಒಂದು ಬಗೆಯ ಸಾಮರಸ್ಯವಿದೆ. ಈ ಸಾಮರಸ್ಯವನ್ನು ಜಾತ್ರೆಯಲ್ಲಿ ಕಾಣಬಹುದು. ಜಾತ್ರೆಯು ಭಿನ್ನ ಗುಣ, ಸ್ವಭಾವ, ಅಭಿರುಚಿ, ಅಂತಸ್ತು, ವಯೋಮಾನಗಳ ಜನರೆಲ್ಲ ಒಂದೆಡೆ ಕಲೆಯಲು ಅವಕಾಶ ಕಲ್ಪಿಸಿ ಅವರವರ ಇಚ್ಛೆಯನ್ನು ತಣಿಸುವ ಹವಣಿಕೆಯಿಂದ ನಿರ್ಮಿಸಿದ ರಸರಂಗವಾಗಿದೆ.

ಜಾತ್ರೆಯಿಂದ ಸಾಮಾಜಿಕ ಮನಸ್ಸು ಧಾರ್ಮಿಕತೆಯ ಪನ್ನೀರಿನಲ್ಲಿ ಮಿಂದು, ಲೌಕಿಕ ಪಾರಮಾರ್ಥಿಕಗಳೆರಡರ ಸವಿಸುಖದರ್ಶನ ಪಡೆಯಲು ಅನುಕೂಲವಾಗುತ್ತದೆ. ಜಾತ್ರೆ ಸಮಾಜ ಸ್ವಾಸ್ಥ್ಯಕ್ಕಾಗಿಯೋ, ದೇವತೆಗಳ ಸಂಪ್ರೀತಿಗಾಗಿಯೇ ಫಲ, ಶಕ್ತಿಯ ಹಾರೈಕೆಗಾಗಿಯೋ, ಮಹಾತ್ಮರ ಮಹಾಕಾರ್ಯದ ನೆನಪಿಗಾಗಿಯೋ, ನಾಡರಕ್ಷಣೆಗಾಗಿ ಜೀವತೆತ್ತ ವೀರಗ್ರಾಣಿಗಳ, ಸತಿಹೋದ ಸಾಧ್ವಿಯರ ಗೌರವಾರ್ಥವಾಗಿಯೋ ಆಚರಣೆಗೊಂಡು ಆ ನೆಪದಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಸಂಘಟನೆಗೆ ತೊಡಗಿದಂತೆ ತೋರುತ್ತದೆ. ಸಮಾಜದೊಂದಿಗೆ ಒಂದಾಗಿ ಬದುಕು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಘಿಕ ಜೀವನದ ಹಿತರಕ್ಷಣೆಗಾಗಿಯೂ, ಮೂಕಪ್ರಾಣಿಗಳಿಗೆ ರೋಗರುಜಿನಗಳು ಬಾರದಂತೆ ಸಮೃದ್ಧ ಹೈನು ಸಿಗಲೆಂದೋ, ಮಳೆ ಬೆಳೆಗಳು ಸರಿಯಾಗಿ ಬರುವಂತೆ ಪ್ರಾರ್ಥಿಸುವ ಉದ್ದೇಶ ಈ ಜಾತ್ರೆಗಳದ್ದು. ಹರಕೆ ಹೊತ್ತದ್ದನ್ನು ಕಾರ್ಯರೂಪದಲ್ಲಿ ತರುವ ಆಚರಣೆಯೇ ಜಾತ್ರೆಯಾಗಿದೆ.

ಈ ಜಾತ್ರೆಗಳ ಸಂದರ್ಭದಲ್ಲಿ ದೇವಿಯ ಗುಡಿಯನ್ನು ಸ್ವಚ್ಛಗೊಳಿಸಿ ಬಣ್ಣದಿಂದ ಅಲಂಕರಿಸಿ, ದೇವಿಗೆ ಹೊಸಬಟ್ಟೆ ಉಡಿಸಿ, ಆಭರಣ ಇಡಿಸಿ, ತರಹ ತರಹದ ನೈವೇದ್ಯ ಅರ್ಪಿಸಿ ಸಂತೋಷಪಡುತ್ತಾರೆ. ವೈಯಕ್ತಿಕ ಹರಕೆಗಳ ಜೊತೆಗೆ ಸಾಮೂಹಿಕ ಹರಕೆಗಳನ್ನು ತೀರಿಸುವ ಸಂಪ್ರದಾಯವು ಉಂಟು. ಈ ಜಾತ್ರೆಗಳ ಕಾಲದಲ್ಲಿ ಖಾಂಡ, ಪ್ರಸ್ಥದಂತಹ ಅನ್ನದಾಸೋಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ದೇವರ ಪ್ರೀತ್ಯರ್ಥವಾಗಿ ಮೂಕ ಪ್ರಾಣಿಗಳನ್ನು ಬಲಿಕೊಡುವ ದುಷ್ಟ ಸಂಪ್ರದಾಯವೂ ನಡೆದುಕೊಂಡು ಬಂದಿರುತ್ತವೆ.

ಜಾತ್ರೆಯ ಮೂಲೋದ್ದೇಶ ಸಮಷ್ಟಿಯ ಹಿತ. ಅನಾದಿಕಾಲದಿಂದಲೂ ಮಾನವನ ಲೌಕಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಒಂದು ಬಗೆಯ ಸಾಮರಸ್ಯವಿದೆ. ಈ ಬಗೆಯ ಸಾಮರಸ್ಯವನ್ನು ಜಾತ್ರೆಯಲ್ಲಿ ಕಾಣಬಹುದು.

**ಜಾತ್ರೆಯ ಬಗೆಗಿರುವ ಗಾದೆಮಾತುಗಳು**

೧. ಜನ ಮರುಳೋ ಜಾತ್ರೆ ಮರುಳೋ

೨. ತೇರ ಆದ್ಮೇಲೆ ಜಾತ್ರೆಗೆ ಹೋಗ್ಬೇಡ, ಧಾರೆ ಬಿದ್ಮೇಲೆ ಮದುವೆಗೆ ಹೋಗ್ಬೇಡ

೩. ಜಾತ್ರೇಲಿ ಜನ ಹೆಚ್ಚು ಜಗಳಗಂಟಿಗೆ ಜಂಭ ಹೆಚ್ಚು

ಜಾತ್ರೆಯ ಬಗೆಗಿರುವ ಒಡಪುಗಳು

೧. ಜಾತ್ರೆಯಲ್ಲಿ ಗೋಕರ್ಣ ಮೇಲು

ರಾತ್ರಿಯಲ್ಲಿ ಶಿವರಾತ್ರಿ ಮೇಲು

ನಾಕ ಮಂದ್ಯಾಗ ನನ್ನ..... ಮೇಲು

೨. ಸಟಪಟೆ ಮೋಟಾರ

ಪಾರಿವಾಳ ಅಂಗಿ

ಪಾತರಗಿತ್ತಿ ಕರಕೊಂಡ ಜಾತೆರಿಗ್ಹೋಗತಾನ......

೩. ಕಡೆತೋಡೆ ಕೈಯ್ಯಾಗೆ | ಮಲ್ ಅಂಗಿ ಮೈಯಾಗ

ಹಂಪಿ ಜಾತ್ರೆಗ್ಹೋಗಿ ತಂಪತ್ತಿನಾಗೆ ಬರತಾನ

ಹುಲಿಗೆಮ್ಮ ದೇವಿ ಜಾತ್ರೆಯು ಅಗಿ ಹುಣ್ಣಿಮೆಗೆ ನೆರವೇರುವ ಒಂದು ಜಾತ್ರೆಯಾಗಿದೆ. ಸಾಮಾನ್ಯವಾಗಿ ಹುಲಿಗೆಮ್ಮನ ಜಾತ್ರೆಯಲ್ಲಿ ಎಲ್ಲಾ ಜನಾಂಗದವರು ಬರುವ ಹಾಗಿಲ್ಲ. ಯಾಕೆಂದರೆ ಹುಲಿಗೆಮ್ಮ ತನ್ನ ಅಣ್ಣನಾದ ಮೈಲಾರಲಿಂಗನ ಭಂಡಾರ ಕದ್ದು ಬಂದಿರುವುದರಿಂದ ಮೈಲಾರಲಿಂಗನ ಭಕ್ತರಾದ ಕುರುಬರು ಈಕೆಗೆ ಅಂದರೆ ಈಕೆಯ ಜಾತ್ರೆಗೆ ಬರುವ ಹಾಗಿಲ್ಲ. ಕುರುಬರಲ್ಲಿ ಅದರಲ್ಲೂ ಕಳ್ಳ ಒಕ್ಕಲದವರು ಎಂದಿಗೂ ಈ ದೇವಿ ಜಾತ್ರೆಗೆ ಬರುವುದಿಲ್ಲ.

ಇಲ್ಲಿ ಹುಲಿಗೆಮ್ಮ ದೇವಿ ಜಾತ್ರೆ ಕಂಕಣ ಕಟ್ಟಿದ ಒಂಭತ್ತು ದಿನಕ್ಕೆ ನೆರವೇರುವ ಜಾತ್ರೆಯಾಗಿದೆ. ಹುಲಿಗೆಮ್ಮನ ಕಂಕಣ ಕಟ್ಟಿದ ಮೇಲೆ ಬೇರೆ ಯಾರೂ ಕಂಕಣ ಕಟ್ಟುವ ಹಾಗಿಲ್ಲ ಎಂಬ ಒಂದು ನಮ್ಮ ಜನಪದರ ನಂಬಿಕೆಯಾಗಿದೆ. ಯಾಕೆಂದರೆ ದೇವಿಯೇ ಕಂಕಣ ಕಟ್ಟಿದ ಮೇಲೆ ನರಮನುಷ್ಯರಾದ ನಾವು ಕಂಕಣ ಕಟ್ಟಬಾರದು ಎಂಬ ನಂಬಿಕೆ ಇದೆ. ಆ ಸಮಯದಲ್ಲಿ ಯಾವ ಮದುವೆಗಳೂ ನೆರವೇರುವುದಿಲ್ಲ. ಹುಲಿಗೆಮ್ಮ ಜಾತ್ರೆ ಅತ್ಯಂತ ಸಂಭ್ರಮ ಸಡಗರದಿಂದ ನೆರವೇರುವ ಜಾತ್ರೆಯಾಗಿದೆ. ಈಕೆ ಮಾಯಕಾರತಿ ಎಂದು ಭಂಡಾರದ ಮಹಿಮೆಯನ್ನು ಕೊಂಡಾಡುತ್ತಾರೆ. ಭಂಡಾರದಿಂದಲೇ ಹಲವು ಜನ ಭಕ್ತರನ್ನು ಈಕೆ ಸೆಳೆದು ಕೊಂಡಿದ್ದಾಳೆ ಎಂದು ಬಂದವರೆಲ್ಲ ಹಣೆಗೆ ಭಂಡಾರವನ್ನು ಹಚ್ಚುತ್ತಾರೆ. ಭಂಡಾರ ಬಂಗಾರಕ್ಕೆ ಸಮ ಎಂದು ಮನೆಗೆ ಹೋಗುವಾಗ ಭಂಡಾರ ಮತ್ತು ಕುಂಕುಮವನ್ನು ತೆಗೆದುಕೊಂಡು ಹೋಗುತ್ತಾರೆ.

ಈ ದೇವಿಯ ಜಾತ್ರೆಯು ಮಧ್ಯರಾತ್ರಿಯ ನಡುವೆ ನಡೆಯುವಂತ ಜಾತ್ರೆಯಾಗಿದೆ. ಈ ದೇವಿಯ ಜಾತ್ರೆಯಲ್ಲಿ ಹೆಚ್ಚಾಗಿ 'ಬಾರಿಕೇರಿ' ಜನಂಗಾದವರೇ ಇರುತ್ತಾರೆ. ನಾಗಜೋಗಿ, ಬಸವಜೋಗಿಯರು ಬಾರಿಕೇರಿ ಜನಾಂಗದವರು ನಿಮ್ಮಿಂದಲೇ ನನ್ನ ಪವಾಡ ನೆರವೇರಲಿ, ನಿಮ್ಮಿಂದಲೇ ನನ್ನ ಪ್ರಚಾರ ಜಗತ್ತೆಲ್ಲ ಹರಡಲಿ ಎಂದು ದೇವಿ ಈ ಜನಾಂಗಕ್ಕೆ ಹರಸಿರುವುದಾಗಿ ನಂಬಿಕೆಯಿದೆ. ಹಾಗಾಗಿ ಈ ಜಾತ್ರೆಯಲ್ಲಿ ಗಂಗಾಮತಸ್ಥರು ಅತ್ಯಂತ ಶ್ರದ್ಧಾಭಕ್ತಿಗಳಿಂದ ಪಾಲ್ಗೊಳ್ಳುತ್ತಾರೆ.

ಅಕ್ಕಿಪುಡಿ, ಪಾಯಸ ಪಡುಗ, ಬಾಳೆದಂಡಿಗಿ ಎಂದು ೩ ದಿನ ಜಾತ್ರೆ ನೆರವೇರುತ್ತದೆ. ಹೆಚ್ಚಾಗಿ ಪಾಯಸ ಪಡುಗ ಎಲ್ಲರೂ ನೋಡುವಂತದ್ದಾಗಿದೆ. ಪಾಯಸದಲ್ಲಿ ಕೈಯಿಟ್ಟು ತಿರುವಿ ಅಂದರೆ ಘಳ ಪಳ ಕುದಿಯುವ ಪಡುಗದಲ್ಲಿ ಕೈಯಿಟ್ಟು ತಿರುವಿ ೩ ಬಾರಿ ಅದು ಬೆಂದಿದೆಯೋ ಇಲ್ಲವೋ ಎಂದು ತೋರಿಸುತ್ತಾರೆ. ಯಾವ ಕಡೆ ಯಾವ ಭಾಗಕ್ಕೆ ಬೇಳೆ ಬೆಂದಿಲ್ಲವೋ ಆ ಕಡೆ ಮಳೆ ಬೆಳೆ ಚೆನ್ನಾಗಿ ಆಗುವುದಿಲ್ಲವೆಂಬ ನಂಬಿಕೆ ಇಲ್ಲಿನದಾಗಿದೆ. ಹುಲಿಗೆಮ್ಮನ ಜಾತ್ರೆಯಲ್ಲಿನ ಕೆಲವು ಆಚರಣೆಗಳು ಸ್ವರೂಪದಲ್ಲಿ ಉಗ್ರ ಆಚರಣೆಗಳಾಗಿವೆ. ಇನ್ನು ಪಡುಗ

ಪಾಯಸದ ನಂತರ ಕೆಂಡ ತುಳಿಯುವುದು ಇರುತ್ತದೆ. ಕೆಂಡದ ಮೇಲೆ ಎಲ್ಲರೂ ಅಲ್ಲಿರುವ ಆಧಾರವನ್ನು ಹುಲಿಗೆಮ್ಮನ ಭಂಡಾರವೆಂದು ತಿಳಿದು ಅದನ್ನು ತೆಗೆದುಕೊಂಡು ಹೋಗಿ ತಮ್ಮ ಹೊಲ, ಗದ್ದೆ, ಮನೆಗಳಲ್ಲಿ ಚೆಲ್ಲುತ್ತಾರೆ. ಇದರಿಂದ ಅವರ ಮನೆ ಸಮೃದ್ಧಿಯಾಗುತ್ತದೆನ್ನುವ ನಂಬಿಕೆ ಇದೆ.

ಕೆಲವರು ಹುಲಿಗೆಮ್ಮ ದೇವಿಯ ಜಾತ್ರೆಯನ್ನು ನೋಡಲಾಗುವುದಿಲ್ಲವೆಂದು ಜಾತ್ರೆಯಾಗಿ ಒಂದು ತಿಂಗಳ ಮೇಲೆ ಹೋಗುತ್ತಾರೆ. ತಾಯಿ ಹುಲಿಗೆಮ್ಮ ದೇವಿಗೆ ಹೊರರಾಜ್ಯಗಳಿಂದಲೂ ಭಕ್ತರು ಬಂದು ದೇವಿಗೆ ಹಣ್ಣು ಕಾಯಿ ಮಾಡಿಸಿಕೊಂಡು ಹೋಗುತ್ತಾರೆ. ಹುಲಿಗೆಮ್ಮ ದೇವಿಯ ಜಾತ್ರೆಯಲ್ಲಿ ಹಲವು ಜನಾಂಗಗಳು ನಿರ್ವಹಿಸುವ ಕೆಲಸಕಾರ್ಯಗಳಿಂದಾಗಿ ಅವರ ಭಾಗವಹಿಸುವಿಕೆಯನ್ನು ನೋಡಬಹುದು. ಕೆಳಜಾತಿಯವರಿಗೆ ಕಡಿಮೆ ದರ್ಜೆಯ ಕೆಲಸಗಳನ್ನು ಮತ್ತು ಮೇಲ್ಜಾತಿಯವರಿಗೆ ಪೌರೋಹಿತ್ಯ ಪೂಜೆ ಇತ್ಯಾದಿ ಜವಾಬ್ದಾರಿ ವಹಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಪೌರೋಹಿತ್ಯದಲ್ಲಿ ಬ್ರಾಹ್ಮಣರ ಪ್ರಭಾವವಿದ್ದಾಗ್ಯೂ ಪವಾಡಪ್ರದರ್ಶನಗಳಲ್ಲಿ ಬಾರಿಕೇರ್ ಜನಾಂಗದವರದೇ ಪ್ರಧಾನ ಪಾತ್ರವಾಗಿದೆ. ಅವರ ಮನೆಯಿಂದಲೇ ದೇವಿಯ ಶುಭಕಾರ್ಯದ ಪ್ರತಿಯೊಂದು ಆಚರಣೆಗಳು ಆರಂಭವಾಗುವುದು. ಅಲ್ಲಿಂದಲೇ ದೇವಿಗೆ ಸಂಬಂಧಪಟ್ಟ ಆಚರಣಾತ್ಮಕ ವಿಧಿಗಳು ಪ್ರಾರಂಭವಾಗುವುದು. ಈ ಅಂಶವು ಮೂಲತಃ ಈ ದೇವಿಯ ಪೌರೋಹಿತ್ಯ ಕೆಳಜಾತಿಗಳಿಗೆ ಸೇರಿದ್ದಾಗಿದ್ದು ಕ್ರಮೇಣ ಬ್ರಾಹ್ಮಣರು ಇದನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡಿದ್ದನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆ ಪೂರಕವಾಗಿ ಈಗಲೂ ಬಾರ್‌ಕೀರ್ ಜನಾಂಗದ ಮನೆಯೊಂದರ ಗದ್ದುಗೆಯ ಮೇಲಿರುವ ದೇವಿ ಹುಲಿಗೆಮ್ಮನನ್ನು ಪ್ರಾರ್ಥಿಸಿದರೆ ಮಾತ್ರ ಇಷ್ಟಾರ್ಥಗಳು ನೆರವೇರುತ್ತವೆ ಎಂಬ ಪ್ರತೀತಿಯು ಸಹ ಇದನ್ನೇ ಸ್ಪಷ್ಟಪಡಿಸುತ್ತದೆ.

**ಹುಲಿಗೆಮ್ಮನ ರಥೋತ್ಸವ ಮತ್ತು ಜಾತ್ರೆ**

'ಯಾನೇನ ತ್ರಾಯತ್ರ ಇತಿ ಯಾತ್ರಾ' ಅಂದರೆ ಪುಣ್ಯಕ್ಷೇತ್ರ ದರ್ಶನಕ್ಕೆ ಹೋಗುವವರಿಗೆ ಅದು ರಕ್ಷೆಯ ಯಾತ್ರೆಯಾಗಿರುತ್ತದೆ. 'ಯಾತ್ರಾ' ಶಬ್ದದ ತದ್ಭವ ರೂಪವೇ 'ಜಾತ್ರೆ'ಯಾಗಿದೆ. ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವ ದೇವತೆಯನ್ನು (ಗ್ರಾಮೀಣ ಹಾಗೂ ಶಿಷ್ಟ) ಭಯ ಭಕ್ತಿಯಿಂದ ಸಾಮೂಹಿಕವಾಗಿ ಪೂಜಿಸಿ, ಪ್ರಾರ್ಥಿಸುವ, ಸಂಭ್ರಮದ ಜನಸಮೂಹವೇ ಜಾತ್ರೆ.

ಹಾಗೇನೆ ಇಲ್ಲಿ ಕೂಡ ಹುಲಿಗೆಮ್ಮನ ಜಾತ್ರೆಯು ಮೇ ಕೊನೆಯ ಜೂನ್ ಮೊದಲವಾರದಲ್ಲಿ ನಡೆಯುವ ಜಾತ್ರೆಯಾಗಿದೆ. ಈ ಹುಲಿಗೆಮ್ಮ ದೇವಿಯ ಜಾತ್ರೆಯ ಅಂಗವಾಗಿ ಕೆಲವು ಕಾರ್ಯಕ್ರಮಗಳು ಜರುಗುತ್ತವೆ. ಈ ಜಾತ್ರೆಯಲ್ಲಿ ಕೆಲವು ಕಾರ್ಯಕ್ರಮಗಳಲ್ಲಿ ಹಲವು ಆಚರಣೆಗಳು ನಡೆಯುತ್ತವೆ. ಧಾರ್ಮಿಕ ಪಾವಿತ್ರ್ಯದ ಜೊತೆಗೆ ಯಾವುದೋ ಅತಿಮಾನುಷ ಶಕ್ತಿಗಳ ಭಯವೂ ಮಿಗಿಲಾದುದೇ ಆದುದರಿಂದ ಆಚರಣೆಗಳನ್ನು ಇಲ್ಲಿ ಅತ್ಯಂತ ಭಯ, ಭಕ್ತಿ ಮತ್ತು ಅಷ್ಟೇ ಶ್ರದ್ಧೆಯಿಂದ ಮಾಡಲಾಗುತ್ತದೆ. ಈ ಆಚರಣೆಗಳಲ್ಲಿ ಎಲ್ಲಿ ಸಣ್ಣ ತಪ್ಪಾಗುವ ಹಾಗಿಲ್ಲ. ಒಂದು ಸಣ್ಣ ತಪ್ಪಾದರೂ ಅದು ಅನರ್ಥಕ್ಕೀಡುಮಾಡೀತೆಂಬ ಅಂಜಿಕೆ ಪ್ರತಿಯೊಂದು ಆಚರಣೆಯ

ಓನ್ನೆಲೆಯಲ್ಲಿ ಇರವುದನ್ನು ಕಾಣುತ್ತೇವೆ. ಉಪವಾಸವಿರಬಹುದು, ಮೀಸಲು ವಸ್ತುಗಳನ್ನು ತೆಗೆದಿಡುವುದು, ಹಿಂದಿನಿಂದ ನಡೆದು ಬಂದ ಪದ್ಧತಿಯಲ್ಲಿ ಸ್ವಲ್ಪವೂ ಲೋಪ ಬರದ ಹಾಗೆ ಎಚ್ಚರವಹಿಸುತ್ತಾರೆ. ಇಲ್ಲಿ ಹುಲಿಗೆಮ್ಮ ದೇವಿಯ ಜಾತ್ರೆಯಲ್ಲಿ ಆಚರಣೆಗಳು ಕೆಲವು ನಿರ್ದಿಷ್ಟ ಸಮುದಾಯಗಳಿಗೆ ಮಾತ್ರ ಸೀಮಿತವಾಗಿರುತ್ತವೆ. ಅಂದರೆ ಇಲ್ಲಿನ ಆಚರಣೆಗಳನ್ನು ಕಬ್ಬೇರು ಬಾರ್‌ಕೀರ್ ಜನಾಂಗದವರು ಮಾತ್ರ ನೆರವೇರಿಸುತ್ತಾರೆ. ಇವರಿಂದಲೇ ಪವಾಡಗಳನ್ನು ತೋರಿಸಲಾಗುತ್ತದೆ. ಹಿಂದೆ ಹುಲಿಗೆಮ್ಮ ದೇವಿ ಈ ಜನಾಂಗದವರಿಗೆ ನಿಮ್ಮಿಂದಲೇ ನನ್ನ ಕೀರ್ತಿ ಎಲ್ಲೆಡೆಗೂ ಹಬ್ಬಲಿ ಎಂದು ಹೇಳಿ ಹೋಗಿರುವಳೆಂಬ ನಂಬಿಕೆಯಿದೆ. ಆದ್ದರಿಂದ ಇಲ್ಲಿನ ಕೆಲವು ವಿಧಿಗಳು ಸಂಬಂಧ ಪಟ್ಟ ವ್ಯಕ್ತಿ ಇಲ್ಲವೆ ಸಮುದಾಯಗಳಿಂದಲೇ ಕ್ರಿಯಾರೂಪ ಧರಿಸಬೇಕಾಗಿರುವುದನ್ನು ಕಾಣಬಹುದು.

ಆಚರಣೆಯ ಸಂದರ್ಭದಲ್ಲಿ ಕತ್ತಿ, ಭಲ್ಲೆ, ಬೆತ್ತ, ತ್ರಿಶೂಲ ಮುಂತಾದ ವಸ್ತುಗಳಿರುತ್ತವೆ. ಇವುಗಳನ್ನು ಆಚರಣೆಯ ವಸ್ತುಗಳೆನ್ನುವುದಕ್ಕಿಂತ ಆಚರಣೆಯ ಸಾಧನಗಳೆನ್ನಬಹುದು. ಸಾಮಾನ್ಯವಾಗಿ ಆಚರಣೆಯಲ್ಲಿ ನಾವು ಮೂರು ಮಜಲುಗಳನ್ನು ಕಾಣಬಹುದು. ೧. ಪ್ರಾರ್ಥನೆ, ೨. ಅರ್ಪಣೆ, ೩. ದೈಹಿಕ ಸಂಜ್ಞೆಗಳು ಮತ್ತು ಇತರ ಕ್ರಿಯೆಗಳೆಂದು ಅವುಗಳನ್ನು ಹೆಸರಿಸಬಹುದು.

ಹುಲಿಗೆಮ್ಮ ದೇವಿಯ ಜಾತ್ರೆಯು ೯ ದಿನಗಳವರೆಗೆ ನಡೆಯುವ ಜಾತ್ರೆಯಾಗಿದೆ. ಅಗಿ ಹುಣ್ಣಿಮೆಗೆ ಹುಲಿಗೆಮ್ಮನಿಗೆ ಕಂಕಣ ಕಟ್ಟುತ್ತಾರೆಂದು ಕೆಲವರ ಅಭಿಪ್ರಾಯ. ಆದರೆ ಇಲ್ಲಿ ಅಗಿ ಹುಣ್ಣಿಮೆ ಆಗಿ ಮರುದಿನ ಬೆಳಿಗ್ಗೆ ಹುಲಿಗೆಮ್ಮ ದೇವಸ್ಥಾನದ ಮುಂದೆ ಹೋಮ ಮಾಡಿ ಬಾಳೆದಂಡಿಗಿ ಮತ್ತು ಪಾಯಸದ ಪೂಜಾರರಿಗೆ ಕಂಕಣವನ್ನು ಕಟ್ಟುತ್ತಾರೆ. ದೇವಿಗೆ ಕಂಕಣಾಧಾರಣ ಮಾಡಿದ ಮೇಲೆ ಊರಿನಲ್ಲಿ ಅಥವಾ ಹೊಸಪೇಟೆ ಕ್ಷೇತ್ರದಲ್ಲಿ ಯಾವ ಮದುವೆಗಳಾಗಬಾರದೆಂಬ ಪ್ರತೀತಿ ಇದೆ. ಒಂದು ವೇಳೆ ವಿವಾಹ ಕಾರ್ಯಗಳು ನಡೆಯುವುದಿದ್ದರೆ ಕಂಕಣಕಟ್ಟುವುದರೊಳಗೆ ನಡೆಯಬೇಕು. ಕಂಕಣ ಎಂದರೆ, ಅರಿಶಿಣ ಕೊಂಬು, ಎಲೆಗೆ ದಾರ ಕಟ್ಟಿ ಕೈಗೆ ಕಟ್ಟುವುದಾಗಿದೆ.

ಕಬ್ಬೇರು ಜನಾಂಗದ ಪೂಜಾರ ಮನೆತನದವರಿಗೆ ಕಂಕಣ ಕಟ್ಟುವಾಗ ನೈವೇದ್ಯ ಹಾಕುತ್ತಾರೆ. ಕಂಕಣಧಾರಣ ದಿನ ೧೬ ಎಡೆ ಹಾಕಿ ನೈವೇದ್ಯ ಬಡಿಸುತ್ತಾರೆ. ನಾಗಜೋಗಿ, ಬಸವ ಜೋಗಿಯರ ಹೆಸರಿನಲ್ಲಿ ನೈವೇದ್ಯ ಹಾಕುತ್ತಾರೆ. ನಂತರ ಹುಲಿಗೆಮ್ಮನಿಗೂ ನೈವೇದ್ಯ ಹಾಕಲಾಗುತ್ತದೆ. ೫ ಸೇರಿನ ಅಕ್ಕಿ ಅನ್ನ ಹಾಗೂ ೬ ಹೋಳಿಗೆಗಳನ್ನು ನೈವೇದ್ಯಕ್ಕೆ ತಯಾರು ಮಾಡಲಾಗುತ್ತದೆ. ಹುಲಿಗೆಮ್ಮನಿಗೆ ೨೫ ಹೋಳಿಗೆ ಎಡೆ ಹಾಕುತ್ತಾರೆ. ನಾಗಜೋಗಿ, ಬಸವಜೋಗಿಯರಿಗೆ ೧೬ ಹೋಳಿಗೆಗಳನ್ನು ಎಡೆ ಮಾಡಿ ಹಾಕುತ್ತಾರೆ. ಹುಲಿಗೆಮ್ಮ ದೇವಿಗೆ ಮಾಡಿದ ನೈವೇದ್ಯವನ್ನು ಬಾಳಿದಂಡಿಗಿ, ಪಾಯಸದ, ದೇವರಮನಿ, ಯಲಿಶೇಟಿ, ಅಮ್ಮನವರ ಪೂಜಾರರು ತೆಗೆದುಕೊಂಡು ಹೋಗುತ್ತಾರೆ. ಅಲ್ಲದೆ ನಾಗಜೋಗಿ ಬಸವ ಜೋಗಿಗೆ ಹಾಕಿದ ೫ ಪ್ರಸಾದವನ್ನು ಸಹ ಇವರು ತೆಗೆದುಕೊಂಡು ಹೋಗುತ್ತಾರೆ. ಉಳಿದ ೧೧ ಹೋಳಿಗೆಗಳನ್ನು ಅಂದರೆ ನೈವೇದ್ಯವನ್ನು ಭಜಂತ್ರಿಯವರು, ಅಗಸರು, ಸೇವಕರು, ಕೊಂಡದವರು, ಕಟ್ಟಿಯವರು ತೆಗೆದುಕೊಂಡು ಹೋಗುತ್ತಾರೆ.

### ಪಲ್ಲಕ್ಕಿ ಸೇವೆ, ತೊಟ್ಟಿಲ ಸೇವೆ

ಅಗಿ ಹುಣ್ಣಿಮೆ ಆಗಿ ಎರಡನೇ ದಿನಕ್ಕೆ ಬೆಳಿಗ್ಗೆ ಮತ್ತು ರಾತ್ರಿ ಹುಲಿಗೆಮ್ಮನ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ತೆಗೆದುಕೊಂಡು ಮುದ್ದಮ್ಮನ ಕಟ್ಟೆಯವರೆಗೆ ಹೋಗಿ ಅಲ್ಲಿ ಇರುವ ದೊಡ್ಡ ಆಲದ ಮರಕ್ಕೆ ಪೂಜೆ ಸಲ್ಲಿಸಲಾಗುತ್ತದೆ (ಇಲ್ಲಿ ಮುದ್ದಮ್ಮ ಎಂದರೆ ಹುಲಿಗೆಮ್ಮನ ತಾಯಿ ಎಂದರ್ಥ). ಇದಾದ ನಂತರ ಮತ್ತೆ ಹುಲಿಗೆಮ್ಮ ದೇವಸ್ಥಾನದಲ್ಲಿ ತೊಟ್ಟಿಲ ಸೇವೆ ನಡೆಯುತ್ತದೆ.

ಈ ಆಚರಣೆಯ ಹಿಂದೆ ಜಾತ್ರೆಯಾಗುವ ತನಕ ಹುಲಿಗೆಮ್ಮ ತನ್ನ ತಾಯಿಯನ್ನು ನೆನೆಯುವುದು ಮತ್ತು ನಮನಗಳನ್ನು ಸಲ್ಲಿಸುವ ಆಶಯವಿದೆ.

### ರಥೋತ್ಸವ

ಅಗಿ ಹುಣ್ಣಿಮೆ ಆಗಿ ೭ನೇ ದಿನಕ್ಕೆ ರಥದಲ್ಲಿ ಹುಲಿಗೆಮ್ಮನ ಉತ್ಸವ ಮೂರ್ತಿಯನ್ನು ಇರಿಸಿ ಮುದ್ದಮ್ಮನ ಗುಡಿಯವರೆಗೆ ಹೋಗಿ ಬರುತ್ತಾರೆ. ಇದನ್ನು ಬೋಳುಬಚ್ಚಿ ರಥ ಎಂದು ಕರೆಯುತ್ತಾರೆ. ಕೆಲವರ ಅಭಿಪ್ರಾಯದಲ್ಲಿ ಬೋಳುಬಚ್ಚಿ ಎಂದರೆ ಯಾವುದೇ ಅಲಂಕಾರವಿಲ್ಲದ ರಥ ಎನ್ನುತ್ತಾರೆ. ತಾಯಿ ಮುದ್ದಮ್ಮನ ಪೂಜೆ ನಡೆದ ನಂತರ ಮತ್ತೆ ಹುಲಿಗೆಮ್ಮನ ದೇವಸ್ಥಾನದಲ್ಲಿ ತೊಟ್ಟಿಲ ಸೇವೆ ನಡೆಯುತ್ತದೆ. ಈ ಮೇಲೆಯೇ ಸೂಚಿಸಿರುವಂತೆ ಜಾತ್ರೆಯಾಗುವ ತನಕ ಹುಲಿಗೆಮ್ಮ ತನ್ನ ತಾಯಿ ಮುದ್ದಮ್ಮನನ್ನು ನೆನೆಯುತ್ತಾಳೆ ಮತ್ತು ಅವಳನ್ನು ನಮಸ್ಕರಿಸದೇ ಯಾವ ಕಾರ್ಯಕ್ರಮಗಳೂ ನಡೆಯುವುದಿಲ್ಲ ಎಂಬುದು ಜನಪದರ ನಂಬಿಕೆಯಾಗಿದೆ. ಮುದ್ದಮ್ಮ ಹಲವಾರು ಸಂದರ್ಭಗಳಲ್ಲಿ ಹುಲಿಗೆಮ್ಮನನ್ನು ಶಪಿಸಿರುತ್ತಾಳಂತೆ. ಆದರೂ ಅವಳಿಗೆ ತನ್ನ ತಾಯಿಯ ಮೇಲಿನ ಭಕ್ತಿ, ಪ್ರೀತಿ ಕಡಿಮೆಯಾಗಿರುವುದಿಲ್ಲ. ಸಾಮಾಜಿಕ ಜೀವನದಲ್ಲಿಯೂ ಕೂಡ ತಾಯಿ ಮಗಳ ಸಂಬಂಧ ಈ ಬಗೆಯದ್ದೇ ಆಗಿರುವುದನ್ನು ಗಮನಿಸಬಹುದು.

### ಅಕ್ಕಿಪಡಿ ರಥೋತ್ಸವ

ಹಿಂದಿನ ಕಾಲದಲ್ಲಿ ರೈತರು ತಾವು ಬೆಳದ ಫಸಲನ್ನು ಕಟಾವು ಮಾಡಿದನಂತರ ಅದಲ್ಲೂ ಭತ್ತವನ್ನು ಕಟಾವು ಮಾಡಿದ ನಂತರ ಬಂದ ಹೊಸ ಧಾನ್ಯದಿಂದ ಪಾಯಸ ಮಾಡುತ್ತಿದ್ದರಂತೆ. ಆದರೆ ಈ ಭಾಗದಲ್ಲಿ ಇದರ ಸಂಕೇತವಾಗಿ ರೈತರು ಅಕ್ಕಿಯನ್ನು ಹುಲಿಗೆಮ್ಮನಿಗೆ ಅರ್ಪಿಸುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಹುಲಿಗೆಮ್ಮ ದೇವಿಯ ರಥೋತ್ಸವದಲ್ಲಿ ಒಂದು ಭಾಗವಾಗಿರುವ ಈ ಆಚರಣೆಯ ವಿವರ ಹೀಗಿದೆ. ಅಕ್ಕಿಪಡಿ ಅಂದರೆ ಪಾಯಸಕ್ಕೆ ಅಕ್ಕಿಯನ್ನು ಅಳೆಯುವುದು ಎಂದರ್ಥ. ಇದನ್ನು ಭಕ್ತಿ ಮತ್ತು ಮನೋರಂಜನೆಯ ಉದ್ದೇಶದಿಂದ ವೀಕ್ಷಿಸಲು ಎಲ್ಲಿಂದಲೋ ಜನ ಬಂದು ನೆರೆಯುತ್ತಾರೆ.

ಅಗಿ ಹುಣ್ಣಿಮೆ ಆದ ೯ನೇ ದಿನಕ್ಕೆ ಕಮಲಾಪುರದಿಂದ ಬಾಳೆದಂಡೆಯನ್ನು ತರುತ್ತಾರೆ. ಇವರು ಸಾಮಾನ್ಯವಾಗಿ ಬಾಳೆದಿಂಡನ್ನು ತಿರುವವರು ಮೇಟಿಯವರು ಮತ್ತು ಜೋಗಿನವರು. ಬಾಳೆ ಸುಳಿ ದಿಂಡನ್ನು

ಹುಲಿಗೆಮ್ಮ ದೇವಿ ಗುಡಿಯ ಮುಂದೆ ಇಡುತ್ತಾರೆ. ನದಿಯ ಪೂಜೆ ಮಾಡಿಕೊಂಡು ಕಾಯಿ, ಕರ್ಪೂರ ಮಾಡಿಕೊಂಡು ಬರುತ್ತಾರೆ. ಆ ಮೇಲೆ ರಾತ್ರಿ ೮ ಗಂಟೆ ಸುಮಾರಿಗೆ ಪೂಜಾರಿಗಳು ಬಂದ ನಂತರ ಕಾರ್ಯಕ್ರಮ ಶುರುವಾಗುತ್ತದೆ. ಅಮ್ಮನವರ ಮನೆತನದವರು ಬಾಳೆದಂಡಿಗಿಗೆ ಪೂಜೆ ಮಾಡುತ್ತಾರೆ. ಅಮ್ಮನವರ ಮನೆತನದವರೆಂದರೆ ಹುಲಿಗೆಮ್ಮನ ಗದ್ದುಗೆಯ ರೀತಿಯದ್ದೇ ಮತ್ತೊಂದು ಗದ್ದುಗೆ ಇವರ ಮನೆಯಲ್ಲಿರುತ್ತದೆ. ವಂಶಪಾರಂಪರ್ಯವಾಗಿ ಹುಲಿಗೆಮ್ಮನ ಆಚರಣೆಗಳಿಗೆಲ್ಲಾ ನಾಂದಿಯಾಡುವುದು ಈ ವಂಶಸ್ಥರ ಮನೆಯಿಂದಲೇ ಆಗಿದೆ. ಈ ಭಾಗದ ಸುತ್ತಮುತ್ತಲಿನ ಜನಪದರು ಈಗಿರುವ ಹುಲಿಗೆಮ್ಮ ದೇವಸ್ಥಾನದಲ್ಲಿರುವ ಹುಲಿಗೆಮ್ಮ ಮೂರ್ತಿಗೆ ಕೊಡುವ ಮಹತ್ವಕ್ಕಿಂತಲೂ ಅಧಿಕ ಮಹತ್ವವನ್ನು ಈ ಗದ್ದುಗೆಗೆ ನೀಡುತ್ತಾರೆ. ಅತಿಮಾನುಷ ಶಕ್ತಿ ಮತ್ತು ಮಹತ್ತನ್ನು ಅಮ್ಮನವರ ಮನೆತನದವರಲ್ಲಿರುವ ಹುಲಿಗೆಮ್ಮ ದೇವಿ ಗದ್ದುಗೆಗೆ ಆರೋಪಿಸಲಾಗಿದೆ. ಈ ಅಂಶವನ್ನು ಗಮನಿಸುವುದಾದರೆ ಮೂಲತಃ ಆದಿಮ ಸಂಸ್ಕೃತಿಯ ಶಕ್ತಿದೇವತೆಯ ಆರಾಧನಾ ಪರಂಪರೆಯು ವೈದಿಕೀಕರಣಗೊಂಡು ಈಗಿರುವ ಸ್ಥಿತಿಯಲ್ಲಿ ಅಂದರೆ ಹುಲಿಗೆಮ್ಮನ ಗುಡಿಯಲ್ಲಿ ಬ್ರಾಹ್ಮಣ ಪೂಜಾರಿಗಳು ಮತ್ತು ವೈದಿಕ ಪ್ರಭಾವದ ಆಚರಣೆಗಳು ರೂಢಿಗೆ ಬಂದಿವೆಯೆನಿಸುತ್ತದೆ. ಆದಾಗ್ಯೂ ಮೂಲ ಜನಪದ ಆಶಯಗಳನ್ನು ಉಳಿಸಿಕೊಂಡಿರುವ ಇಲ್ಲಿನ ಸಂಪ್ರದಾಯ ಮತ್ತು ಆಚರಣೆಗಳು ಅದೆಷ್ಟೋ ಹೊಸ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ.

ಹುಲಿಗಿ ಕ್ಷೇತ್ರದ ವ್ಯಾಪ್ತಿಯ ಜನಪದರು ನಂಬುವಂತೆ ಹುಲಿಗೆಮ್ಮನ ಮೂಲ ಗದ್ದುಗೆಯಿರುವ ಈ ಸ್ಥಳದಿಂದಲೇ ಮನೆಯಿಂದಲೇ ಎಡೆ ಹೋಗಬೇಕು. ಮತ್ತು ಅದೆಷ್ಟೋ ಜನ ಈಗಿರುವ ಹುಲಿಗೆಮ್ಮನ ಗುಡಿಗೆ ಹೋಗದೆಯೇ ಇಲ್ಲಿಯೇ ನಮಸ್ಕರಿಸಿ ಹೋಗುವುದನ್ನು ಗಮನಿಸಿದರೆ ಈ ಗದ್ದುಗೆಯ ಮಹತ್ವ ಅರ್ಥವಾಗುತ್ತದೆ. ಇಲ್ಲಿ ಹೇಳಿಕೆಗಳಾಗುತ್ತವೆ. ಹುಣ್ಣಿಮೆ, ಮಂಗಳವಾರದಂದು ಈ ಮನೆಯಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಂತೂ ಈ ಪೂಜಾರ ಮನೆತನದವರು ತುಂಬಾ ಮಡಿಯಿಂದಿದ್ದು ಇಲ್ಲಿಂದ ಅಡುಗೆ ಮಾಡಿ ನೈವೇದ್ಯವನ್ನು ಹುಲಿಗೆಮ್ಮನಿಗೆ ಕೊಡಲಾಗುತ್ತದೆ. ಈ ಪೂಜಾರಿ ಮನೆತನದವರು ಕಬ್ಬೇರು ಜನಾಂಗದವರಾಗಿದ್ದು ಎಲ್ಲ ಆಚರಣೆಗಳು ಬ್ರಾಹ್ಮಣ ಪೂಜಾರಿಗಳು ಮಾಡುವ ರೀತಿಯಲ್ಲಿಯೇ ಇವೆ. ಆದರೆ ಮೂಲತಃ ಇವು ಭಿನ್ನ ಆಚರಣೆಗಳಾಗಿದ್ದಿರಬಹುದೆನ್ನುವುದಕ್ಕೆ ಸ್ಪಷ್ಟ ಪುರಾವೆಗಳಿವೆ. ಹಾಗೆ ನೋಡಿದರೆ ಮೂಲ ಜನಪದ ದೈವವೊಂದನ್ನು ವೈದಿಕೀಕರಣಗೊಳಿಸಿದಾಗ್ಯೂ ಆ ದೈವದ ಮಹತ್ತನ್ನು ಸಾರುವ ಮೂಲ ಗದ್ದುಗೆ ಇರುವುದು ತಳ ಸಮುದಾಯವೊಂದರ ಮನೆತನದಲ್ಲಿ ಎಂಬುದನ್ನು ಮರೆಯುವಂತಿಲ್ಲ. ಜನ ಈಗಲೂ ಇದಕ್ಕೆ ಹೆಚ್ಚಿನ ಮಹತ್ವ ಕೊಡುತ್ತಿರುವುದು ಸಹ ಮೇಲಿನ ಅಂಶಗಳಿಗೆ ಪೂರಕವಾಗಿದೆ.

ಇನ್ನು ಬಾಳೆದಂಡಿಗಿಯನ್ನು ಜೋಗಿನ ಹುಲುಗುಪ್ಪ ಹೊಸೂರಿನವರು ಹೊತ್ತುಕೊಂಡು ದೇವರಮ್ಮನಿಗೆ ಹೋಗುತ್ತಾನೆ. ನಂತರ ಬೆಳಗಿನ ಜಾವ ೩ ಗಂಟೆಗೆ ಈ ಬಾಳೆದಂಡಿಗೆಯನ್ನು ಹೊತ್ತುಕೊಂಡು ಬಂದು ಹುಲಿಗೆಮ್ಮ ದೇವಿ ಮುಂದೆ ಇಡುತ್ತಾರೆ. ನಂತರ ನದಿಗೆ ಹೋಗಿ ಪೂಜೆ ಮಾಡಿಕೊಂಡು ಬರುತ್ತಾರೆ.

## ಹುಲಿಗೆಮ್ಮ ದೇವಿಗೆ ಪ್ರಸಾದ ಕಟ್ಟುವ ಕಾರ್ಯಕ್ರಮ

ಇಲ್ಲಿ ಪ್ರಸಾದವೆಂದರೆ ದೇವಿ ವರಕೊಡುವ ಹೂವು. ಅಂದರೆ ಮಲ್ಲಿಗೆ ಹೂವಿನ ದಂಡೆಗಳನ್ನು ಅಥವಾ ಉಂಡೆಗಳನ್ನು ಹುಲಿಗೆಮ್ಮ ದೇವಿ ಮೂರ್ತಿಯ ತಲೆಯ ಮೇಲೆ ಇಟ್ಟಿರುತ್ತಾರೆ. ಜಾತ್ರೆಯಲ್ಲಿ ಏನೇ ಒಳ್ಳೆ ಕಾರ್ಯ ನೆರವೇರಬೇಕೆಂದರೂ ಹುಲಿಗೆಮ್ಮ ಬಲಗಡೆಯಿಂದ ಹೂ ಕೊಡಬೇಕು. ಬಾಳೆದಿಂಡಿಗಿ ದಿನ ಮೂರು ಪ್ರಸಾದ ಕಟ್ಟುತ್ತಾರೆ. ಅಂದರೆ ಒಂದೊಂದರಂತೆ ಪ್ರಸಾದವನ್ನು ಕೇಳಿದಾಗ ದೇವಿಯು ಪ್ರಸಾದವನ್ನು ಕರುಣಿಸುತ್ತಾಳೆ. ಈ ಪ್ರಸಾದವನ್ನು ಹೂವನ್ನು ಪೂಜಾರಿ ಕೇಳಿದಾಗ ದೇವಿಯು ಪ್ರಸಾದವನ್ನು ಕರುಣಿಸುತ್ತಾಳೆ. ಈ ಪ್ರಸಾದವನ್ನು ಹೂವನ್ನು ಪೂಜಾರಿ ಮನೆತನದವರು ಸಾಮಾನ್ಯವಾಗಿ ಜಾತ್ರೆಯಾಗುವ ತನಕ ಒಂಬತ್ತು ದಿನವೂ ಉಪವಾಸವಿರುತ್ತಾರೆ. ಅಲ್ಪಾಹಾರ ಅಂದರೆ ಬಾಳೆಹಣ್ಣು ಮಾತ್ರ ಸೇವನೆ ಮಾಡುತ್ತಿರುತ್ತಾರೆ. ಈ ಪೂಜಾರ ಮನೆತನದವರು ಜಾತ್ರೆಯಿಂದ ಜಾತ್ರೆಗೆ ತಮ್ಮ ಕೂದಲನ್ನು ತೆಗೆಯುವ ಆಗಿಲ್ಲ. ಗಡ್ಡ, ಮೀಸೆ ತೆಗೆಯುವ ಹಾಗಿಲ್ಲ. ಕೈಕಾಲುಗಳಲ್ಲಿ ಉಗುರುಗಳು ಹಾಗೇ ಇರುತ್ತವೆ. ಅವುಗಳನ್ನು ಬಾಳಿದಂಡಿಗೆ ದಿನವೇ ತೆಗೆಯುತ್ತಾರೆಂದು ಅವರು ಹೇಳುತ್ತಾರೆ. ಒಂದು ವರ್ಷದ ತನಕ ಹಾಗೆ ಅವುಗಳೆಲ್ಲವನ್ನು ಇರಿಸಿಕೊಳ್ಳುವ ಸಂಗತಿಯು ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದು ಬಂದಿತು. ಆದರೂ ಇನ್ನೂ ಅನೇಕ ಸಂಗತಿಗಳನ್ನು ಅವರು ಹೇಳಲಿಚ್ಛಿಸುವುದಿಲ್ಲ. ಆದರೆ ಅವರ ಪ್ರಕಾರ ಬಾಳಿದಂಡಿಗಿದಿನ ಇವನ್ನೆಲ್ಲಾ ತೆಗೆಯಲಾಗುತ್ತದೆ. ನದಿಯಲ್ಲಿ ಹೋಗಿ ಸ್ನಾನ ಮಾಡಿ ಬಂದು ದೇವಿಗೆ ನಮಸ್ಕರಿಸಿ, ಹುಲಿಗೆಮ್ಮನ ಗುಡಿಯಲ್ಲಿ ಇವರಿಗೆ ಮುಖದ ತುಂಬ ಕುಂಕುಮ ಹಚ್ಚಲಾಗುತ್ತದೆ. ಕೊರಳಿಗೆ ಹೂವಿನ ಹಾರವನ್ನು ಹಾಕಿ ಹೂವಿನ ದಂಡಿಗೆಯನ್ನು ಅವರ ತಲೆಗೆ ಹಾಕುತ್ತಾರೆ. ಹುಲಿಗೆಮ್ಮ ದೇವಿಗೆ ಮಂಗಳಾರತಿ ಮಾಡುತ್ತಾರೆ. ನಂತರ ನಮಸ್ಕರಿಸಿ ಬಾಳಿದಂಡಿಗೆ ಮೇಲೇರಿ ಗುಡಿಯ ಸುತ್ತ ೩ ಸಲ ಪ್ರದಕ್ಷಿಣೆ ಹಾಕುತ್ತಾರೆ. ಈ ಆಚರಣೆಯನ್ನು ಬಾಹ್ಯವ್ಯಕ್ತಿಗಳಾರೂ ನೋಡುವ ಹಾಗಿಲ್ಲ. ಒಂದು ವೇಳೇ ನೋಡಿದರೆ ಏನಾದರೂ ಅನಾಹುತ ಆಗುವ ಸಂದರ್ಭವಿದೆ. ಬಾಳೆದಂಡಿಗಿ ದಿನ ಊರೆಲ್ಲ ಕತ್ತಲು ಮಾಡಿ ಯಾರು ನೋಡಲಿಕ್ಕಾಗದ ಸಂದರ್ಭದಲ್ಲಿ ಇದನ್ನು ಮಾಡುತ್ತಾರೆ ಎಂದು ಹೇಳುತ್ತಾರೆ. ಇಂದಿಗೂ ಹೀಗೆ ನಡೆದುಕೊಂಡು ಬಂದಿದೆ.

ಕುಂಕುಮ ಹಚ್ಚಿಕೊಳ್ಳುವುದು ದೇವಿಯ ಅವತಾರ ತಾಳುವ ಪ್ರತೀಕವಾಗಿದೆ. ಇದನ್ನು ನೋಡಲು ಕೆಲವರು ಅಂಜುತ್ತಾರೆ. ಅಷ್ಟೊಂದು ಉಗ್ರವಾಗಿ ಅವರು ಕಾಣುತ್ತಾರೆ. ಆದರೆ ಈಗಿನ ಆಧುನಿಕ ಯುಗದಲ್ಲಿಯೂ ಸಹ ಈ ದೃಷ್ಯವನ್ನು ನೋಡಲು ಅಂಜುತ್ತಾರೆಂಬುದ ಗಮನಿಸತಕ್ಕ ಸಂಗತಿಯಾಗಿದೆ. ಈ ಕ್ರಿಯೆಯ ನಂತರ ಬಾಳೆಯ ದಿಂಡಿಗಿಯನ್ನು ಸ್ವಲ್ಪ ಸ್ವಲ್ಪ ಕತ್ತರಿಸಿ ಅದನ್ನು ಪ್ರಸಾದ ರೂಪದಲ್ಲಿ ಎಲ್ಲರಿಗೂ ಹಂಚಲಾಗುತ್ತದೆ.

ಅಗಿ ಹುಣ್ಣಿಮೆಯಾದ ಹತ್ತು ದಿನಕ್ಕೆ ದೇವಸ್ಥಾನದ ಮುಂದಿರುವ ಅಗ್ನಿಕುಂಡದಲ್ಲಿ ಐದು ಕಟ್ಟಿಗೆಗಳನ್ನು ಇಟ್ಟು, ಅದಕ್ಕೆ ಗಂಧ, ಕುಂಕುಮ, ಭಂಡಾರ ಹಚ್ಚುತ್ತಾರೆ. ಅದಕ್ಕೆ ಹೂವಿನ ಮಾಲೆ ಸುತ್ತುತ್ತಾರೆ. ನಂತರ ಮಂಗಳಾರತಿ ಮಾಡಿ ಕಾಯಿ ಒಡೆದ ನಂತರ ಪೂಜಾರಮನೆತನದ ಐದು ಕುಟುಂಬಗಳ ಸದಸ್ಯರು ಈ ಕಟ್ಟಿಗೆಗಳನ್ನು ಹಾಕುತ್ತಾರೆ.

ಈ ದೇವತೆಯ ಆಚರಣೆಯಲ್ಲಿ ವಿಶೇಷವಾದ ಅಂಶವೊಂದಿದೆ. ಪ್ರತಿ ಹುಣ್ಣಿಮೆಗೆ ದೇವಿಯ ಗುಡಿ ಮುಂದೆ ಹಣವನ್ನು ತೂರಲಾಗುತ್ತದೆ. ಹಾಗೆಯೇ ಜಾತ್ರೆಯ ದಿನವೂ ಹರಕೆಯಿಂದ ತೂರಿದ ಹಣವನ್ನು ಬಾಳಿದಂಡಿಗೆ ಪೂಜಾರದ, ಪಾಯಸದ, ಭಜಂತ್ರಿಯವರಿಗೆ, ಸೇವಕರಿಗೆ, ಕಟ್ಟಿಗೆಯವರಿಗೆ, ಕೊಂಡದವರಿಗೆ, ಅಗಸರಿಗೆ ಕೊಡುತ್ತಾರೆ.

ಹುಲಿಗೆಮ್ಮ ದೇವಿಯ ಗುಡಿಯೊಳಕ್ಕೆ ಬಾಳೆದಂಡಿಗಿ ಪೂಜಾರಿ ಹಾಗೂ ಪಾಯಸದ ಪೂಜಾರಿ ಇವರುಗಳು ಭಕ್ತಿಯಿಂದ ಹಚ್ಚಿದ ದೀಪವನ್ನು ಹುಲಿಗೆಮ್ಮ ದೇವಿಗೆ ಬೆಳಗುತ್ತಾರೆ. ನಂತರ ನಾಗಜೋಗಿ, ಬಸವಜೋಗಿಗೆ ಇವರಿಬ್ಬರೂ ಜ್ಯೋತಿ ಬೆಳಗುತ್ತಾರೆ. ಆ ದೀಪದಿಂದ ಅಗ್ನಿಕೊಂಡಕ್ಕೆ ಬೆಂಕಿ ಹಚ್ಚುತ್ತಾರೆ.

ಇನ್ನು ಅಗ್ನಿಪೂಜೆಯ ನಂತರ ಪಾಯಸದ ಪಡುಗವನ್ನು ಕಂಬಳಿ ಹಾಸಿ, ಅಕ್ಕಿ ಹಾಕಿ ಅದರ ಮೇಲೆ ಪಡುಗ ಇಡುತ್ತಾರೆ. ಅದನ್ನು ಅಮ್ಮನವರು ಪೂಜೆ ಮಾಡುವುದು ನಂತರ ಮಂಗಳಾರತಿ ಮಾಡಿ, ಕಾಯಿ ಒಡೆದು ಅದನ್ನು ಪುನಃ ದೇವರ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಪಾಯಸದ ಮನೆಯವರು ಬೆಳಿಗ್ಗೆ ಹೊಸಪಡುಗವನ್ನು ತೆಗೆದುಕೊಂಡು ನದಿಗೆ ಹೋಗುತ್ತಾರೆ. ಇವರ ಜೊತೆಗೆ ವಾದ್ಯಗಳು ಸಹ ಹೋಗುತ್ತವೆ. ನದಿಗೆ ಹೋಗಿ ಚೆನ್ನಾಗಿ ತೊಳೆದು ಅಲ್ಲಿಂದ ನೀರನ್ನು ತರುತ್ತಾರೆ. ಅಂದು ಪಾಯಸದ ಮನೆಯ ಪೂಜಾರಿಗೆ ಚೌರ ಮಾಡಿಸುವ ಕಾರ್ಯಕ್ರಮವಿರುತ್ತದೆ. ಆ ಹೊಸ ಪಡುಗವನ್ನು ದೇವಿಗುಡಿಯ ಮುಂದೆ ತಂದು ಪೂಜೆ ಮಾಡಿಸಿ ಮಂಗಳಾರತಿ ಮಾಡುತ್ತಾರೆ. ಎಲ್ಲರ ಮನೆಯಲ್ಲಿ ಮಣ್ಣಿನ ಒಲೆ ಗುಂಡಿಯಿದ್ದರೆ, ನಿನ್ನ ಮನಿ ಮುಂದ್ಯಾಕ ವಲ್ಲಿಯ ಒಲೆಗುಂಡು ಎಂದು ಹಾಡಿನಲ್ಲಿ ಬರುತ್ತದೆ. ಅದೇ ಈ ದೇವತೆಯ ವಿಶೇಷವಾಗಿದೆ. ಮೂರು ಒಲೆಗುಂಡುಗಳಿಗೆ ರೇಶಿಮೆಯ ರುಮಾಲನ್ನು ಸುತ್ತುವರಿದು ಅದರ ಮೇಲೆ ಪಡುಗವನ್ನಿರಿಸಲಾಗುತ್ತದೆ. ಒಲೆಗೆ ಗಂಧದ ಕಟ್ಟಿಗೆ ಹಾಲು ಹಾಕಿ ಬೆಂಕಿಯನ್ನು ಹಚ್ಚುತ್ತಾರೆ. ಈ ಪಾಯಸ ಆಗಲು ಕೇವಲ ಸ್ವಲ್ಪ ಗಂಧದ ಚೆಕ್ಕೆಯನ್ನು ಮಾತ್ರ ಬಳಸುತ್ತಾರೆ. ಅಷ್ಟು ಸ್ವಲ್ಪ ಚಕ್ಕೆಯಲ್ಲಿಯೇ ಪಾಯಸವು ಸಿದ್ಧಗೊಳ್ಳುತ್ತದೆ. ಪಡುಗಕ್ಕೆ ಸುತ್ತಿದ ಹೂವಿನ ಮಾಲೆಯು ಸಹ ಬಾಡುವುದಿಲ್ಲ. ಇದು ವಿಶೇಷ ಮಾತ್ರವಾಗಿರದೆ ಅಚ್ಚರಿಯ ಸಂಗತಿಯೂ ಆಗಿದೆ.

ಈ ಕಾರ್ಯಕ್ರಮದಲ್ಲಿ ಎಲ್ಲ ಜನರೂ ಸೇರಿರುತ್ತಾರೆ. ಎಲ್ಲರೆದುರಿಗೆ ಕುದಿಯುವ ಪಾಯಸದಲ್ಲಿ ಪೂಜಾರರು ತಮ್ಮ ಕೈಯಿಂದ ಪಾಯಸದಲ್ಲಿ ಯಾವುದೇ ಉಪಕರಣವನ್ನು ಬಳಸದೆಯೇ ತಮ್ಮ ಕೈಯಿಂದಲೇ ಪಾಯಸದಲ್ಲಿ ಕೈಯಾಡಿಸುತ್ತಾರೆ. ಕುದಿಯುವ ಪಾಯಸವನ್ನು ಕೈಯಲ್ಲಿಡಿದು ಎತ್ತಿತೋರಿಸುತ್ತಾರೆ. ಆದರೂ ಅವರ ಕೈಗೆ ಏನೂ ಗಾಯವಾಗುವುದಿಲ್ಲ ಎಂದು ಹೇಳಲಾಗುತ್ತದೆ. ಈ ಮೂಲಕ ಹುಲಿಗೆಮ್ಮನ ಮಹಿಮೆ ಮತ್ತು ಆಕೆಯ ಶಕ್ತಿ ಎಂತಹುದೆಂಬುದನ್ನು ಸಾರಲಾಗುತ್ತದೆ. ಮತ್ತು ಒಲೆಯ ಗುಂಡುಗಳಿಗೆ ಸುತ್ತಲಾಗಿರುವ ರೇಷ್ಮೆಯ ರುಮಾಲು ಕೂಡ ಸುಡುವುದಿಲ್ಲ. ಒಲೆಯ ಮೇಲಿಟ್ಟ ಪಡುಗಕ್ಕೆ ಐದು ಕೊಡ ನೀರನ್ನು ಸುರಿಯುತ್ತಾರೆ. ಅಕ್ಕಿಯನ್ನು ಮತ್ತು ಬೆಲ್ಲವನ್ನು ಹಾಕಿದ ಮೇಲೆ ದೇವಿಯನ್ನು ಹೂವು ಕೇಳಲು ಹೋಗುತ್ತಾರೆ. ದೇವಿ ಇವರಿಗೆ ಅಷ್ಟು ಸುಲುಭವಾಗಿ ಹೂಕೊಡುವುದಿಲ್ಲ. ಆಗ ಸಿಟ್ಟಿಗೆದ್ದ ಭಕ್ತರು ದೇವಿಯನ್ನು ಬೈಯುತ್ತಾರೆ. ಆಗ ದೇವಿ ಹೂಕೊಡುತ್ತಾಳೆ. (ಅಥವಾ ಈ ರೀತಿ ಬೈದ ಮೇಲೆಯೇ ದೇವಿ ಹೂಕೊಡುವುದೆಂದು ನಂಬಿದ ಹಾಗಿದೆ) ಒಟ್ಟಿನಲ್ಲಿ

ಇದು ದೇವಿಯ ಮೇಲಿರುವ ಜನಪದರ ಮುಗ್ಧ ಭಕ್ತಿಯನ್ನು ಮತ್ತು ಆ ಭಕ್ತಿಯ ಹಿಂದಿನ ಪರಿಶುದ್ಧತೆಯನ್ನು ವ್ಯಕ್ತಪಡಿಸುತ್ತದೆಯೆಂದರೆ ತಪ್ಪಾಗಲಾರದು. ಇಲ್ಲಿ ಜನಪದರು ದೈವವನ್ನು ಬೇರೊಂದು ಅಲೌಕಿಕ ಶಕ್ತಿಯೆಂದು ಪರಿಭಾವಿಸಿದ್ದಾಗ್ಯೂ ಮನುಷ್ಯ ಸಂಬಂಧಗಳ ನೆಲೆಯಲ್ಲಿಯೇ ಆ ದೈವತ್ವದ ಸಂಬಂಧವನ್ನು ಪರಿಭಾವಿಸುವುದು ಮತ್ತು ಅದಕ್ಕೆ ಪ್ರತಿಕ್ರಿಯಿಸುವುದು ಅವರ ನಿರ್ವ್ಯಾಜ್ಯ ಪ್ರೀತಿಯನ್ನು ವ್ಯಕ್ತಪಡಿಸುತ್ತದೆ. ಇದು ಇನ್ನೂ ಅರ್ಥಪೂರ್ಣವಾದ ಮನುಷ್ಯ ಸಂಬಂಧಗಳನ್ನು ಉಳಿಸಿಕೊಂಡಿರುವ ಮೂಲ ಜನಪದದ ಆಶಯವಲ್ಲದೆ ಮತ್ತೇನೂ ಅಲ್ಲವೆನ್ನಿಸುತ್ತದೆ.

ಇವರ ಬೈಯ್ಗುಳಗಳಿಗೆ ಮುದಗೊಂಡ ದೇವಿಯು ಕಡೆಗೂ ಹೂ ಕರುಣಿಸಿದಾಗ ಹುಲಿಗೆಮ್ಮ...ಬಹುಪರಾಕ್...ಹುಲಿಗೆಮ್ಮ ಬಹುಪರಾಕ್.... ಎಂದು ಘೋಷಣೆ ಹಾಕುತ್ತಾರೆ. ನಂತರ ಪಾಯಸ ತೆಗೆಯುವ ಕೆಲಸ ಮತ್ತು ಪ್ರಸಾದ ಹಂಚುವ ಕೆಲಸವನ್ನು ಕಬ್ಬೇರ ಜನಾಂಗದವರೇ ಮಾಡುತ್ತಾರೆ. ಬರಿಗೈಯಿಂದಲೇ ಕುದಿಯುತ್ತಿರುವ ಪಾಯಸದಲ್ಲಿಯೇ ಕೈಯಾಡಿಸುತ್ತಿರುವಾಗ ಪಡುಗದಲ್ಲಿ ಯಾವ ದಿಕ್ಕಿನಲ್ಲಿ ಅಕ್ಕಿಬೆಂದಿದೆಯೋ ಆ ದಿಕ್ಕಿನಲ್ಲಿ ಮಳೆ ಬೆಳೆ ಸಮೃದ್ಧವಾಗಿ ಆಗುತ್ತದೆಂಬ ಪ್ರತೀತಿಯಿದೆ.

**ಕೊಂಡ ಹಾಯುವುದು**

ದೇವರಿಗೆ ಹರಕೆ ಹೊತ್ತ ಭಕ್ತರು ಅದರ ಈಡೇರಿಕೆಗಾಗಿ ನಿಗಿ ನಿಗಿ ಕೆಂಡದ ಮೇಲೆ ಓಡುವ ಧಾರ್ಮಿಕ ಆಚರಣೆ ರಾಜ್ಯದ ಹಲವಾರು ಗ್ರಾಮಗಳಲ್ಲಿ ಆಚರಣೆಯಲ್ಲಿದೆ. ಹಾಗೆಯೇ ಹುಲಿಗೆಮ್ಮನ ಜಾತ್ರೆಯಲ್ಲಿ ಕೊಂಡ ಹಾಯುವುದನ್ನು ನಾವು ನೋಡಬಹುದಾಗಿದೆ. ಭಕ್ತಿಯ ಪರಾಕಾಷ್ಟೆಯಲ್ಲಿ ಭೀತಿಯನ್ನು ಬದಿಗೊತ್ತಿ ಕೆಂಡದ ಮೇಲೆ ಓಡುವ ಈ ದೇವತಾರ್ಚನೆಯ ಆಚರಣೆಯನ್ನು ಕೊಂಡಹಾಯುವುದು ಅಥವಾ ಕೆಂಡ ಹಾಯುವುದು ಎಂದು ಕರೆಯಲಾಗುತ್ತದೆ.

ಜನಪದ ದೈವಗಳಿಗೆ ಸಂಬಂಧಿಸಿದಂತೆ ಕೊಂಡವು ಎಲ್ಲೆಡೆಯೂ ಆಚರಣೆಯಲ್ಲಿದೆ. ಇದಕ್ಕೆ ಹಲವಾರು ಶತಮಾನಗಳ ಇತಿಹಾಸವೂ ಇದ್ದಂತಿದೆ. ಜಗತ್ತಿನ ಇತರೆಡೆಗಳಲ್ಲಿಯೂ ಕೊಂಡ ಸಂಪ್ರದಾಯ ಬಳಕೆಯಲ್ಲಿರುವುದನ್ನು ವಿದ್ವಾಂಸರು ಗುರುತಿಸುತ್ತಾರೆ.[೧] (ಶಂಕರ ನಾರಾಯಣ ೧೯೮೯, ೨-೬) ಎಲ್ಲ ಜನಸಮುದಾಯಗಳಲ್ಲಿಯೂ ಒಂದಲ್ಲ ಒಂದು ಬಗೆಯ ಕೆಂಡ ಸಂಪ್ರದಾಯವಿದೆ. ಈಜಿಪ್ಪಿನ ಕೆಲವು ಸಮುದಾಯಗಳು ತಮ್ಮ ಶಕ್ತಿ ಪ್ರದರ್ಶನಕ್ಕೆ ಕೆಂಡವನ್ನು ಬಾಯಿಗೆ ಹಾಕಿಕೊಳ್ಳುತ್ತಾರೆ ಎಂಬ ಮಾಹಿತಿಯಿದೆ.[೨] ಭಾರತದಲ್ಲಿಯಂತೂ ವೇದಕಾಲದಿಂದಲೂ ಇದು ಬಳಕೆಯಲ್ಲಿದೆ ಎಂದು ಹೇಳಲಾಗಿದೆ. ಸಾಮವೇದದಲ್ಲಿ ಇದರ ಉಲ್ಲೇಖವಿದೆಯೆಂಬುದಾಗಿ ಹೇಳಲಾಗುತ್ತದೆ.

ಕೊಂಡ ಹಾಯುವುದರ ಬಗ್ಗೆ ಸಮಾಜಶಾಸ್ತ್ರಜ್ಞರು ಈಗಾಗಲೇ ಸಾಕಷ್ಟು ವಿಮರ್ಶೆವಿಶ್ಲೇಷಣೆ ನೀಡಿದ್ದಾರೆ. ಹ್ಯಾರಿಪೈಸ್ ಅವರು ಕೊಂಡಹಾಯುವ ಪದ್ಧತಿಯನ್ನು ಅತೀಂದ್ರಿಯ ಶಕ್ತಿ ಎಂದು ವಿವರಿಸಿದರು. ಮನಸ್ಥೈರ್ಯಕ್ಕೆ ಅನುಗುಣವಾದ ಫಲಿತಾಂಶವನ್ನು ಅದು ನೀಡುತ್ತದೆ ಎಂದು ಅವರು ವಾದಿಸುತ್ತಾರೆ. ಅವರ ಮೂರು ಮುಖ್ಯ ನಿರ್ಣಯಗಳು ಇಂತಿವೆ.

೧. ನಂಬಿಕೆಯಿಂದ ಕೊಂಡ ಹಾಯುಲು ಸಾಧ್ಯ.

೨. ಅಂಗಾಲು ಕೆಂಡದ ಮೇಲೆ ತೀರ ಕಡಿಮೆ ಅವಧಿಯಲ್ಲಿ ಇರುತ್ತದೆ. ಹಾಗಾಗಿ ಕಾಲು ಸುಡುವುದಿಲ್ಲ.

೩. ನಡಿಗೆಯ ಕುಶಲತೆಯಿಂದ ಕಾಲು ಸುಡುವುದಿಲ್ಲ.

ಮೇನ್‌ಗೀಡ ಕೋ ಎಂಬ ರಸಾಯನ ವಿಜ್ಞಾನಿಯು ಕೊಂಡ ಹಾಯುವುದನ್ನು ಅಭ್ಯಾಸ ಮಾಡಿ ಈ ಕೆಳಗಿನ ನಿರ್ಣಯಗಳನ್ನು ಕೊಡುತ್ತಾರೆ.

೧. ಹೆದರಿಕೆಯಿಲ್ಲದ ಮನಸ್ಥಿತಿ-ಮನಸ್ಥೈರ್ಯ ಬೇಕಾಗುತ್ತದೆ. ಹೆದರಿದರೆ ಏಕಾಗ್ರತೆ ತಪ್ಪುತ್ತದೆ.

೨. ದೇವರಲ್ಲಿ ಧರ್ಮದಲ್ಲಿ ನಂಬಿಕೆಯಿದ್ದರೆ ಬೆಂಕಿಯಲ್ಲಿ ನಡೆಯಲು ಬೇಕಾದ ಏಕಾಗ್ರತೆ ಸುಲುಭವಾಗಿ ಸಿದ್ಧಿಸುತ್ತದೆ.

೩. ದೈವ ಪೂಜಾರಿಗಳು ಸಾಮಾನ್ಯವಾಗಿ ಕಾಲಿಗೆ ಚಪ್ಪಲು ಹಾಕದಿರುವುದರಿಂದ ಅವರ ಅಂಗಾಲು ದಪ್ಪವಾಗಿರುತ್ತದೆ. ಹೀಗಾಗಿ ಅದಕ್ಕೆ ಹೆಚ್ಚಿನ ಪ್ರತಿರೋಧ ಶಕ್ತಿ ಇರುತ್ತದೆ.

೪. ಉಷ್ಣತೆ ಹೆಚ್ಚಿದಷ್ಟು ಸುಡುವ ಸಾಧ್ಯತೆ ಕಡಿಮೆ. ಉಷ್ಣತೆ ಕಡಿಮೆ ಇದ್ದರೆ ಸುಡುವ ಸಾಧ್ಯತೆ ಹೆಚ್ಚು.

೫. ಮನಸ್ಸು ಸ್ವಯಂ-ಸಮ್ಮೋಹನ ಸ್ಥಿತಿಯಲ್ಲಿದ್ದರೆ ಅದು ದೇಹದ ಮೇಲೆ ಪರಿಣಾಮ ಬೀರುತ್ತೆ.

ಈ ಇಬ್ಬರು ವಿದ್ವಾಂಸರ ಜೊತೆಗೆ ರಾಕ್ಲಿಫ್-ವಾಕರ್, ಗ್ಯಾಟಿಸ್ ಮೊದಲಾದವರು ಈ ಕುರಿತು ಸಂಶೋಧನೆ ನಡೆಸಿದ್ದಾರೆ ಮತ್ತು ಎಲ್ಲರೂ ಕೂಡ ಕೊಂಡಹಾಯುವುದನ್ನು ಇಂದ್ರಿಯ ಪರಿಮಿತಿಯಲ್ಲಿಯೇ ವಿವರಿಸಿದ್ದಾರೆ. ಆಯಾನಯೋ ಮಂಗನಾಸ ಕ್ಲೇಮೆಂಟಸ್ಟೋನ, ನಾರ್ಮಲೀ ಬ್ರೌನಿಂಗ್ ಮೊದಲಾದವರು ಈ ಕುರಿತು ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಪರಾಮಾನವಶಾಸ್ತ್ರದ ಹಿನ್ನೆಲೆಯಲ್ಲಿ ಇವರು ತಮ್ಮ ವಾದಗಳನ್ನು ಮಂಡಿಸಿದ್ದಾರೆ.

ಹೀಗೆ ಹುಲಿಗಿಯಲ್ಲಿ ನಡೆಯುವ ಕೊಂಡವು ಹುಲಿಗೆಮ್ಮನ ಶಕ್ತಿಪ್ರದರ್ಶನದ ಭಾಗವಾಗಿ ಕಾರ್ಯನಿರ್ವಹಿಸುತ್ತದೆ. ಕೊಂಡ ನೋಡುವ ಭಕ್ತರು ದೈವದ ಶಕ್ತಿಗೆ ಇನ್ನಷ್ಟು ತಲೆಬಾಗುತ್ತಾರೆ.

ಪಾಯಸ ತೆಗೆದ ಪೂಜಾರಿ ಹಾಗೂ ಬಾಳೇದಂಡಿಗಿ ಮನೆತನದ ಪೂಜಾರಿ ಇವರಿಬ್ಬರು ಮಾತ್ರ ಕೆಂಡ ತುಳಿಯುತ್ತಾರೆ. ನಂತರ ಕಾಲಿಗೆ ಕೊಡದಿಂದ ನೀರು ಹಾಕುತ್ತಾರೆ. ಇವರನ್ನು ಬಿಟ್ಟು ಬೇರೆ ಯಾರು ಕೆಂಡವನ್ನು ತುಳಿಯುವುದಿಲ್ಲ. ಅಗ್ನಿಕೆಂಡ ತುಳಿಯುವ ಪೂಜಾರಿಯ ಮುಖದ ತುಂಬಾ ಭಂಡಾರ ಕುಂಕುಮವನ್ನು ಹಚ್ಚಲಾಗುತ್ತದೆ. ಇದನ್ನು ಹಚ್ಚಲು ಕಾರಣ ಕೆಂಡ ತುಳಿಯುವ ಆ ಪೂಜಾರಿಗಳು ದೇವಿಯ ಪ್ರತಿರೂಪವಾಗಿ ಕಾಣಬೇಕೆಂಬ ಆಶಯವಾಗಿದೆ. ಹಿಂದೆ ಕೆಂಡವನ್ನು ತುಳಿಯುವಾಗ ಪೂಜಾರಿಗಳಿಗೆ ಮುತ್ತಿನ ದಂಡಿಗೆಯನ್ನು ಹಾಕುತ್ತಿದ್ದರಂತೆ. ಆದರೆ ಈಗ ಈ ಪದ್ಧತಿ ಇಲ್ಲ. ಕೆಂಡ ತುಳಿಯುವಾಗ ಗೊತ್ತಾದ ವ್ಯಕ್ತಿಗಳು ಕೋಳಿಗಳನ್ನು ಹಾರಿಬಿಡುತ್ತಾರೆ.

ಕೆಂಡವನ್ನು ಒಂದೇ ಬಾರಿ ತುಳಿಯಲಾಗುತ್ತದೆ. ಅಲ್ಲಿ ಜೋಗತಿಯರು, ಭಕ್ತಾದಿಗಳು ಎಲ್ಲಾ ರೀತಿಯಲ್ಲಿ ನೆರೆದಿರುತ್ತಾರೆ. ಅಗ್ನಿಕೊಂಡ ಮುಚ್ಚುವವರೆಗೆ ಪೂಜಾರಿಗಳು ಗುಡಿಯನ್ನು ಪ್ರವೇಶಿಸುವಂತಿಲ್ಲ. ರಂಗಪ್ಪ ಗುನ್ನಾಳ್ ಎನ್ನುವವರು ಅಗ್ನಿಕೊಂಡವನ್ನು ಮುಚ್ಚುತ್ತಾರೆ. ನಂತರ ಅದೇ ಅವತಾರದಲ್ಲಿದ್ದು ಪೂಜಾರರು ಎಲ್ಲರಿಗೆ ಪ್ರಸಾದವನ್ನು ಅಂದರೆ ಬಾಳೆದಿಂಡನ್ನು ಎಳೆ, ಎಳೆಯಾಗಿ ಪ್ರಸಾದವಾಗಿ ಭಕ್ತಾದಿಗಳಿಗೆ ಊರಿನ ಹಿರಿಯ ಗಣ್ಯ ವ್ಯಕ್ತಿಗಳಿಗೆ ಹಂಚುತ್ತಾರೆ.

**ಮಾಸಿಕ ಆಚರಣೆಗಳು**

ಆಷಾಢ ಮಾಸದಲ್ಲಿ ದೇವಿಗೆ ಯಥಾಪ್ರಕಾರ ದಿನನಿತ್ಯದ ಪೂಜೆಗಳು ನಡೆಯುತ್ತವೆ. ಅಲ್ಲದೆ, ಶ್ರಾವಣ ಮಾಸದ ಮಂಗಳವಾರ ಹಾಗೂ ಶುಕ್ರವಾರದಂದು ಹೆಣ್ಣುಮಕ್ಕಳು ಒಪ್ಪತ್ತಿರುತ್ತಾರೆ. ಅವರೆಲ್ಲ ದೇವಿಯ ಪೂಜೆ ಕೈಗೊಂಡ ನಂತರವೇ ಆಹಾರ ಸೇವಿಸುತ್ತಾರೆ. ಮಂಗಳಗೌರಿ ಪೂಜೆಯನ್ನು, ವರಮಹಾಲಕ್ಷ್ಮಿ ಪೂಜೆಯನ್ನು ಅತ್ಯಂತ ಸಂಭ್ರಮ, ಸಡಗರದಿಂದ ಹೆಂಗಳೆಯರು ಕೈಗೊಳ್ಳುತ್ತಾರೆ. ಶ್ರಾವಣ ಮಾಸದಲ್ಲಿ ಕೆಲವರು ಹುಲಿಗಿ ಕ್ಷೇತ್ರದಲ್ಲಿನ ನದಿಗೆ ಹೋಗಿ ಸ್ನಾನ ಮಾಡಿಕೊಂಡು ಬರುತ್ತಾರೆ. ಇಲ್ಲವೇ ಕನಿಷ್ಟಪಕ್ಷ ನದಿಯ ನೀರನ್ನು ತಲೆಯ ಮೇಲೆ ಹಾಕಿಕೊಂಡು ಬರುತ್ತಾರೆ.

**ಬಾದ್ರಪದ ಮಾಸದಲ್ಲಿ ದಿನನಿತ್ಯದ ಪೂಜೆಗಳು ನಡೆಯುತ್ತವೆ.**

ಅಶ್ವೀಜ ಮಾಸದಲ್ಲಿ ಶುದ್ಧ ಪಾಡ್ಯದಿನದಿಂದಾಗಿ ವಿಜಯ ದಶಮಿಯವರೆಗೆ ನಂತರ ವಿಜಯ ದಶಮಿಯ ದಿನದಂದು ದೇವಿಯ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಬನ್ನಿ ಮುಡಿಯುವ ಸ್ಥಳಕ್ಕೆ ಹೋಗಿ ಬನ್ನಿಮುಡಿಯುವ ಕಾರ್ಯಕ್ರಮವನ್ನು ಮಾಡಲಾಗುತ್ತದೆ. ೯ ದಿನಗಳವರೆಗೆ ಪುರಾಣ ಪುಣ್ಯಕಥೆಗಳ ಪಠಣ ಜರುಗುತ್ತದೆ.

ಕಾರ್ತಿಕ ಮಾಸದಲ್ಲಿ ದೇವಸ್ಥಾನದಲ್ಲಿ ದೀಪೋತ್ಸವ ನಡೆಯುತ್ತದೆ. ಭಕ್ತರು ಹುಲಿಗೆಮ್ಮ ಕ್ಷೇತ್ರಕ್ಕೆ ಹೋಗಿ ದೇವಸ್ಥಾನದಲ್ಲಿ ದೀಪಗಳನ್ನು ಹಚ್ಚುತ್ತಾರೆ. ನಂತರ ಕಾರ್ತಿಕ ಇಳಿಸುವ ಕಾರ್ಯಕ್ರಮವನ್ನು ನಡೆಸಲಾಗುತ್ತದೆ.

**ಮಾರ್ಗಶಿರ ಮಾಸದಲ್ಲಿ ದೇವಿಯ ಆಚರಣೆಗಳು ನಡೆಯುತ್ತವೆ.**

ಧರ್ನುಮಾಸದಲ್ಲಿ ಹುಲಿಗಿ ಕ್ಷೇತ್ರದಲ್ಲಿ ಹೆಂಗಳೆಯರು ಬೆಳಿಗ್ಗೆ ೪ ಗಂಟೆಗೆ ಸ್ನಾನ ಮಾಡಿ ದೇವಿಯನ್ನು ಪ್ರಾರ್ಥಿಸುತ್ತಾರೆ. ಸಿಹಿ ಪಾಯಸವನ್ನು ನೈವೇದ್ಯ ಮಾಡಿಸಿ ಪಾಯಸವನ್ನು ಎಲ್ಲರಿಗೂ ಹಂಚಲಾಗುತ್ತದೆ.

ಹೀಗೆ ಆಯಾ ಮಾಸಕ್ಕೆ ತಕ್ಕಂತೆ ದೇವಸ್ಥಾನದಲ್ಲಿ ಪೂಜಾ ವಿಧಿ ವಿಧಾನಗಳು ನಡೆಯುತ್ತಿರುತ್ತವೆ. ಪ್ರತಿ ಹುಣ್ಣಿಮೆ, ಪ್ರತಿ ಅಮವಾಸ್ಯೆಗೂ ಪೂಜಾ ವಿಧಿ ವಿಧಾನಗಳು ಜರುಗುತ್ತವೆ.

ಹುಲಿಗೆಮ್ಮನಿಗೆ ಹುಣ್ಣಿಮೆಯ ಆಚರಣೆಗಳಲ್ಲಿ ವಿಶೇಷ ಪೂಜೆಗಳು ಸಲ್ಲುತ್ತವೆ. ಅಲ್ಲದೆ ಪ್ರತಿ ಮಂಗಳವಾರ ಮತ್ತು ಪ್ರತಿ ಹುಣ್ಣಿಮೆಗೆ ಒಂದು ರೀತಿ ಜಾತ್ರೆಯೇ ನೆರವೇರುತ್ತದೆ. ಪ್ರತಿ ಹುಣ್ಣಿಮೆಗೆ ಸಂಜೆಯ

ಸಮಯದಲ್ಲಿ ಹರಕೆ ತೇರೆಂದು ಇತ್ತೀಚಿಗೆ ೧೦-೧೨ ವರ್ಷಗಳಿಂದ ಭಕ್ತರೆಲ್ಲ ಸೇರಿ ಎಳೆಸುವ ತೇರಾಗಿದೆ. ಪ್ರತಿ ಮಂಗಳವಾರವೂ ಹಲವು ಭಕ್ತರಿಂದ ಒಡಗೂಡಿ ಹುಲಿಗೆಮ್ಮನ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಪಲ್ಲಕ್ಕಿ ಸೇವೆಯನ್ನು ಮಾಡುತ್ತಾರೆ. ಈ ದಿವಸ ದೇವಸ್ಥಾನಕ್ಕೆ ಬರುವವರು ದೈವಕ್ಕೆ 'ಬ್ಯಾಟಿ' ನೀಡುತ್ತಾರೆ. ಅಂದರೆ ಕುರಿಯನ್ನು ಕೊಯ್ದು, ಅಡುಗೆ ಮಾಡಿ ಕ್ಷೇತ್ರದ ಹೊರವಲಯದಲ್ಲಿ ತಾವೇ ತಂದ ಅಮ್ಮನಿಗೆ ಎಡೆ ನೀಡುತ್ತಾರೆ. ಹಾಡು ಹೇಳಿ ಪೂಜೆ ಮಾಡಿ, ನಂತರ ಊಟ ಮಾಡಿ ಹಿಂದಿರುಗುತ್ತಾರೆ.

ರಂಟಿ ಹುಣ್ಣಿಮೆಯಿಂದ ಮುತ್ತೈದೆ ಹುಣ್ಣಿಮೆಯವರೆಗೆ ಮಂಗಳವಾರ ಶುಕ್ರವಾರ ಪಲ್ಲಕ್ಕಿ ಸೇವೆ ನಡೆಯುವುದಿಲ್ಲ.

**ಪಡ್ಲಿಗಿ ಸೇವೆ**

ವರ್ಷದಲ್ಲಿ ಎರಡು ಸಲ ದೈವಕ್ಕೆ ಪಡಲಿಗೆ ಸೇವೆ ಸಲ್ಲಿಸಲಾಗುವುದು. ಸಾಮಾನ್ಯವಾಗಿ ಇದು ಯುಗಾದಿ ಪಾಡ್ಯದಂದು ಮತ್ತು ಕಾರ್ತಿಕ ಚತುದರ್ಶಿಯಂದು ನಡೆಯುತ್ತದೆ.

ದೈವದ ಅರ್ಚಕರು ಹಿಂದಿನ ದಿವಸವೇ ಪಡಲಿಗೆ ಸಿದ್ಧಪಡಿಸಲು ಸ್ನಾನ ಕರ್ಮಾದಿಗಳನ್ನು ಮುಗಿಸಿ ಶುಚಿರ್ಭೂತರಾಗಿ ದೈವಕ್ಕೆ ಕೈ ಮುಗಿದು ಕುಳಿತುಕೊಳ್ಳುತ್ತಾರೆ. ಮರುದಿನ ಮುಂಜಾನೆ ಪಡಲಿಗೆ ಸಿದ್ಧವಾಗುತ್ತದೆ. ಈ ಪಡಲಿಗೆಯಲ್ಲಿ ಬಗೆ ಬಗೆಯ ಪಕ್ವಾನ್ನ, ವಿವಿಧ ತರಕಾರಿಗಳನ್ನಿರಿಸಿ ದೇವಸ್ಥಾನಕ್ಕೆ ತರುತ್ತಾರೆ. ಹೊಸ ಬಟ್ಟೆ ಧರಿಸಿದ ಗಂಡುಮಕ್ಕಳೂ ಇಂಥ ಪಡಲಿಗೆಯನ್ನು ಗುಡಿಸಿ ತರುತ್ತಾರೆ. ಪಡಲಿಗೆಯನ್ನು ದೈವಕ್ಕೆ ಒಪ್ಪಿಸಿ ಪ್ರಸಾದ ಸ್ವೀಕರಿಸಿ ಭಕ್ತರು ಹಿಂದಿರುಗುತ್ತಾರೆ.

ಇದೆ ಸಂದರ್ಭ ಹಾಗೂ ಇತರೆ ಸಂದರ್ಭಗಳಲ್ಲಿ ಪಡ್ಲಿಗಿ ತುಂಬುವ ಕಾರ್ಯಕ್ರಮವನ್ನು ಕಾಣಬಹುದು. ಆ ಆಚರಣೆ ಕೆಳಕಂಡಂತಿದೆ.

**ಅಡ್ಲಿಕಿ ಆಚರಣೆ**

ಅಡ್ಲಿಕಿ ಅಂದರೆ ಹುಲಿಗೆಮ್ಮ ಅಥವಾ ಹುಲಿಗೆಮ್ಮ ಎಂದರೆ ಅಡ್ಲಿಕಿ ಎಂದು ಕರೆಯುತ್ತಾರೆ. ಕೆಲವರ ಅಭಿಪ್ರಾಯದಲ್ಲಿ ಅಡ್ಲಿಕಿ ಎಂದರೆ ಹುಲಿಗೆಮ್ಮನ ಹೊಟ್ಟೆ. ಈ ಅಡ್ಲಿಕಿ ತುಂಬಿಸಿದರೆ ಹುಲಿಗೆಮ್ಮನ ಹೊಟ್ಟೆ ತುಂಬಿದ ಹಾಗೆ, ಅದರಲ್ಲೂ ಆಕೆಗೆ ಇಷ್ಟವಾದಂತ ಕಾಯಿ ಪಲ್ಯೆಗಳಾದ ಬದನೆಕಾಯಿ, ಹಸಿಮೆಣಸಿನಕಾಯಿ, ಉಳ್ಳಾಗಡ್ಡಿ, ಮೂಲಂಗಿ, ಗೆಜ್ಜರಿ, ಪಾಲಕ್, ಮೆಂತೆ, ರಾಜಗೀರಿ ಪಲ್ಯೆ ಇವುಗಳನ್ನು ತುಂಬಿಸುತ್ತಾರೆ.

ಅಡ್ಲಿಗೆ ಹೇಗೆ ಬಂತು ಎಂದರೆ ಮೊದಲು ಹುಲಿಗೆಮ್ಮ ಹುಲಿಗಿ ಕ್ಷೇತ್ರದಲ್ಲಿ ತನ್ನ ತಾಯಿ ಜೊತೆ ಜಗಳವಾಡಿಕೊಂಡು ಒಂದು ಮುದುಕಿ ಅವತಾರದಲ್ಲಿ ಪಡ್ಲಿಗಿಯನ್ನು ಹಿಡಿದುಕೊಂಡು ಬಂದಿರುತ್ತಾಳೆ. ಸೋಮಲಿಂಗ ಹುಲಿಗಿ ಕ್ಷೇತ್ರದಲ್ಲಿ ನೆಲೆಸಿರುವಾಗ ಅಣ್ಣ ನನಗೀಟು ಜಾಗ ಕೊಡಪ್ಪ ಬಹಳ ಮಳಿ ಬರ್ತಿದೆ ಎಂದು ವಿನಂತಿಸಿಕೊಂಡರೂ ಸೋಮಲಿಂಗ ಹೋಗೆ ಹೊಲಸು ರಂಡೆ ನನಗೇನೆ ಇರಲಿಕ್ಕೆ ಜಾಗ ಇಲ್ಲ, ಇನ್ನು

ನಿನಗೇನು ಕೊಡಲಿ ಎಂದು ಆಕೆಯನ್ನು ಬೈದು ಕಳಿಸಿದನಂತೆ. ಆದರೂ ಆ ಮುದುಕಿ ಬಿಡಲಿಲ್ಲ. ರಾತ್ರಿಯೆಲ್ಲಾ ಅಲ್ಲೇ ಇದ್ದು ಒಂದು ಪಡ್ಲಿಗಿ ಇಟ್ಟರೆ ಗುಡಿಯ ಆವರಣದ ತುಂಬ ಪಡ್ಲಿಕಿಗಳಾದವು ಮತ್ತು ಆ ಪಡ್ಲಿಗಿ ತುಂಬ ಕುರಿ ತುಂಡು, ಯಲುಬುಗಳಿದ್ದರಿಂದ ಇದನ್ನು ನೋಡಲಾಗದೆ ಸೋಮಲಿಂಗ ಈಕೆಗೆ ಈ ಜಾಗ ಬಿಟ್ಟು ಹೋದ ಎಂದು ಹೇಳುತ್ತಾರೆ.

ಅಡ್ಲಿಗಿ ಬಗ್ಗೆ ಇನ್ನೊಂದು ರೀತಿಯಲ್ಲಿ ಜನರು ಹೇಳುತ್ತಾರೆ. ಒಂದು ದಿನ ಹುಲಿಗೆಮ್ಮ ನದಿ ದಾಟಬೇಕಾಗಿರುತ್ತದೆ. ಅಂಬಿಗನನ್ನು ಪರೀಕ್ಷಿಸಲು ಹರೆಯದ ಹುಡುಗಿ ಆಗಿ ಅವತಾರ ತಾಳುತ್ತಾಳೆ. ನೋಡಪ್ಪ ನನಗೆ ನಿನ್ನ ದೋಣಿಯಲ್ಲಿ ಈಚೆ ಕಡೆಯಿಂದ ಆ ಕಡೆಗೆ ಸಾಗಿಸುತ್ತೀಯೋ ಎಂದಳಂತೆ. ಸರಿ ನಾನು ಆ ಕಡೆ ದಾಟಿಸುತ್ತೇನೆ. ನನಗೆ ಏನು ಕೊಡತೀಯೇ ಅಂದ. ಆಗ ಹುಲಿಗೆಮ್ಮ ನೀನು ಕೇಳಿದ್ದು ಕೊಡ್ತೀನಪ್ಪ ಅಂದಳಂತೆ. ಅದಕ್ಕೆ ಅಂಬಿಗ ಮನಸ್ಸಿನಲ್ಲಿ ಆಕೆಯನ್ನು ಮೆಚ್ಚಿದನಂತೆ. ಇದು ಹುಲಿಗೆಮ್ಮನ ಮನಸ್ಸಿಗೆ ಗೊತ್ತಾಗಿ ನಟ್ಟ ನಡುವ ನದಿಯಲ್ಲಿ ಮಾಯಕಾರಿತಿಯಾಗಿ ಅಂಬಿಗನನ್ನು ದೋಣಿ ಸಮೇತ ಹೊಳೆಯಲ್ಲಿ ಮುಳುಗಿಸಿದಳಂತೆ. ಇದೆಲ್ಲ ಅಂಬಿಗನ ಹೆಂಡತಿಗೆ ಗೊತ್ತಾಗಿ ದೇವಿ ಹುಲಿಗೆಮ್ಮನನ್ನು ಪ್ರಾರ್ಥಿಸುತ್ತಾಳೆ. ಆಗ ಹುಲಿಗೆಮ್ಮ ಪ್ರತ್ಯಕ್ಷಳಾಗಿ ನಡೆದ ಘಟನೆ ಹೇಳುತ್ತಾಳೆ. ನಂತರ ಅಂಬಿಗನ ಹೆಂಡತಿ ತಪ್ಪಾಯಿತವ್ವ ಎಂದು ಕ್ಷಮೆ ಯಾಚಿಸುತ್ತಾರೆ. ಆಗ ಹುಲಿಗೆಮ್ಮ ಮತ್ತೆ ಅಂಬಿಗನನ್ನು ಮಾಯದಿಂದ ಮೇಲೆ ತರಿಸುತ್ತಾಳೆ. ಅಷ್ಟಲ್ಲದೆ ಹುಲಿಗೆಮ್ಮ ತನ್ನ ಮಾಯದಿಂದ ಒಂದು ಸಣ್ಣ ಬುಟ್ಟಿ ಆಕಾರದಲ್ಲಿ ಆಕಡೆಗೆ ಆ ಬುಟ್ಟಿಯಲ್ಲಿ ಕುಳಿತು ಹೋದಳು. ಅಂದಿನಿಂದ ಅದೇ ಪಡ್ಲಿಗಿ ಆಯಿತು ಎಂದು ಕೆಲವರ ಅಭಿಪ್ರಾಯವಾಗಿದೆ.

ಅಡ್ಲಿಗಿ ಎನ್ನುವ ಪದವನ್ನು ಪಡ್ಲಿಗಿ ಎಂತಲೂ ಕರೆಯುತ್ತಾರೆ. ಪಾಡಲಿಕ್ಕೆ ಹೋಗುವುದು ಅಥವ ಆಡಲಿಕ್ಕೆ ಹೋಗುವುದು, ಎಂದರ್ಥ. ಆಡಲಿಕ್ಕೆ ಹೋಗಿ ಅಡ್ಲಿ ಆಯಿತೆನ್ನಬಹುದಾಗಿದೆ. ಹುಲಿಗೆಮ್ಮ ಒಲಿದರೆ ಎಂತವರನ್ನು ಬಿಡುವುದಿಲ್ಲ. ಅವರಿಗೆ ಒಲಿದು ಅವರಿಗೆ ಪಡ್ಲಿಗಿ ಕೊಡುತ್ತಾಳೆ. ಅವರು ಎಷ್ಟೇ ಶ್ರೀಮಂತರಾದರೂ ಪ್ರತಿ ಮಂಗಳವಾರ, ಶುಕ್ರವಾರ, ಹುಣ್ಣಿಮೆಯಂದು ಆಕೆಯ ಹೆಸರೇಳಿ ಐದು ಮನೆಗೆ ಹೋಗಿ ಬರುವುದಾಗಿದೆ. ಅಂದರೆ ಇದರಿಂದ ಜೋಗತಿಯರು ಹುಲಿಗೆಮ್ಮನ ಧರ್ಮ ಪ್ರಚಾರಕರಾಗಿ ಕೆಲಸ ಮಾಡುವುದಾಗಿದೆ. ಅಂದರೆ ಪ್ರತಿ ಮನೆಯ ಹತ್ತಿರ ಅಡ್ಲಿಕಿ ಹಿಡಿದುಕೊಂಡು ಹೋಗಿ ಹುಲಿಗೆಮ್ಮ ದೇವಿ ನಿನ್ನಾಲ್ಕು ಉಧೋ ಎನ್ನುವುದರ ಮೂಲಕ ಪ್ರತಿಮನೆಗೂ ಹುಲಿಗೆಮ್ಮನ ಮಹಿಮೆಯನ್ನು ಕೊಂಡಾಡುವುದಾಗಿದೆ. ಅಡ್ಲಿಕಿ ಹಿಡಿದುಕೊಂಡು ಹೋದಂತ ಜೋಗತಿಯರಿಗೆ ಪ್ರತಿಮನೆಯವರು ಅಕ್ಕಿಜೋಳವನ್ನು ಇಲ್ಲವಾದರೆ ರೊಕ್ಕವನ್ನು ಹಾಕುತ್ತಾರೆ. ಅಡ್ಲಿಕಿ ಹಿಡಿದುಕೊಂಡು ಹೋಗಿ ಬಂದಂತ ಜೋಗತಿ ಬೇಡಿಕೊಂಡು ಬಂದದ್ದನ್ನು ಅಡಿಗೆ ಮಾಡಿ ತಿನ್ನುವುದಾಗಿದೆ. ಅಂದರೆ ಇವರ ಹೊಟ್ಟೆಗೂ ತುಂಬುತ್ತದೆ. ಪಡ್ಲಿಗಿ ತುಂಬಿದರೆ ತಾಯಿ ಹುಲಿಗೆಮ್ಮಳೂ ತೃಪ್ತಳಾಗುತ್ತಾಳೆ ಎನ್ನುವ ನಂಬಿಕೆ.

ಹುಲಿಗೆಮ್ಮ ಒಲಿದವರಿಗೆ ಯಾವುದೇ ರೀತಿಯ ಉಪವಾಸವನ್ನಿರಿಸದೆ ನಮ್ಮ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ ಈ ಪಡ್ಲಿಕಿಯನ್ನು ಕೊಟ್ಟಿದ್ದಾಳೆ ಎಂದು ಹೇಳುತ್ತಾರೆ. ಆದ್ದರಿಂದ ಯಾವುದೇ ಮದುವೆ ಆಚರಣೆಯಲ್ಲಾಗಲಿ

ಅಥವಾ ಹುಣ್ಣಿಮೆಯಲ್ಲಿ ಪಡ್ಲಿಗಿ ತುಂಬಿಸುವಾಗ ೫ ಜನ ಜೋಗತಿಯರನ್ನು ಕರೆದು ಪಡ್ಲಿಗಿಯನ್ನು ತುಂಬಿಸುತ್ತಾರೆ. ಅವರು ತೃಪ್ತರಾದರೆ ಹುಲಿಗೆಮ್ಮ ತೃಪ್ತಳಾದಂತೆ ಎಂದು ಹೇಳುತ್ತಾರೆ.

ಪಡ್ಲಿಗಿಯನ್ನು ಹಿಡಿದ ಜೋಗತಿಯರು ಯಾವುದೇ ಸುಳ್ಳು ಹೇಳುವ ಹಾಗಿಲ್ಲ. ಪಡ್ಲಿಗಿಯನ್ನು ವರುಷಕ್ಕೊಮ್ಮೆ ಬರುವ ಭರತ ಹುಣ್ಣಿಮೆಯಲ್ಲಿ ಹೆಚ್ಚಾಗಿ ಹುಲಿಗೆಮ್ಮದೇವಿ ಇರುವ ಮನೆಯಲ್ಲಿ ತುಂಬಿಸುತ್ತಾರೆ. ಆ ಪಡ್ಲಿಕಿಯಲ್ಲಿ ಅಕ್ಕಿ, ಜೋಳವನ್ನು ಎರಡರಲ್ಲಿಯೂ ತುಂಬುತ್ತಾರೆ. ಅಲ್ಲದೆ ಅದರಲ್ಲಿರುವ ಎರಡು ಬಟ್ಟಲುಗಳಲ್ಲಿಯೂ ಸಹ ಅಕ್ಕಿ ಜೋಳವನ್ನು ತುಂಬಲಾಗುತ್ತದೆ. ಯಾಕೆಂದರೆ ತಾಯಿ ಹುಲಿಗೆಮ್ಮನಿಗೆ ಮಗನಾದಂತ ಪರಶುರಾಮ ಎಷ್ಟೇ ಕಷ್ಟಕೊಟ್ಟರೂ ತಾಯಿ ಕ್ಷಮಯಾಧರಿತ್ರಿಯಾಗಿ ತನ್ನ ಜೊತೆ ಪರಶುರಾಮನನ್ನು ಕರೆದುಕೊಂಡು ಹೋಗುತ್ತಾಳೆ. ಆದ್ದರಿಂದ ಅಡ್ಲಿಕಿಯಲ್ಲಿ ಎರಡು ಚಿಕ್ಕ ಬಟ್ಟಲುಗಳು ಪರಶುರಾಮ ಎಂದು ಸೂಚಿಸುತ್ತವೆ.

ಭರತ ಹುಣ್ಣಿಮೆಯಂದು ಹುಲಿಗೆಮ್ಮ ಒಕ್ಕಲಾಗಿರುವ ಭಕ್ತರೆಲ್ಲರು ಕೆಲವರು ಮನೆಯಲ್ಲಿಯೇ ಮಡಿಯಿಂದಿದ್ದು ಹೋಳಿಗೆ ಅಥವಾ ಕಡುಬು, ಅನ್ನ, ಸಾರು ಮಾಡಿರುತ್ತಾರೆ. ಪಡ್ಲಿಗಿಯಲ್ಲಿ ಮೂಲಂಗಿ, ಗೆಜ್ಜರಿ, ಹಸಿ ಮೆಣಸಿನಕಾಯಿ, ಈರುಳ್ಳಿ, ಬದನೆಕಾಯಿ, ಹಲವು ತರಹದ ಸೊಪ್ಪುಗಳು ಇವನ್ನೆಲ್ಲ ತುಂಬಿ ಜೊತೆಗೆ ಹೋಳಿಗೆ ಅನ್ನ ಸಾರನ್ನು ಅಡ್ಲಿಕಿಯಲ್ಲಿ ತುಂಬಿಸಿ ಅಂದು ೫ ಜನ ಜೋಗತಿಯರನ್ನು ಕರೆಯಿಸುತ್ತಾರೆ. ಇವರು ಕೂಡ ಅಂದು ೫ ಜನ ಜೋಗತಿಯರನ್ನು ಕರೆಯಿಸುತ್ತಾರೆ. ಇವರು ಕೂಡ ಅಡ್ಲಿಗಿ ತುಂಬಿಸುವ ತನಕ ಉಪವಾಸದಿಂದಿದ್ದು, ಅಡ್ಲಿಗಿಯನ್ನು ತುಂಬಿಸಿದ ಮೇಲೆ ಉಧೋ ಹಾಕುತ್ತಾರೆ. ಉಧೋ ಹಾಕಿದ ಮೇಲೆ ಈ ಜೋಗತಿಯರು ಊಟ ಮಾಡುತ್ತಾರೆ. ಇವರು ಊಟ ಮಾಡಿದರೆ ಹುಲಿಗೆಮ್ಮ ಉಂಡ ಹಾಗೆ ಎಂಬುದು ಜನಪದರ ನಂಬಿಕೆಯಾಗಿದೆ. ಅಲ್ಲದೆ ಕೆಲವರು ನಾಳೆ ಭರತಹುಣ್ಣಿಮೆಯೆಂದರೆ ಹಿಂದಿನ ದಿನದಂದೇ ಹುಲಿಗಿಗೆ ಹೋಗಿ ಹಳೆ ಪಡ್ಲಿಕಿಯನ್ನು ತೆಗೆದುಕೊಂಡು ಹೋಗಿರುತ್ತಾರೆ. ಭರತ ಹುಣ್ಣಿಮೆಯ ದಿನದಂದು ನದಿಯಲ್ಲಿ ಸ್ನಾನ ಮಾಡಿ ಹಳಪಡ್ಲಿಕೆ ಜೊತೆಗೆ ಹೊಸ ಪಡ್ಲಿಕಿಯನ್ನು ಇಟ್ಟು ಪೂಜೆ ಮಾಡುತ್ತಾರೆ. ಅವರು ಮಾಡಿದ ಅಡಿಗೆಯನ್ನೆಲ್ಲಾ ಪಡ್ಲಿಗಿಯಲ್ಲಿಟ್ಟು ಪಡ್ಲಿಗಿಯನ್ನು ತುಂಬಿಸಿ ಲೋಬಾನ ಹಾಕಿ ಕಾಯಿ ಒಡೆದು ೫ ಜನ ಜೋಗತಿಯರನ್ನು ಒಬ್ಬ ಚೌಡಿಕೆಯರನ್ನು ಕರೆಸಿ ಹುಲಿಗೆಮ್ಮ ದೇವಿ ನಿನ್ನಾಲ್ಕು ಉಧೋ, ಹೊಸೂರಮ್ಮ ದೇವಿ ನಿನ್ನಾಲ್ಕುಧೋ, ಎಲ್ಲಮ್ಮ ದೇವಿ ನಿನ್ನಾಲ್ಕುಧೋ, ಮಾರೆಮ್ಮ ನಿನ್ನಾಲ್ಕುಧೋ, ಗಾಳೆಮ್ಮ ನಿನ್ನಾಲ್ಕುಧೋ ಎಂದು ಐವರು ದೇವಿಯರನ್ನು ನೆನೆಯುತ್ತಾ ಪಡ್ಲಿಕಿಯನ್ನು ತುಂಬಿಸುವರು.

ಆಗ ಹಳೆ ಪಡ್ಲಿಕಿಯನ್ನು ಹೊಳೆಯಲ್ಲಿ ಬಿಟ್ಟು ಹೊಸ ಪಡ್ಲಿಕಿಯನ್ನು ತೆಗೆದುಕೊಂಡು ಹೋಗಿ ಮನೆಯಲ್ಲಿಯೇ ಇಟ್ಟು ಪೂಜಿಸುತ್ತಾರೆ. ಪ್ರತಿ ಮಂಗಳವಾರ, ಶುಕ್ರವಾರದಂದು ಜೋಗತಿಯರು ತಲೆಸ್ನಾನ ಮಾಡಿ ಪಡ್ಲಿಕಿಗೆ ಭಂಡಾರ, ಕುಂಕುಮ ಹಚ್ಚಿ ಪೂಜೆ ಮಾಡಿ ನಮಸ್ಕರಿಸುತ್ತಾರೆ. ಅಲ್ಲದೆ ಕೆಲವರ ಮನೆಯಲ್ಲಿ ಪಡ್ಲಿಕಿಯನ್ನು ಹಿಡಿದುಕೊಂಡು ಹೋಗಿ ಐದು ಮನೆ ಆಡಿಕೊಂಡು ಬರುವ ಪದ್ಧತಿ ಇರುತ್ತೆ. ಇನ್ನು ಕೆಲವರ ಮನೆಯಲ್ಲಿ ಆಡಿಕೊಂಡು ಬರದೆ ಮನೆಯಲ್ಲಿ ಪಡ್ಲಿಕಿ ಇಟ್ಟು ಉಧೋ ಹಾಕುವ ಪದ್ಧತಿ ಇರುತ್ತೆ. ಆದಕಾರಣ

ಮನೆಯಲ್ಲಿ ಪಡ್ಲಿಕಿ ಇರುವ ಜೋಗತಿಯರು ಮನೆಯಲ್ಲಿ ಆಗ ಈಗ ಮೈಲಿಗೆ, ಮುಟ್ಟು-ಚಟ್ಟು ಆದಾಗ ಪಡ್ಲಿಕಿಯನ್ನು ಹುಲಿಗೆಮ್ಮನಿಗೆ ಹೊಳೆಯಲ್ಲಿ ಬಿಟ್ಟು ಮತ್ತೆ ಹೊಸ ಪಡ್ಲಿಕಿಯನ್ನು ತೆಗೆದುಕೊಂಡು ಪೂಜೆ ಮಾಡಿಸಿ ಮನೆಯಲ್ಲಿ ತಂದಿಡುತ್ತಾರೆ. ಇದು ಅಲ್ಲದೆ ಒಟ್ಟಾರೆ ವರುಷಕ್ಕೊಮ್ಮೆ ಭರತ ಹುಣ್ಣಿಮೆಗೆ ಮನೆಯನ್ನೆಲ್ಲಾ ಶುಚಿ ಮಾಡಿ ತಾವು ಶುಚಿಯಾಗಿ ಹುಲಿಗಿಗೆ ಹೋಗಿ ಹಳೆ ಪಡ್ಲಿಕಿಯನ್ನು ನೀರಿನಲ್ಲಿ ತೊಳೆದು ಹೊಸಪಡ್ಲಿಗಿ ಜೊತೆ ಹಳೆ ಪಡ್ಲಗಿಗೂ ಭಂಡಾರ ಕುಂಕುಮ ಹಚ್ಚಿ ಪೂಜೆ ಮಾಡಿ ಹಳೆಯದನ್ನು ಹೊಳೆಯಲ್ಲಿ ಬಿಡುತ್ತಾರೆ. ಆಗ ಹೊಸದನ್ನು ತರುತ್ತಾರೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ತಿಳಿದು ಬಂದ ಮಾಹಿತಿಯ ಪ್ರಕಾರ ಭಾರತ ಹುಣ್ಣಿಮೆಯಲ್ಲಿ ಮಾತ್ರವಲ್ಲದೆ ಬಿಂದುಣಿಮೆಯೆಂದು ಕೂಡ ಪಡ್ಲಿಕಿಯನ್ನು ತುಂಬಿಸುತ್ತಿದ್ದರು. ಆಗ ಜನರನ್ನು ಸಂದರ್ಶಿಸಿದಾಗ ದೇವಿ ಹುಲಿಗೆಮ್ಮ ಹೊಸ್ತಿಲ ಹುಣ್ಣಿಮೆಗೆ ರಂಡೆ ಆಗಿರುತ್ತಾಳೆ ಎಂದು ಹೇಳುತ್ತಾರೆ. ಅಲ್ಲದೆ ಇನ್ನು ಕೆಲವರು ಎಲ್ಲಮ್ಮ ಅಂದು ರಂಡೆಯಾಗಿದ್ದರೂ ಹುಲಿಗೆಮ್ಮ ಮಾತ್ರ ರಂಡೆಯಾಗಿರುವುದಿಲ್ಲವೆಂದು ಹೇಳುತ್ತಾರೆ. ಆದಾಗ್ಯೂ ಹುಲಿಗೆಮ್ಮ ರಂಡೆಯಾಗಿರುವುದರ ಸಂಕೇತವಾಗಿ ಬಂಧುಣ್ಣಿಮೆ ತನಕ ಯಾವುದೇ ರೀತಿಯಾದ ಪೂಜೆ ಪುನಸ್ಕಾರಗಳು ಇರುವುದಿಲ್ಲ. ಬಂಧುಣ್ಣಿಮೆಗೆ ಆಕೆಗೆ ಗೊಡಚಿ ಈರಣ್ಣ ಪಡ್ಲಿಕಿಯಲ್ಲಿ ಸೀರೆ, ರವಿಕೆಯನ್ನು, ಬಳೆ, ಅರಿಶಿಣ, ಕುಂಕುಮವನ್ನು ಕಳಿಸಿರುತ್ತಾನೆ. ಆದ್ದರಿಂದ ಅಂದು ಎಲ್ಲಾ ಜೋಗತಿಯರು ಹಸಿರುಬಳೆಯನ್ನು ತೊಟ್ಟು, ಹೊಳೆಯಲ್ಲಿ ಹಳೆ ಪಡ್ಲಿಕಿಯೊಂದಿಗೆ ಹೊಸ ಪಡ್ಲಿಕಿಯನ್ನಿಟ್ಟು ಅದರಲ್ಲಿ ಮಡಿಯಿಂದ ಮಾಡಿದ ಆಹಾರ ಪದಾರ್ಥಗಳನ್ನು ತುಂಬಿ ಪೂಜೆ ಮಾಡುತ್ತಾರೆ.

ಇನ್ನೂ ಕೆಲವರು ಪಡ್ಲಿಕಿ ಜೊತೆಗೆ ತುಂಬಿದ ಎಳೆನೀರು ಕಾಯಿಯನ್ನಿಟ್ಟು ಪೂಜೆ ಮಾಡುತ್ತಾರೆ. ಯಾಕೆಂದು ಕೇಳಿದರೆ ಆ ಕಾಯಿ ಲಕ್ಷ್ಮಿಯ ಸಂಕೇತ. ಅದನ್ನು ಮನೆಯ ತಲಬಾಗಿಲ ಮೇಲೆ ಕಟ್ಟುತ್ತೇವೆ. ಪ್ರತಿ ಆರು ತಿಂಗಳಿಗೊಮ್ಮೆ ಬಂದು ಇಲ್ಲಿ ಪೂಜಿಸಿ ಹೊಳೆಯಲ್ಲಿ ಬಿಟ್ಟು ಮತ್ತೆ ಹೊಸದನ್ನು ಪೂಜಿಸಿ ಮನೆಯಲ್ಲಿ ಕಟ್ಟುತ್ತೇವೆ. ಇದರಿಂದ ಮನೆಯು ಸಮೃದ್ಧಿಯಾಗುತ್ತದೆ. ಯಾವುದೇ ಗೃಹಗತಿಗಳು ಸಂಭವಿಸುವುದಿಲ್ಲ ಎಂದು ಹೇಳುವರು.

ಪಡ್ಲಿಕಿಯಲ್ಲಿ ಹಸಿ ಪಡ್ಲಿಕಿ ಎಂದು ಕರೆಯುತ್ತಾರೆ. ಈ ಪಡ್ಲಿಕಿಯಲ್ಲಿ ಯಾವುದೇ ತರಕಾರಿ ಪಲ್ಯೆಗಳನ್ನು ತುಂಬದೆಯೇ ಅಕ್ಕಿ, ಜೋಳವನ್ನಷ್ಟೇ ತುಂಬುವುದಾಗಿದೆ. ಈ ಪದ ಇಷ್ಟು ದಿನ ಕೇಳದಿದ್ದರೂ ಬ್ರಾಹ್ಮಣರ ಮನೆಯಲ್ಲಿ ಈ ತರಹ ಇದೆ. ಆಗ ಮನೆಯಲ್ಲಿ ಯಾವುದೇ ಅಡಿಗೆ ಮಾಡದೆಯೆ ಕೇವಲ ಅಕ್ಕಿ, ಜೋಳ ತುಂಬುವುದು ಮತ್ತು ಮನೆಯವರಷ್ಟೇ ಊಟ ಮಾಡುವುದಾಗಿದೆ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎನ್ನುವ ರೀತಿಯಲ್ಲಿ ಒಂದು ವೇಳೆ ತವರಿಗೆ ಬಂದ ಹೆಣ್ಣುಮಗಳು ಊಟ ಮಾಡುವ ಹಾಗಿಲ್ಲ, ಕೇವಲ ಮನೆಯವರಷ್ಟೇ ಊಟ ಮಾಡುವುದಾಗಿದೆ.

ಅಡ್ಲಿಕಿಯನ್ನು ಒಕ್ಕಲು ಮನೆದೇವರಲ್ಲದೆ ಹರಕೆಹೊತ್ತವರು ಸಹ ಹುಲಿಗಿ ಕ್ಷೇತ್ರಕ್ಕೆ ಹೋಗಿ ಮಡಿಯಿಂದ ಸ್ನಾನ ಮಾಡಿ ಅಲ್ಲಿಯೇ ಅಡಿಗೆ ಮಾಡಿ ಪಡ್ಲಿಕಿ ತುಂಬಿಸುತ್ತಾರೆ. ಇನ್ನು ಕೆಲವರು ಹೊಸ ಪಡುಗ ತಂದು ಹೊಳೆಯಲ್ಲಿ ತೊಳೆದು ತಾವೂ ಸ್ನಾನ ಮಾಡಿ ಹೊಸ ಪಡುಗದಲ್ಲಿ ಹೊಳೆಯ ನೀರನ್ನು ತುಂಬಿ ಹೆಣ್ಣುಮಗಳ ತಲೆಯ ಮೇಲೆ ಹೊರಿಸಿಕೊಂಡು ದೇವಸ್ಥಾನಕ್ಕೆ ಬಂದು ನಮಸ್ಕರಿಸಿ, ತಾವು ಉಳಿದುಕೊಂಡಿರುವ ಜಾಗದಲ್ಲಿ

ಮಡಿಯಿಂದ ಅಕ್ಕಿಯ ಪಾಯಸ ಮಾಡುತ್ತಾರೆ. ಅಕ್ಕಿಯಪಾಯಸವೆಂದರೆ ಹುಲಿಗೆಮ್ಮನಿಗೆ ಬಹಳ ಇಷ್ಟವಾದುದರಿಂದ ಹೊಸ ಪಡುಗದಲ್ಲಿ ಮಾಡಿದ ಪಾಯಸವನ್ನು ಪಡ್ಲಿಕಿಗೆ ತುಂಬಿಸುತ್ತಾರೆ.

ಭರತ ಹುಣ್ಣಿಮೆಯಂದು ಕೆಲವು ಜೋಗಮ್ಮನವರಿಗೆ ಹರಕೆ ಹೊತ್ತವರು ಆ ದಿನ ಹೊಸ ಪಡ್ಲಿಕೆಯನ್ನು ಕೊಡಿಸುತ್ತಾರೆ. ಇದೊಂದು ಸಂಪ್ರದಾಯವಾಗಿರಬಹುದು ಅಥವಾ ಜೋಗತಿಯರಿಗೆ ಪಡ್ಲಿಕೆಯನ್ನು ದಾನ ಮಾಡಿ ಸಹಾಯ ಮನೋಭಾವವನ್ನು ಪ್ರದರ್ಶಿಸುವುದಾಗಿರಬಹುದಾಗಿದೆ. ಕೆಲವರು ಭರತ ಹುಣ್ಣಿಮೆಯಂದು ಪಡ್ಲಿಕಿಯನ್ನು ತುಂಬಿಸಿದರೆ ಇನ್ನೂ ಕೆಲವರು ಭರತ ಹುಣ್ಣಿಮೆಯ ನಂತರದ ಅಮವಾಸ್ಯೆಯೊಳಗೆ ಅಂದರೆ ೧೫ ದಿನದ ಒಳಗೆ ಮಂಗಳವಾರ ತಪ್ಪಿದರೆ ಶುಕ್ರವಾರ ಪಡ್ಲಿಕಿ ತುಂಬಿಸುವುದನ್ನು ಕಾಣಬಹುದಾಗಿದೆ.

ಪಡ್ಲಿಕಿಯನ್ನು ಹೆಚ್ಚಾಗಿ ಗಂಡು ಮಕ್ಕಳ ಮದುವೆಯಲ್ಲಿ ತುಂಬಿಸುತ್ತಾರೆ. ದೇವರೂಟದ ದಿನದಂದು ಮಧುಮಗನನ್ನು ಮಾಡಿ ಹುಲಿಗೆಮ್ಮ ಅಥವಾ ಎಲ್ಲಮ್ಮಳ ಹೆಸರಲ್ಲಿ ಪೂಜೆ ಮಾಡಿ ಪಡ್ಲಿಕಿ ತುಂಬಿಸುತ್ತಾರೆ. ಯಾಕೆಂದರೆ ಹುಲಿಗೆಮ್ಮ ತೃಪ್ತಳಾದರೆ ಮದುವೆ ಚೆನ್ನಾಗಿ ನಡೆಯುತ್ತದೆಯಲ್ಲದೆ ಗಂಡುಮಗನ ಮದುವೆಗೆ ತುಂಬಿಸುವುದೆಂದರೆ ಹುಲಿಗೆಮ್ಮ ಮನೆಯಲ್ಲಿ ಸ್ಥಿರವಾಗಿ ನೆಲೆಸಿದ ಹಾಗೆ ಅಂದರೆ ಬರುವ ಸೊಸೆ ಹೊಂದಾಣಿಕೆಯಿಂದ ಮನೆಯಲ್ಲಿ ಸ್ಥಿರವಾಗಿ ಇರುವಿಕೆಯ ಸಂಕೇತ ಎಂದು ಹೇಳಲಾಗುತ್ತದೆ. ಹೆಣ್ಣುಮಕ್ಕಳ ಮದುವೆಗೆ ಮಾತ್ರ ಪಡ್ಲಿಕಿ ತುಂಬಿಸುವ ಕಾರ್ಯಕ್ರಮವಿರುವುದಿಲ್ಲ. ಯಾಕೆಂದರೆ ಆಕೆ ಹೊರಗೆ ಹೋಗುವವಳೇ ಆದ್ದರಿಂದ ಹುಲಿಗೆಮ್ಮ ಹೊರಗೆ ಹೋಗಬಾರದೆಂದು ಹೆಣ್ಣುಮಕ್ಕಳ ಮದುವೆಗೆ ಪಡ್ಲಿಕಿ ತುಂಬಿಸುವುದಿಲ್ಲವೆಂದು ತಿಳಿದುಬರುತ್ತದೆ.

ಪಡ್ಲಿಕಿಯಲ್ಲಿ ಹಸಿ ಪಡ್ಲಿಕಿ ಮತ್ತು ಬಿಸಿ ಪಡ್ಲಿಕಿ ಎಂದು ಎರಡು ರೀತಿಯಾಗಿ ವರ್ಗೀಕರಿಸಲಾಗಿದೆ. ಹಸಿ ಪಡ್ಲಿಕಿಯ ಬಗೆಗೆ ಈ ಹಿಂದೆಯೇ ವಿವರಿಸಲಾಗಿದೆ. ಇನ್ನು ಬಿಸಿ ಪಡ್ಲಿಕಿ ಎಂದರೆ ಬೇಯಿಸಿದ ಬೇಯಿಸಿದ ಆಹಾರ ಪದಾರ್ಥಗಳನ್ನು ತುಂಬಿಸಿದ್ದು ಎಂದರ್ಥ. ಹಸಿ ಪಡ್ಲಿಕಿ ಎಂದರೆ ಕಚ್ಚಾ ಪದಾರ್ಥಗಳಿಂದ ತುಂಬಿಸಿದ್ದಾಗಿದೆ. ಉದಾಹರಣೆಗೆ, ಅಕ್ಕಿ, ಜೋಳ, ಹಸಿರು ಸೊಪ್ಪುಗಳು ಇತ್ಯಾದಿಗಳಿಂದ ತುಂಬಿಸಲಾಗುತ್ತದೆ. ಬ್ರಾಹ್ಮಣರ ಹೇಳಿಕೆಯ ಪ್ರಕಾರ ಅವರು ತಾವು ಮಡಿಯಿಂದಿದ್ದು ಮೊದಲು ತಮ್ಮ ಊಟವಾದ ಮೇಲೆಯೇ ಬೇರೆಯವರು ಊಟಮಾಡುತ್ತಾರೆ. ಆದರೆ ಇಲ್ಲಿ ಅವರು ಮುಟ್ಟಿದ್ದನ್ನು ನಾವು ಮುಟ್ಟುವ ಹಾಗಿಲ್ಲ. ಅದಕ್ಕೆ ನಾವು ಕಚ್ಚಾಪದಾರ್ಥಗಳಿರುವ ಪಡ್ಲಿಕಿಯನ್ನು ಅವರಿಗೆ ಕೊಡುತ್ತೇವೆ. ಇನ್ನು ಬಿಸಿ ಪಡ್ಲಿಕಿ ಎಂದರೆ ಬೇಯಿಸಿದ್ದು. ಆಗಲೂ ತಾವು ಜೋಗಮ್ಮನ ಕರೆಸಿಯೇ ಪೂಜೆ ಮಾಡುತ್ತೇವೆ ಎಂದಾದಾಗ ಇಲ್ಲಿ ಎಷ್ಟಾದರೂ ದೇವದಾಸಿ ಮಹಿಳೆ ಬಂದು ಉಧೋ ಹಾಕಲೇ ಬೇಕಲ್ಲವೆ. ಆದರೂ ಅವರು ಮುಟ್ಟಿದ್ದ ಅಂತಾರೆ. ಇಲ್ಲಿ ಬ್ರಾಹ್ಮಣರ ಮೇಲುಕೀಳಿನ ತಾರಮತಮ್ಯದಿಂದಾಗಿ ಹಸಿಪಡ್ಲಿಕಿ, ಬಿಸಿಪಡ್ಲಿಕಿ ಎಂಬ ಬೇಧ ಮಾಡಲಾಗುತ್ತದೆಯೆನಿಸುತ್ತದೆ.

ಇನ್ನು ಹೆಣ್ಣುಮಕ್ಕಳ ಮದುವೆಗೆ ಕೆಲವು ಜನಾಂಗಗಳಲ್ಲಿ ಮಧುಮಗಳು ಹುಲಿಗೆಮ್ಮನ ಪೂಜೆಯನ್ನು ಮಾಡಿ ಮದುಮಗಳ ಕೈಯಿಂದ ಆಕೆಗೆ ಆರತಿಯನ್ನು ಬೆಳಗಿಸಿ ಪಡ್ಲಿಕಿಗೂ ಪೂಜೆ ಸಲ್ಲಿಸುತ್ತಾಳೆ. ಒಟ್ಟಾರೆ ಮದುವೆಗೂ ಹೆಣ್ಣು, ಗಂಡೆಂಬ ಬೇಧವಿಲ್ಲದೆ ದೇವಿಯ ಪೂಜೆ ಮೊದಲು ಎನ್ನುವ ಅಂಶವನ್ನು ಕಾಣಬಹುದು. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಭರತ ಹುಣ್ಣಿಮೆಯಂದು ಹೊಸಮಧುಮಗಳ ಕೈಯಲ್ಲಿ

ಹೊಳೆಗೆ ಪೂಜೆ ಮಾಡಿಸಿ ಆ ಹೊಳೆಯಿಂದ ಹೊಸ ಮಡಿಕೆಯಲ್ಲಿ ನೀರನ್ನು ತುಂಬಿಸಿಕೊಂಡು ಬಂದು ಅದೇ ನೀರಿನಿಂದ ಪಾಯಸ ಮಾಡಿ ಪಡ್ಲಿಕಿಯನ್ನು ತುಂಬಿಸುತ್ತಾರೆ.

ಪಡ್ಲಿಕಿಯನ್ನು ತುಂಬಿಸುವಾಗ ಮನೆಮಂದಿಯೆಲ್ಲಾ ಮಡಿಯಿಂದಿದ್ದು ಇಬ್ಬರು ಜೋಗಮ್ಮರನ್ನು ಒಬ್ಬ ಚೌಡಿಕೆಯವರನ್ನು ಕರೆಯಿಸುತ್ತಾರೆ. ಅವರು ಬಂದು ಪಡ್ಲಿಕಿ ಹತ್ತಿರ ಉಧೋ ಉಧೋ ಹುಲಿಗೆಮ್ಮ ನಿಲ್ಕಾಲುಧೋ... ಉಧೋ... ಎಂದು ಐದು ದೇವಿಯರ ಹೆಸರೇಳುತ್ತ ಲೋಭಾನ ಹಾಕಿ ಪೂಜೆ ಮಾಡುವರು. ನಂತರ ಜೋಗಮ್ಮನವರು ಉಂಡು ಹೋಗಬೇಕಾದರೆ ಹಿಂದೆ ತಿರುಗಿ ನೋಡದೆ ಜೋಳವನ್ನು ಎರಚುತ್ತಾ ಹೋಗುತ್ತಾರೆ. ಅಂದರೆ ಹುಲಿಗೆಮ್ಮ ತೃಪ್ತಳಾದಳು, ಇನ್ನು ನಿಮ್ಮ ಮನೆ ಸುಖ ಸಮೃದ್ಧಿಯನ್ನು ಹೊಂದಲಿ ಎಂದು ಜೋಳವನ್ನು ಎರಚಲಾಗುತ್ತದೆ. ಆ ಜೋಳವನ್ನು ಮನೆಯವರು ಮುತ್ತು ಹವಳಗಳೆಂದು ಆರಿಸಿಕೊಳ್ಳುತ್ತಾರೆ.

ಹೆಚ್ಚಾಗಿ ಭರತ ಹುಣ್ಣಿಮೆಯಲ್ಲಿಯೇ ಯಾಕೆ ಪಡ್ಲಿಕಿಯನ್ನು ತುಂಬಿಸುತ್ತಾರೆಂದರೆ ದೇವಿ ಭರತ ಹುಣ್ಣಿಮೆಗೆ ಮುತ್ತೈದೆಯಾಗುತ್ತಾಳೆನ್ನುವುದು ಒಂದು ನಂಬಿಕೆ. ಇನ್ನೊಂದು ಸುಗ್ಗಿಕಾಲದ ಪ್ರಾರಂಭ, ಸಂಕ್ರಮಣದಿಂದ ಹೊಸ ಹೊಸ ಧಾನ್ಯಗಳು ಬಂದಿರುತ್ತವೆಂದು ಹೊಸ ಕಾಳನ್ನು ಪಡ್ಲಿಕಿ ತುಂಬಿಸುವುದರಿಂದಲೇ ನಾವು ಬಳಸೋಣ ಎಂದು ಹೊಸ ಧಾನ್ಯಗಳನ್ನು ಬೇಯಿಸಿ ಪಡ್ಲಿಕಿ ತುಂಬಿಸಿ ದೇವಿಗೆ ಅರ್ಪಿಸಿ ನಮಸ್ಕರಿಸುವುದು ಮತ್ತೆ ಮೊದಲು ದೇವಿಗೆ ನಂತರ ನಮಗೆ, ಆಕೆ ತೃಪ್ತಳಾಗಿ ವರಕೊಟ್ಟರೆ ಮಾತ್ರ ನಾವು ಒಳ್ಳೆ ಫಲ, ಒಳ್ಳೆ ಬೆಳೆಯನ್ನು ಕಾಣಬಹುದೆಂದು ಭರತ ಹುಣ್ಣಿಮೆಗೆ ಹೆಚ್ಚಾಗಿ ಈ ಆಚರಣೆಯನ್ನು ಆಚರಿಸಲಾಗುತ್ತದೆ. ಅಲ್ಲದೆ ಪುಷ್ಯ ಮತ್ತು ಮಾಘ ಮಾಸಗಳ ಮಧ್ಯೆ ಸಾಕಷ್ಟು ದೇವತೆಗಳ ಜಾತ್ರೆಗಳು ಬರುವುದರಿಂದಲೂ ಭರತ ಹುಣ್ಣಿಮೆಯಲ್ಲಿ ಪಡ್ಲಿಕೆ ತುಂಬಿಸುವ ಆಚರಣೆಯನ್ನು ಮಾಡುತ್ತಾರೆ. ಒಟ್ಟಾರೆಯಾಗಿ ಪಡ್ಲಿಕಿ ತುಂಬಿಸುವುದೇ ಒಂದು ತರಹದ ಜಾತ್ರೆಯಾಗಿ ಹುಲಿಗೆಮ್ಮನ ಕ್ಷೇತ್ರದಲ್ಲಿ ಕಾಣುತ್ತೇವೆ. ಜನ ಎಲ್ಲೆಲ್ಲಿಂದಲೋ ಬಂದು ಇಲ್ಲಿ ಪಡ್ಲಿಕಿ ತುಂಬಿಸುತ್ತಾರೆ.

**ನಂಬಿಕೆಗಳು**

ನಂಬಿಕೆಗಳು ವ್ಯಕ್ತಿಯ ಜೀವನದಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುತ್ತವೆ. ಇವುಗಳು ವ್ಯಕ್ತಿಯ ಮನಸ್ಸಿನ ಮೇಲೆ ಪ್ರಭಾವವನ್ನುಂಟು ಮಾಡಿ ಆ ಮೂಲಕ ವ್ಯಕ್ತಿ ಕಾರ್ಯೋನ್ಮುಖವಾಗುವಂತೆ ಪ್ರೇರೇಪಿಸುತ್ತವೆ. ಇಂಥ ನಂಬಿಕೆಗಳು ವ್ಯಕ್ತಿಯ ಮುನ್ನೆಡೆಗೆ ತೊಡಕು ಆಗಬಹುದು. ನಂಬಿಕೆಗಳನ್ನು ನಾವು ನೋಡಿದಾಗ ಒಂದು ರೀತಿಯಲ್ಲಿ ಜನಪದರ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಂತಿರುತ್ತವೆ. ಜನಪದರ ಪ್ರತಿಯೊಂದು ಕೆಲಸ, ಕಾರ್ಯ, ಆಲೋಚನೆ, ರೂಢಿ, ಸಂಪ್ರದಾಯ, ಜೀವನ ಕ್ರಮಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಅದರ ಉಪನಂಬಿಕೆಗಳಿಂದ ಆಧಾರ ಪಡೆದಿವೆ.

### ನಂಬಿಕೆಗಳ ಕುರಿತಾದ ವ್ಯಾಖ್ಯೆಗಳು

**ಹ್ಯೂಮ್:** ಮನುಷ್ಯನಿಗೆ ವಿಚಾರ ಮಾಡುವ ಶಕ್ತಿ ಇದ್ದುದರಿಂದ ಅವನು ಹೊಸ ಹೊಸ ಕಲ್ಪನೆಗಳನ್ನು ಹೆಣೆಯುತ್ತಾನೆ. ಭಾವನೆಗಳನ್ನು ಹೊಸೆಯುತ್ತಾನೆ. ಅವು ಆತನ ಭಾಷೆ ಅಭಿವ್ಯಕ್ತಿಗೊಂಡಾಗ ಸಹಜವಾಗಿ ಹೊರ ಹೊಮ್ಮುತ್ತವೆ. ಇಂಥ ವಿಶಿಷ್ಟ ರೀತಿಯ ಭಾವನೆಗಳೇ ಜನಪದ ನಂಬಿಕೆಗಳು.

**ಬೇನ್:** ಕೇವಲ ಕಾಲ್ಪನಿಕ ವಿಷಯಗಳಲ್ಲಿ ಮಾತ್ರ ನಂಬಿಕೆಗೆ ಸ್ಥಾನವಿದೆ.

**ಅಲೆನ್ ವಾಟ್ಸ್:** ನಂಬಿಕೆಯು ಒಂದು ಆಸಕ್ತಿ. ಅದು ಸತ್ಯಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುವ ಅಧೀನಗೊಳಿಸುವ ಶ್ರದ್ಧೆಗೆ ವಿರೋಧವಾದುದು.

**ಬಗೇಹಾಟ:** ಭಾವನೆಗಳ ಸಂಕೇತ ಎಂದು ಹೇಳಿ ಇವು ಮಾನಸಿಕ ಅನುಭವಗಳ ಪ್ರಥಮಘಟವೆಂದಿದ್ದಾರೆ.

### ನಂಬಿಕೆ ಮತ್ತು ಜನಜೀವನ ಸಂಬಂಧ

ನಂಬಿಕೆಗಳು ಜನಪದರ ಜೀವನದಲ್ಲಿ ತುಂಬಾ ಗಣನೀಯವಾದ ಪಾತ್ರವನ್ನು ವಹಿಸುತ್ತವೆ. ಹಾಗೆಯೇ ನಂಬಿಕೆಗಳು ಜನಪದರ ಜೀವನಕ್ಕೆ ನೇರವಾದ ಸಂಬಂಧವನ್ನು ಹೊಂದಿವೆ. ನಂಬಿಕೆಯು ಜನಪದರಿಗೆ ಕಷ್ಟ ಕಾರ್ಪಣ್ಯಗಳನ್ನು ಹಗುರಗೊಳಿಸುವುದರ ಜೊತೆಗೆ ಅವುಗಳನ್ನು ಅಪ್ಯಾಮಾನವಾಗಿಯೂ ಮಾಡುತ್ತವೆ. ದೇವರಲ್ಲಿ ಮನುಷ್ಯನು ಅತ್ಯಂತ ಹೆಚ್ಚಿನ ಸಾಂತ್ವನ ಮತ್ತು ಬೆಂಬಲವನ್ನು ನಂಬಿಕೆಯಿಂದ ಪಡೆಯಬಹುದು.

ದೇವರಿಲ್ಲದಿದ್ದರೆ ಮಾನವ ಸಂಪೂರ್ಣವಾಗಿ ತನ್ನನ್ನು ತಾನು ಆಶ್ರಯಿಸಬೇಕಾಗುತ್ತದೆ. ಭೀಕರ ಪ್ರವಾಹ ಮತ್ತು ಬಿರುಗಾಳಿಗಳ ನಡುವೆ ಒಬ್ಬ ವ್ಯಕ್ತಿ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವುದು ಹುಡುಗಾಟವಲ್ಲ. ಒಬ್ಬನಲ್ಲಿ ಅಹಂಕಾರವೇನಾದರೂ ಇದ್ದರೆ ಅಂತಹ ಪರೀಕ್ಷೆಯ ಲಕ್ಷಣಗಳಲ್ಲಿ ಅದು ಕರಗಿಹೋಗುತ್ತದೆ.

ನಂಬಿಕೆಗಳು ವ್ಯಕ್ತಿಯ ಬೆಳವಣಿಗೆಯಲ್ಲಿ ತುಂಬಾ ಪ್ರಭಾವ ಬೀರುತ್ತವೆ. ವ್ಯಕ್ತಿ ಚಿಕ್ಕವನಿದ್ದಾಗ ಯಾವ ರೀತಿಯ ನಂಬಿಕೆಗಳನ್ನು ಬೆಳೆಸಿಕೊಂಡಿರುತ್ತಾನೆಯೋ ಅದೇ ರೀತಿ ಬೆಳೆಯುತ್ತಾನೆ. ಅಂದರೆ ನಂಬಿಕೆಗಳು ಹೇಗಿರುತ್ತವೆಯೋ ಹಾಗೆಯೇ ವ್ಯಕ್ತಿತ್ವವಾಗಿರುತ್ತದೆ. ಉದಾಹರಣೆಗೆ, ದೊಡ್ಡವರು, ಹಿರಿಯರ ಬಗೆಗೆ ಭಕ್ತಿ ಗೌರವಗಳನ್ನು ಮೊದಲಿನಿಂದ ನಂಬಿ ಅವುಗಳನ್ನು ಬೆಳೆಸಿಕೊಂಡು ಬಂದ ವ್ಯಕ್ತಿಯು ದೇವರು ಮತ್ತು ಹಿರಿಯರಲ್ಲಿ ಭಕ್ತಿ ಗೌರವದಿಂದ ಇರುತ್ತಾನೆ.

### ಹುಲಿಗೆಮ್ಮ ದೇವಿಯ ಬಗೆಗಿರುವ ನಂಬಿಕೆಗಳು

ಪ್ರೀತಿಯ ಮಾತಿಗೆ ಸೋಲುವ ತಾಯಿ ಹುಲಿಗೆಮ್ಮ ಎಂದು ಭಕ್ತರು ಬೇಡಿದ್ದನ್ನು ಕೊಡುವಾಕೆ ಈಕೆ ಎಂಬ ನಂಬಿಕೆಯಿಂದ ಭಕ್ತರು ಈಕೆಯನ್ನು ಇಂದಿಗೂ ಸಾಕಷ್ಟು ನಂಬುತ್ತಾರೆ. ಬೇಡಿದ್ದನ್ನು ಪೂರೈಸುವ ತಾಯಿ ಈಕೆ ಒಲಿದರೆ ಮಾಯಕಾತಿ ಇಲ್ಲವಾದರೆ ಇದಿಮಾಯಿ (ವಿಧಿಮಾಯಿ) ಎನ್ನುವ ಮಾತನ್ನು ಜನಪದರು

ಆಡುಮಾತಿನಲ್ಲಿ ಕಂಡುಕೊಳ್ಳುತ್ತಾರೆ. ಈಕೆಯನ್ನು ನಂಬಿದರೆ ಎಂತಹ ಕಷ್ಟಗಳೂ ಪರಿಹಾರವಾಗುತ್ತವೆ ಎಂದು ನಿತ್ಯ ಪೂಜಿಸುತ್ತಾರಲ್ಲದೆ, ಪ್ರತಿ ಮಂಗಳವಾರ ಮತ್ತು ಶುಕ್ರವಾರ ಈಕೆಯನ್ನು ಪೂಜಿಸುತ್ತಾರೆ.

ಆರಂಭದಲ್ಲಿ ಕೆಳವರ್ಗದ ಜನತೆಗೆ ಮಾತ್ರ ಸೀಮಿತವಾಗಿದ್ದ ಹುಲಿಗೆಮ್ಮ ಕ್ರಮೇಣ ಎಲ್ಲ ಸಮುದಾಯಗಳ ಆರಾಧ್ಯದೈವವಾಗಿ ಮಾರ್ಪಟ್ಟಿದ್ದಾಳೆ. ಬೇರೆ ರಾಜ್ಯದವರು ಅದರಲ್ಲೂ ಉತ್ತರ ಭಾರತದವರು ಈಕೆಗೆ ಹೆಚ್ಚಾಗಿ ನಡೆದುಕೊಳ್ಳುತ್ತಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿರುವಂತೆ ಪ್ರತಿ ಮಂಗಳವಾರದಂದು ಹೆಚ್ಚಾಗಿ ಮಹಾರಾಷ್ಟ್ರದವರು ಇಲ್ಲಿಗೆ ಬಂದು ಬ್ಯಾಟೆಯನ್ನು ಮಾಡುವುದು ಗೋಚರಿಸುತ್ತದೆ. ಪ್ರಾದೇಶಿಕವಾಗಿ ಯಾವುದೇ ಒಂದು ಭಾಗದ ಜನಾಂಗವಷ್ಟೇ ಈ ದೈವವನ್ನು ಆರಾಧಿಸದೆ ಎಲ್ಲ ಭಾಗದ ಜನರೂ ಆರಾಧಿಸುವುದು ವಿಶೇಷವಾಗಿದೆ.

ಪ್ರತಿ ಮಂಗಳವಾರ ಮತ್ತು ಶುಕ್ರವಾರಗಳಂದು ಇಲ್ಲಿ ಬೇಟೆಯಾಗಲೇ ಬೇಕು. ಅಂದರೆ ಪ್ರಾಣಿಯನ್ನು ಬಲಿನೀಡುವುದಾಗಿದೆ. ಒಂದು ವೇಳೆ ಹುಣ್ಣಿಮೆಯಿದ್ದರೂ ಕೂಡ ಬೇಟೆ ಬೀಳಲೇಬೇಕು ಇಲ್ಲದಿದ್ದರೆ ದೇವಿ ಸಂತೃಪ್ತಳಾಗುವುದಿಲ್ಲವೆಂಬ ನಂಬಿಕೆಯಿದೆ. ಅಲ್ಲದೆ ಪ್ರತಿ ಹುಣ್ಣಿಮೆಗೂ ಸಾಕಷ್ಟು ಪ್ರಾಣಿ ಬಲಿ ಮತ್ತು ಜಾತ್ರೆಯಲ್ಲಂತೂ ಸಾವಿರಾರು ಪ್ರಾಣಿಬಲಿಗಳನ್ನು ನಾವು ಕಾಣಬಹುದಾಗಿದೆ. ಸಾಮಾನ್ಯವಾಗಿ ಈ ದೇವಿಯ ಜಾತ್ರೆಯು ಒಂದು ತಿಂಗಳತನಕ ನಡೆಯುವಂತಹುದಾಗಿದೆ. ಕುರುಬರು, ಮಾದಿಗರು, ಬೇಡರು, ಬಣಜಿಗರು, ಬ್ರಾಹ್ಮಣರು, ರಂಗಾರೇರು, ಕಬ್ಬೇರರು, ರಜಪೂತರು, ಜೈನರು (ಮಾರ್ವಾಡಿಗರು), ಮುಸ್ಲಿಮರು ಹೀಗೆ ಈಕೆಯನ್ನು ನಾನಾ ಸಮುದಾಯಗಳವರು ಪೂಜಿಸುವುದನ್ನು ಕಾಣಬಹುದಾಗಿದೆ.

ಈ ದೇವಿಯ ಬಗೆಗಿರುವ ನಂಬಿಕೆಗಳನ್ನು ಕ್ರಮವಾಗಿ ಈ ಕೆಳಗಿನಂತೆ ಪಟ್ಟಿಮಾಡಬಹುದಾಗಿದೆ.

೧. ತಮ್ಮ ಕಷ್ಟ ನಷ್ಟಗಳನ್ನು ಈಡೇರಿಸುತ್ತಾಳೆ.

೨. ವಿದ್ಯಾರ್ಥಿಗಳಿಗೆ ಪರೀಕ್ಷೆಯಲ್ಲಿ ಉತ್ತೀರ್ಣರನ್ನಾಗುವಂತೆ ಮಾಡುತ್ತಾಳೆ.

೩. ಉದ್ಯೋಗವಿಲ್ಲದವರಿಗೆ ಉದ್ಯೋಗ ಕೊಡುತ್ತಾಳೆ.

೪. ಮಕ್ಕಳಾಗದವರಿಗೆ ಮಕ್ಕಳು ಕರುಣಿಸುತ್ತಾಳೆ.

೫. ಮದುವೆಯಾಗದವರಿಗೆ ಬೇಗ ಮದುವೆಯಾಗುವಂತೆ ಮಾಡುತ್ತಾಳೆ.

೬. ಮನದಲ್ಲಿರುವ ಇಷ್ಟಾರ್ಥಗಳನ್ನು ಈಡೇರಿಸುತ್ತಾಳೆ.

೭. ಹೊಲದಲ್ಲಿ ಫಸಲು ಚೆನ್ನಾಗಿ ಬಾರದಿದ್ದಾಗ ಈಕೆ ರಕ್ಷಿಸುತ್ತಾಳೆ.

೮. ಕಾಲು ಹೂನವಾದವರಿಗೆ ವಾಸಿ ಮಾಡಿ ಚೆನ್ನಾಗಿ ಓಡಾಡುವಂತೆ ಮಾಡುತ್ತಾಳೆ.

೯. ಕುಟುಂಬದಲ್ಲಿ ಗಂಡು ಸಂತಾನ ಬೇಕೆಂದರೆ ಕರುಣಿಸುತ್ತಾಳೆ.

೧೦. ಪ್ರಮೋಷನ್ ಕೊಡಿಸುತ್ತಾಳೆ

೧೧. ಕುಷ್ಠರೋಗವನ್ನು ವಾಸಿ ಮಾಡುತ್ತಾಳೆ ಅಥವಾ ಯಾವುದೇ ಕಜ್ಜಿಗಳು, ಚರ್ಮರೋಗಗಳು ಬಾರದ ಹಾಗೆ ರಕ್ಷಿಸುತ್ತಾಳೆ.

೧೨. ಸಮೃದ್ಧವಾಗಿ ಮಳೆ ಬೆಳೆ ಕರುಣಿಸುತ್ತಾಳೆ.

೧೩. ತಾಯಿಯಾದವಳಿಗೆ ಮೊಲೆಹಾಲಿನ ಸಮೃದ್ಧಿಯನ್ನು ಹೆಚ್ಚಿಸುತ್ತಾಳೆ.

**ರೋಗ ಚಿಕಿತ್ಸೆ**

ಜನಪದ ಭಕ್ತರು ಹುಲಿಗೆಮ್ಮಳಿಂದ ಆಪೇಕ್ಷಿಸುವ ಸಂಗತಿಗಳಲ್ಲಿ ರೋಗನಿವಾರಣೆಯೂ ಒಂದು. ಅವಳು ಭಕ್ತರಿಗೆ ಆರಾಧ್ಯ ದೈವ ಹೇಗೋ ಹಾಗೆಯೇ ವೈದ್ಯಳೂ ಹೌದು. ಜನರು 'ದೋಷ' ಪರಿಹಾರಕ್ಕಾಗಿ ಆಕೆಯ ಬಳಿ ಬರುತ್ತಾರೆ. ಈ 'ದೋಷ' ಪದವು ಮೂಲತಃ ವೈದ್ಯ ವ್ಯವಸ್ಥೆಗೆ ಸಂಬಂಧಿಸಿದ್ದಾಗಿದೆ. ಜನರು ತಮ್ಮ ದೈನಂದಿನ ವ್ಯವಹಾರದಲ್ಲಿ 'ದೋಷ' ಎಂದರೆ ಕೆಲವು ಬಗೆಯ ತಪ್ಪುಗಳು ಎಂದು ಭಾವಿಸುತ್ತಾರೆ. ಆಯುರ್ವೇದದಲ್ಲಿ ದೋಷ ಎಂದರೆ ದೈಹಿಕ ವ್ಯವಸ್ಥೆಯಲ್ಲಿನ ಲೋಪಗಳೆಂದು ಅರ್ಥ. ಈ ಲೋಪಗಳು ಪಂಚಭೂತಗಳಿಂದಾಗಿರುತ್ತವೆ ಎಂದು ಆಯುರ್ವೇದ ಭಾವಿಸುತ್ತದೆ. ಆಕಾಶ, ಭೂಮಿ, ಅಗ್ನಿ, ನೀರು ಮತ್ತು ವಾಯುಗಳನ್ನು ಪಂಚಭೂತಗಳೆಂದು ಕರೆದರೆ ಅವುಗಳಲ್ಲಿ ಮೂರು ತ್ರಿದೋಷಗಳಿಗೆ ಕಾರಣವಾಗುತ್ತದೆ. ಅವುಗಳೆಂದರೆ ವಾಯುವಿನಿಂದ ವಾತದೋಷ, ಅಗ್ನಿಯಿಂದ ಪಿತ್ತದೋಷ ಮತ್ತು ನೀರಿನಿಂದ ಕಫದೋಷ ಉಂಟಾಗುತ್ತದೆ. ಇವು ಮೂರು ಸೇರಿದರೆ ಸನ್ನಿಪಾತ ಉಂಟಾಗುತ್ತದೆ.

ಪಂಚಭೂತಗಳನ್ನು ಆಧರಿಸಿಯೇ ಇಲ್ಲಿನ ದೋಷ ಚಿಕಿತ್ಸೆ ಕಾರ್ಯಗಳು ಮುಂದುವರೆಯುತ್ತವೆ. ಇದರಲ್ಲಿ ಬೆಂಕಿ ಮತ್ತು ನೀರೇ ಪ್ರಧಾನವಾಗಿರುತ್ತವೆ. ಕ್ಷಾಮವು ಬೆಳೆಗಳನ್ನು ಸುಟ್ಟುಹಾಕುತ್ತದೆ. ನೀರಿನ ಮೂಲಗಳನ್ನು ಬತ್ತಿಸುತ್ತವೆ. ಬರಗಾಲವನ್ನು ಉಂಟುಮಾಡುತ್ತವೆ. ವಾತಾವರಣದ ಈ ಕ್ಷಾಮವು ದೇಹದ ಮೇಲೆ ಪರಿಣಾಮ ಬೀರುತ್ತದೆ. ಪಿತ್ತವನ್ನು ಹೆಚ್ಚಿಸುತ್ತದೆ. ಪರಿಣಾಮಕಾರಿಯಾಗಿ ವ್ಯಕ್ತಿಯ ಆರೋಗ್ಯ ಅಸ್ತವ್ಯಸ್ತಗೊಳ್ಳುತ್ತದೆ. ಉಷ್ಣತೆಯ ಹೆಚ್ಚಳದ ಕಾರಣವಾಗಿ ಮೈಮೇಲೆ ಬೊಕ್ಕೆಗಳು ಕಾಣಿಸಿಕೊಳ್ಳುತ್ತವೆ. ಪ್ಲೇಗ್ ಹೆಚ್ಚಬಹುದು, ಸಿಡುಬು ಕಾಣಿಸಿಕೊಳ್ಳಬಹುದು. ದಡಾರ ಕಾಣಿಸಿಕೊಳ್ಳಬಹುದು. ಹೀಗೆ ಬಾಹ್ಯ ವಾತಾವರಣದಲ್ಲಿ ಪ್ರಾಕೃತಿಕ ಉತ್ಪಾತಗಳು ಹೆಚ್ಚುತ್ತವೆ. ಬೆಳೆಗಳು ನಾಶವಾಗುತ್ತವೆ. ಭೂಮಿ ಕೊಚ್ಚಿಹೋಗುತ್ತದೆ. ಇವು ದೇಹದ ಮೇಲೆ ಪರಿಣಾಮ ಬೀರಿ ಶೀತ, ಕಫ, ನೆಗಡಿ, ಮಲೇರಿಯಾ ಜ್ವರ ಮತ್ತಿತರ ರೋಗಗಳು ತರುತ್ತವೆ. ಆಯುರ್ವೇದ ವೈದ್ಯರು ಈಗಾಗಲೇ ಹೇಳಿದಂತೆ ರೋಗಕ್ಕೆ ವಿರುದ್ಧವಾದ ಮದ್ದು, ಆಹಾರ ನೀಡಿ ರೋಗವನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುತ್ತಾರೆ.

ದೈವದ ಪೂಜಾರಿಗಳು ತುಂಗಭದ್ರಾ ನೀರನ್ನು ವಿಶೇಷ ಆಚರಣೆಯ ಮೂಲಕ ಗುಡಿಗೆ ತಂದು ಅದನ್ನು ರೋಗ ಪೀಡಿತರಿಗೆ ಪ್ರಸಾದವೆಂಬಂತೆ ನೀಡುವುದನ್ನು ಮತ್ತು ರೋಗಿಯನ್ನು ಬೆಂಕಿಯ ಮೇಲೆ ನಡೆಯುವಂತೆ ಹೇಳುವದನ್ನು ನಾವು ಈ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬಹುದಾಗಿದೆ. ಇಲ್ಲಿ ದೈವತ್ವದ ಜೊತೆಗೆ

ಅಪ್ರಜ್ಞಾಪೂರ್ವಕವಾಗಿ ಚಿಕಿತ್ಸಕ ವಿಧಾನವನ್ನು ಬಳಸಲಾಗುತ್ತದೆಯೆನ್ನಿಸುತ್ತದೆ. ಕೆಲವು ಬಾರಿ ರೋಗಿಗಳ ಪರವಾಗಿ ಪೂಜಾರಿಗಳೆ ಈ ವಿಧಾನದಲ್ಲಿ ಚಿಕಿತ್ಸೆಗೆ ಒಳಗಾಗುತ್ತಾರೆ. ಹೀಗೆ ನಾನಾ ರೀತಿಯಲ್ಲಿ ಗಂಡು ಮಕ್ಕಳು, ಹೆಣ್ಣು ಮಕ್ಕಳು, ಹುಡುಗರು, ಹುಡುಗಿಯರು ಮತ್ತು ಮುದುಕಿಯರೆನ್ನದೆ ಎಲ್ಲ ವಯಸ್ಕರೂ ಈ ದೇವತೆಯನ್ನು ಪೂಜಿಸಿವುದಷ್ಟೇ ಅಲ್ಲದೆ ಅಪಾರ ನಂಬಿಕೆಯನ್ನು ಹೊಂದಿದವರಾಗಿದ್ದಾರೆ. ಆ ಮೂಲಕ ಅನೇಕ ಇಷ್ಟಾರ್ಥಗಳನ್ನು ಭಕ್ತರು ಭಕ್ತಿಯಿಂದ ಕೇಳಿಕೊಂಡು ಅದರಂತೆ ಹರಕೆಗಳನ್ನು ಪ್ರತಿಯಾಗಿ ಸಲ್ಲಿಸುತ್ತಾರೆ.

**ಹರಕೆಗಳು**

ಜನರು ತಮ್ಮನ್ನು ಕಾಪಾಡುವ ದೇವರಿಗಾಗಿ ಏನನ್ನಾದರೂ ತ್ಯಾಗ ಮಾಡಲು ಸಿದ್ಧರಿರುತ್ತಾರೆ. ಹಾಗೆಯೇ ಹುಲಿಗೆಮ್ಮನ ಭಕ್ತರೂ ಸಹ ಹರಕೆಯನ್ನು ತೀರಿಸುವುದರಲ್ಲಿ ಯಾವ ಕಷ್ಟವನ್ನಾದರೂ ಅನುಭವಿಸಲು ಸಿದ್ಧರಿರುತ್ತಾರೆ. ಹಿಂಜರಿಯುವುದಿಲ್ಲ. ಅದಕ್ಕಾಗಿ ನಾನಾ ರೀತಿಯ ಹರಕೆಗಳನ್ನು ಕಟ್ಟಿಕೊಂಡು ನಿಯತ್ತಿನಿಂದ ಹರಕೆಗಳನ್ನು ತೀರಿಸುತ್ತಾರೆ. ಒಂದು ವೇಳೆ ಹರಕೆಗಳನ್ನು ತೀರಿಸದಿದ್ದರೆ ಏನೆಲ್ಲಾ ಕಷ್ಟ ನಷ್ಟಗಳು ಪ್ರಾಪ್ತವಾಗಬಹುದೆಂಬ ಭಯ ಭಕ್ತರನ್ನು ಕಾಡುತ್ತಿರುತ್ತದೆ. ಮುಡಿಪುಕೊಡುವುದು, ಬಾಯಿಗೆ ಬೀಗ ಚುಚ್ಚಿಕೊಳ್ಳುವುದು, ಕೊಂಡಕ್ಕೆ ಹರಳು ಹಾಕುವುದು, ದೀರ್ಘ ನಮಸ್ಕಾರ, ಉರುಳುಸೇವೆ, ಪ್ರಾಣಿ ಬಲಿನೀಡುವುದು ಮುಂತಾದ ದೈಹಿಕವಾಗಿ ಮಾನಸಿಕವಾಗಿ ಹಾಗೂ ಆರ್ಥಿಕವಾಗಿ ಕಷ್ಟವಾದರೂ ಸಹಿಸಿಕೊಂಡು ಹರಕೆಯನ್ನು ತೀರಿಸುತ್ತಾರೆ. ತಾವು ಹಸಿದಿದ್ದರೂ ಸಾಲ ಮಾಡಿಯಾದರೂ ದೇವರ ಸೇವೆಯನ್ನು ಈ ಜನಪದರು ಮಾಡುತ್ತಾರೆ. ಅವರು ಅರ್ಪಿಸುವ ಹರಕೆಗಳು ನಾನಾ ವಿಧಗಳಿಂದ ಕೂಡಿರುತ್ತವೆ. ಅವುಗಳನ್ನು ವೈಯಕ್ತಿಕ ಹರಕೆ, ಕೌಟುಂಬಿಕ ಹರಕೆಗಳು, ಊರ ಹರಕೆಗಳು ಎಂಬುದಾಗಿ ವಿವರಿಸಬಹುದು. ಮುಖ್ಯವಾಗಿ ಹುಲಿಗೆಮ್ಮನಿಗೆ ಹರಕೆ ಒಪ್ಪಿಸುವ ಜನರು ಕೆಳವರ್ಗ-ಕೆಳಜಾತಿಗೆ ಸೇರಿದವರಾಗಿರುತ್ತಾರೆ. ಹುಲಿಗೆಮ್ಮ ಜನತೆಯನ್ನು ತನ್ನ ಭಕ್ತರನ್ನಾಗಿಸಿಕೊಳ್ಳಲು ನಾನಾ ಬಗೆಯ ತಂತ್ರಗಳನ್ನು ಹೂಡುತ್ತಾಳೆಂಬುದಾಗಿ ಜನಪದರಲ್ಲಿ ನಂಬಿಕೆಯಿದೆ.

ವೈಯಕ್ತಿಕ ಹರಕೆಗಳು ಕಷ್ಟ ಬಂದವರು ಕಷ್ಟ ತೀರುವುದಕ್ಕಾಗಿ ದೈವಕ್ಕೆ ಹರಕೆ ಒಪ್ಪಿಸುತ್ತಾರೆ. ಅವೆಂದರೆ,

೧. ದೈವಕ್ಕೆ ಬಂಗಾರದ ಒಡವೆಗಳನ್ನು ಮಾಡಿಸುವುದು.

೨. ದೈವಕ್ಕೆ ಸೀರೆ ಕುಪ್ಪಸ ಕೊಡುವುದು.

೩. ದೈವಕ್ಕೆ ಸೀರೆ ಕುಪ್ಪಸ ಕೊಡುವುದು.

೪. ಮುಖ, ಕೈ, ಕಣ್ಣು, ಮೀಸೆ, ಲಿಂಗ, ತ್ರಿಶೂಲ, ನಾಗ, ಕ್ಯಾದಿಗಿ, ಬಳೆ, ಪಾದರಕ್ಷೆ, ಗಂಟೆ, ಕೊಡ, ಚೌರಿ, ಗೆಜ್ಜೆ, ಕಳಸ, ಪಾಲಿಕೆ, ಕುದುರೆ, ಪಾವಲಿಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಜನರಿಗೆ ಒಪ್ಪಿಸುವುದು.

೫. ತೆಂಗಿನಕಾಯಿ ಒಡೆಸುವುದು

೬. ಕರ್ಪೂರ ಉರಿಸುವುದು

೭. ದೀಡ ನಮಸ್ಕಾರ ಹಾಕುವುದು

೮. ಉರುಳು ಸೇವೆ ಮಾಡುವುದು

೯. ಅರಿಶಿಣ-ಕುಂಕುಮದ ಹರಕೆ ಒಪ್ಪಿಸುವುದು

೧೦. ದೈವಕ್ಕೆ ಉಡಿ ತುಂಬುವುದು

೧೧. ಹೊಸ ಅರಿವೆಯ ತುಂಡಿನಲ್ಲಿ ಅಥವಾ ಕೈಯಲ್ಲಿ ಒಂದು ಮುಷ್ಟಿ ಉಪ್ಪನ್ನು ಒಯ್ದು ಗುಡಿಗೆ ಪ್ರದಕ್ಷಿಣೆ ಬಂದು ಗುಡಿಯೆದುರು ದೈವಕ್ಕೆ ಅರ್ಪಿಸುವುದು. ಕೆಲವರು ಗುಡಿಯ ಮೇಲೆಯೇ ಅದನ್ನು ಎಸೆಯುತ್ತಾರೆ.

೧೨. ಉಪವಾಸ ಮಾಡುವುದು

೧೩. ಸಿಡಿಯಾಡುವುದು (ಈಗ ಇಲ್ಲ)

೧೪. ಗುಂಡನ್ನು ತಲೆಯಲ್ಲಿ ಹೊತ್ತುಕೊಂಡು ಗುಡಿಗೆ ಪ್ರದಕ್ಷಿಣೆ ಬರುವುದು.

೧೫. ಚಂದಳಿಕೆ ಹರಕೆ ನೀಡುವುದು - ಚರ್ಮದ ಪಾದುಕೆ ಮಾಡಿ ದೇವಸ್ಥಾನಕ್ಕೆ ಒಪ್ಪಿಸುವುದು. ಪೂಜಾರಿಯು ಪಾದುಕೆಯಿಂದ ಹರಕೆ ಒಪ್ಪಿಸಿದವನ ಬೆನ್ನಿಗೆ ಹೊಡೆಯುತ್ತಾನೆ. ಆನಂತರ ದೈವಕ್ಕೆ ಒಪ್ಪಿಸುತ್ತಾನೆ.

೧೬. ಬೆತ್ತಲೆ ದೇಹಕ್ಕೆ ಬೇವಿನ ಸೊಪ್ಪು ಕಟ್ಟಿ, ಗಂಗಾಪೂಜೆ ಮಾಡಿ ಗುಡಿ ಪ್ರದಕ್ಷಿಣೆ ಬಂದು ದೈವಕ್ಕೆ ಅಡ್ಡ ಬೀಳುವುದು. ಪರಶುರಾಮ ಕೊಂದ ಕ್ಷತ್ರಿಯ ವೀರರ ಹೆಂಡಂದಿರು ಹೀಗೆ ಮಾಡಿದರು ಎಂಬ ಅಂಶವನ್ನು ಹಿನ್ನೆಲೆಯಾಗಿ ಹೇಳಲಾಗುತ್ತದೆ. ಮಂಗಳವಾರ, ಶುಕ್ರವಾರ ಇಂಥ ಹರಕೆ ಸಂದಾಯವಾಗುತ್ತದೆ. ಈಗ ಬೆತ್ತಲೆ ಸೇವೆ ಇಲ್ಲವಾದರೂ ಸೊಂಟಕ್ಕೆ ಬೇವಿನಸೊಪ್ಪು ಕಟ್ಟಿಕೊಂಡು ಭಕ್ತರು ಹರಕೆ ಒಪ್ಪಿಸುತ್ತಾರೆ. ಈ ಬಗೆಯ ಹರಕೆಯನ್ನು ಕೆಲವರು ಒಂದು - ಮೂರು - ಐದು ವರ್ಷ ನಡೆಸುವುದಾಗಿದೆ.

೧೭. ಗರ್ಧಾನಿ ಹರಕೆ: ತುಂಬ ಅಪೂರ್ವವಾದ ಈ ಹರಕೆಯಲ್ಲಿ ಗಂಡಸರು ಹೆಂಗಸರ ಉಡುಗೆ ತೊಡುತ್ತಾರೆ. ಹೆಂಗಸರು ಗಂಡಸರ ಉಡುಗೆ ತೊಡುತ್ತಾರೆ. ಸಾಮಾನ್ಯವಾಗಿ ಬಿಳಿ ಉಡುಗೆ ತೊಡುತ್ತಾರೆ. ತೊಟ್ಟ ಬಂದು ದೈವಕ್ಕೆ ಕೈ ಮುಗಿದು ಹರಕೆ ಒಪ್ಪಿಸುತ್ತಾರೆ. ಈ ಬಗೆಯ ಲಿಂಗಪರಿವರ್ತನೆ ತುಂಬಾ ಕುತೂಹಲಕಾರಿಯಾಗಿದೆ.

## ಅಧ್ಯಾಯ ಐದು

# ಹುಲಿಗೆಮ್ಮ ಮೌಖಿಕ ಸಾಹಿತ್ಯ

೫.೧ ಜನಪದ ಕಥೆ ಹಾಗೂ ಐತಿಹ್ಯಗಳು

೫.೨ ಜನಪದ ಪುರಾಣಗಳು

೫.೩ ಹುಲಿಗೆಮ್ಮನ ಹಾಡುಗಳು

ಮನುಷ್ಯನು ಎಂದಿನಿಂದ ಆಚರಣೆಗಳನ್ನು ಮಾಡುತ್ತಾ ಬಂದನೋ ಅಂದಿನಿಂದಲೇ ಅವುಗಳಿಗೆ ಸಂವಾದಿಯಾಗಿ ಹಾಡುಗಳನ್ನು ಹಾಡುತ್ತಲೇ ಬಂದಿದ್ದಾನೆ. ಹಾಗೆಯೇ ಜಾನಪದ ಗೀತೆಯು ಯಾವುದನ್ನೇ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ. ಅದನ್ನು ಪ್ರಯತ್ನಪೂರ್ವಕವಾಗಿ, ಕಲಾತ್ಮಕಗೊಳಿಸುವ ಅಥವಾ ಕಾವ್ಯದ ಪರಿಣಾಮಗಳನ್ನು ತೆರೆಯಬೇಕು ಎಂಬ ಉದ್ದೇಶವು ಆತನಿಗೆ ಇರಲಿಲ್ಲ. ಇಲ್ಲಿ ಸಾಹಿತ್ಯ ಮೌಲ್ಯಕ್ಕಿಂತ ಹೆಚ್ಚಾಗಿ ಸಾಮಾಜಿಕ, ಚಾರಿತ್ರಿಕ ಹಾಗೂ ಮಾನವಶಾಸ್ತ್ರೀಯ ಮೌಲ್ಯಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಇದರಿಂದ ಜನಪದರ ಮನೋಭಾವನೆಗಳನ್ನು ನಿರ್ಧರಿಸಲು ಸಾಧ್ಯವಾಗುತ್ತದೆ.

ಸಾಹಿತ್ಯವನ್ನು ಶಿಷ್ಟ ಮತ್ತು ಜನಪದ ಎಂದು ವಿಭಾಗಿಸಿಕೊಂಡು ಬಂದ ಕ್ರಮ ನಮ್ಮಲ್ಲಿ ರೂಢಿಯಲ್ಲಿದೆ. ಈ ವಿಭಾಗೀಕರಣಗಳು ಏನೇ ಇದ್ದರೂ ಅಂತಿಮವಾಗಿ ಸಾಹಿತ್ಯ ಸಾಮಾಜಿಕ ರಚನೆಯೇ ಆಗಿದೆ. ಹಾಗಾಗಿ ಮೇಲೆ ಚರ್ಚಿಸಿದ ವಿಷಯಗಳೆಲ್ಲಾ ಶಿಷ್ಟ ಸಾಹಿತ್ಯಕ್ಕೂ, ಮೌಖಿಕ ಸಾಹಿತ್ಯಕ್ಕೂ ಅನ್ವಯಿಸುವಂತ ವಿಚಾರಗಳೇ ಆಗಿವೆ. ಆದರೆ ಈ ಅಧ್ಯಯನವನ್ನು ಜಾನಪದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುವ ಕಾರಣ ಮೌಖಿಕ ಸಾಹಿತ್ಯದ ಕಡೆಗೆ ಮಾತ್ರ ಗಮನ ಹರಿಸಲಾಗಿದೆ.

ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಜನಪದ ಸಾಹಿತ್ಯ ಸಂಗ್ರಹದ ಕೆಲಸ ಸಾಕಷ್ಟಾಗಿದೆ. ಆದರೆ ಆ ಸಂಗ್ರಹಿತ ಪಠ್ಯಗಳನ್ನು ವಿಶ್ಲೇಷಿಸುವ ಮತ್ತು ನಿರ್ವಚಿಸುವ ಪ್ರಯತ್ನಗಳು ನಡೆದಿವೆಯಾದರೂ ತುಂಬಾ ವಿರಳ. ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕರಗಳಿಗೆ ದೊರೆತ ಆದ್ಯತೆ ಮತ್ತು ಮಾನ್ಯತೆಗಳು ಮೌಖಿಕ ಆಕರಗಳಿಗೆ ದೊರೆತಿಲ್ಲ. ಮೌಖಿಕ ಸಾಹಿತ್ಯ ಅಥವಾ ಜನಪದ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರ. ಜನಪದರಿಂದ ಮೌಖಿಕ ರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ ರೂಪದಲ್ಲಿರುವ ಸಾಹಿತ್ಯವು ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಖಂಡಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತವೆ. ಜನಪದ ಸಾಹಿತ್ಯ ಎಂಬುದು ಜನರ ನಿತ್ಯ ಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕರವೆ ಆಗಿದೆ. ಈ ಕುರಿತು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದುಂಟು. ಹಾಗಾಗಿ ವಿದ್ವಾಂಸರ ವಲಯದಲ್ಲಿ ಜನಪದ ಸಾಹಿತ್ಯ ಕುರಿತಂತೆ ಇರುವ ವಿಚಾರಗಳನ್ನು ತಿಳಿಯಬಹುದು.

ಜನಪದ ಸಾಹಿತ್ಯವೆಂದರೆ ಕೇವಲ ಹಾಡಲ್ಲ, ಅದರಲ್ಲಿ ಧ್ಯಾನ, ಭಕ್ತಿ, ಚಿಂತನೆಯಷ್ಟೇ ಇರುವುದಿಲ್ಲ. ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳಲ್ಲದೆ ಅದು ಒಂದು ಜನಾಂಗದ ಸಮಗ್ರ ಜೀವನದ ಜೀವಂತ ಚಿತ್ರಣವಾಗಿದೆ. ಪ್ರತ್ಯೇಕವಾಗಿ ಮನಸ್ಸಿನಲ್ಲಿ ಮೂಡಿ ನಿಲ್ಲಬಲ್ಲ ಚಿತ್ರಣವಾಗಿದೆ. ಕರುಳ

ತಂತಿಯನ್ನು ಮೀಟಬಲ್ಲಿ ನಾದ ಮಾಧುರ್ಯ ಅದರಲ್ಲಿ ಅಡಕವಾಗಿದೆ. ಜನಸಾಮಾನ್ಯರ ಅಂತರಾಳದಿಂದ ಹೊರಹೊಮ್ಮಿದ ಸಹಜ ಅನುಭವವಾಗಿದೆ. ಜನಾಂಗದ ಸಂಸ್ಕೃತಿಯ ಸಮಗ್ರ ಚಿತ್ರಣಕ್ಕೆ ಹಿಡಿದ ಕನ್ನಡಿಯಾಗಿದೆ (ಡಾ. ಅರ್ಜುನ ಗೊಳಸಂಗಿ ೨೦೦೦:೧) ಎಂದಿದ್ದಾರೆ.

ಜನಪದ ಸಂಸ್ಕೃತಿಯ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಬಹುಮುಖ್ಯವಾದದ್ದು. ಜಗತ್ತಿನ ಬಹುತೇಕ ಎಲ್ಲ ಅನಕ್ಷರಸ್ಥ ಜನಸಮುದಾಯಗಳು ಹಾಗೂ ಶೋಷಿತ ಜನರ ಅನಿಸಿಕೆಗಳನ್ನು ವ್ಯಕ್ತಪಡಿಸುವುದಕ್ಕೆ ಇರುವ ಸಾಹಿತ್ಯವೇ ಏಕೈಕ ಮಾಧ್ಯಮವೆಂದರೆ ಕಂಠಸ್ಥ ಸ್ವರೂಪದಲ್ಲಿ ಹರಿದು ಬರುವ ಜನಪದ ಸಾಹಿತ್ಯವೇ ಆಗಿದೆ. ಈ ಸಾಹಿತ್ಯದ ದೃಷ್ಟಿಯಲ್ಲಿ ಪುರುಷರಂತೆಯೇ ಸ್ತ್ರೀಯರೂ ಸಹ ತಲೆ ತಲೆಮಾರುಗಳಿಂದಲೂ ಸಮಾನವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಅನಕ್ಷರತೆ ಮತ್ತು ಪುರುಷ ಪ್ರಧಾನ ಸಮಾಜದ ಪ್ರಾಬಲ್ಯದ ಕಾರಣವಾಗಿ ಬಹುತೇಕ ಹಿನ್ನೆಲೆಯಲ್ಲಿಯೇ ಉಳಿದ ಸ್ತ್ರೀ ಸಂವೇದನೆಗಳನ್ನು ತಿಳಿದುಕೊಳ್ಳಲು ಜನಪದ ಸಾಹಿತ್ಯ ವಿಶ್ವಾಸಾರ್ಹ ಮಾಹಿತಿಯ ಆಕರ (ಡಾ. ಕೆ. ಆರ್. ಸಂಧ್ಯಾರೆಡ್ಡಿ ೨೦೦೦:೧) ಎಂದು ಅಭಿಪ್ರಾಯ ಕೊಡುತ್ತಾರೆ.

ಜನಪದ ಸಾಹಿತ್ಯ ಎಲ್ಲಿಂದಲೋ ಉದ್ಭವಿಸಿಲ್ಲ. ಜನಪದರು ತಮ್ಮ ಬದುಕಿನಲ್ಲಿ ಕಂಡುಂಡ ಅನುಭವವನ್ನು ಹಾಡಾಗಿಸಿದ್ದಾರೆ. ಕಥೆಯಾಗಿಸಿದ್ದಾರೆ. ಪುರಾಣವಾಗಿಸಿದ್ದಾರೆ ಇತ್ಯಾದಿ. ಹಾಗಾಗಿ ಜನಸಾಮಾನ್ಯರ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಪ್ರಮುಖವಾದದ್ದು. ಶಿಷ್ಟ ಸಾಹಿತ್ಯಕ್ಕಿಂತಲೂ ಭಿನ್ನವಾಗಿದ್ದು ಈ ಮೌಖಿಕ ಸಾಹಿತ್ಯದಲ್ಲಿ ಧ್ವನಿ ಇಲ್ಲದವರ ಧ್ವನಿಯ ಆಲಾಪನೆಗಳು ಕೇಳಿಬರುತ್ತವೆ. ಬಹುಪಾಲು ಅನಕ್ಷರಸ್ಥ ಜನರು, ದುಡಿಯುವ ಜನರು ಹೇಳಿಕೊಂಡ ಸಾಹಿತ್ಯವೇ ಮೌಖಿಕ ಸಾಹಿತ್ಯವಾಗಿದ್ದರಿಂದ ಅವರೇ ಹೇಳಿಕೊಂಡ ಈ ಸಾಹಿತ್ಯದಲ್ಲಿ ಅವರ ಬದುಕಿನ ಹತ್ತು ಹಲವು ಸಂಗತಿಗಳು ಹಾಸುಹೊಕ್ಕಾಗಿರುವುದರಿಂದ ಜನಸಾಮಾನ್ಯರ ಬದುಕಿನ ಬಗೆಗೆ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಮೌಖಿಕ ಆಕರಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ.

**೫.೧ ಜನಪದ ಕಥೆ, ಐತಿಹ್ಯ ಮತ್ತು ಪುರಾಣ**

**ಮಲ್ಯೆಶೆಟ್ಟಿ**

ಒಂದೂರಾಗ ಮಲ್ಯೆಶೆಟ್ಟಿ ಎಂಬ ಒಬ್ಬ ಸೆಟ್ಟಿ ಇದ್ದ. ಆತನಿಗೆ ಹೆಣ್ಣು ಎಂದರೆ ಆಗುತ್ತಿರಲಿಲ್ಲ. ಗಂಡು ದೇವರ ಮೇಲೆಯೇ ಆತನಿಗೆ ಪ್ರೀತಿ ಜಾಸ್ತಿ. ಗಂಡು ದೇವರ ಭಕ್ತ. ಹೆಣ್ಣುದೇವರು ಕಂಡರೆ ಆಗುತ್ತಿರಲಿಲ್ಲ. ಅಷ್ಟು ಶೀಲ ನೋಡಬೇಕೆಂದು ಹುಲಿಗೆಮ್ಮ ಒಂದು ದಿನ ಇವನ ಪರೀಕ್ಷೆ ಮಾಡೋಣವೆಂದು, ಹೆಣ್ಣು ದೇವರ ಮೇಲೆ ಇವನಿಗೆ ಭಕ್ತಿ ಇದೆಯೋ, ಇಲ್ಲವೋ ಎಂದು ಬರೇ ಗಂಡು ದೇವರು, ಗಂಡು ದೇವರ ಭಕ್ತ ಎಂದು ಬಹಳ ಹೇಳುತ್ತಾರೆ ಎಂದು ಅವನ ಪರೀಕ್ಷೆ ಮಾಡಲು ಜೋಳಿಗೆ ಹಾಕಿಕೊಂಡು, ಮುದುಕಿ ವೇಷ ಧರಿಸಿಕೊಂಡು ಅಡ್ಡಿಗಿ ತಗೊಂಡು ಬಂದು ಅವನ ಮನೆ ಬಾಗಿಲಿಗೆ ನಿಲ್ಲುತ್ತಾಳೆ. ನಿಂತು ಉಧೋ ಹಾಕುತ್ತಾಳೆ. ಬಾಗಿಲ ಕಾಯುವವರು ಹೇ ಮುದುಕಿ ಒಳಗೆ ಇರುವ ಧನಿಯವರು ನೀನು ಹಾಕಿದ ಉಧೋ ಎಂಬ ಶಬ್ದ ಕೇಳಿ ವದಿತಾನೆ

(ಬಡಿಯುತ್ತಾನೆ). ನೀನು ಉಧೋ ಹಾಕಬೇಡ. ಇಲ್ಲಿ ಹೆಣ್ಣು ದೇವರ ನಡತೇನೆ ಇಲ್ಲ. ಇಲ್ಲಿಗೆ ಬರಬೇಡ ನಡಿ ಎಂದು ಹೇಳುತ್ತಾರೆ. ಮುದುಕಿಯನ್ನು ಹೊರಕ್ಕೆ ದಬ್ಬುತ್ತಾರೆ. ಆಗ ಆಕಿ ಏನು ಅನ್ನುತ್ತಾಳೆ ಎಂದರೆ ಅಪ್ಪ ಆ ಮಲ್ಲೈಸೆಟ್ಟಿನಾ ಕಾಣಬೇಕು. ಆತನ ಹತ್ತಿರ ನಾನು ಎರಡು ಮಾತನಾಡ ಬೇಕು. ಎರಡು ಮಾತನಾಡಿ ಬರಬೇಕಪ್ಪಾ ಎಂದು ಆ ಮುದುಕಿ (ಹುಲಿಗೆಮ್ಮ) ಕೇಳುತ್ತಾಳೆ. ಮಲ್ಲೈಶೆಟ್ಟಿ ಹತ್ತಿರ ಮಾತನಾಡಿ ಹೋಗುತ್ತೇನಪ್ಪಾ ಎಂದು ಹೇಳುತ್ತಾಳೆ.

ಛೆ, ಛೆ, ಛೆ, ಹೆಣ್ಣು ಮಕ್ಕಳ ಶಬ್ದ ಆತನಿಗೆ ಆಗುವುದಿಲ್ಲವೆಂದರೆ ನೀನು ಮಾತನಾಡುವುದಕ್ಕೆ ಹೋಗುತ್ತೀಯಾ, ನೀನು ಅಲ್ಲಿಗೆ ಹೋಗಕೂಡದು. ನೀನು ಆತನ ಮುಖ ನೋಡಕೂಡದು. ಆತ ನಿನ್ನ ಮುಖ ನೋಡಕೂಡದು. ಬೇಡ ನಾವು ಹೇಳೋ ಮಾತು ಕೇಳು ಸುಮ್ಮನೆ ನಡಿ ನೀನು ಎಂದು ಬಾಗಿಲು ಕಾಯುವವರು ಮುದುಕಿಗೆ (ಹುಲಿಗೆಮ್ಮನಿಗೆ) ಹೇಳುತ್ತಾರೆ. ಬಹಳ ಹಠಕ್ಕೆ ನಿಲ್ಲುತ್ತಾಳೆ. ಆತನನ್ನು ಕಂಡು ಹೋಗೇ ತೀರುತ್ತೇನೆ ಎಂದು ಹೇಳುತ್ತಾಳೆ. ಆಗ ಬಾಗಿಲು ಕಾಯುವವರು ಹೇಳುತ್ತಾರೆ. ನೋಡವ್ವಾ ನೀನು ಇಷ್ಟು ಹೇಳಿದಾಗಲೂ ಆತನನ್ನು ನೋಡಬೇಕೆಂದು ಹೇಳುತ್ತಿ. ಆತನ ಕೂಡ ವದಿಸಿಕೊಳ್ಳಬೇಕೆಂದು ಮಾಡಿರುವೆ, ಏನೋ ಶಬ್ದ ಮಲ್ಲೈಸೆಟ್ಟಿ ಕಿವಿಗೆ ಬೀಳುತ್ತದೆ. ಮಂಚದ ಮೇಲೆ ಮಲಗಿರುವ ಶೆಟ್ಟಿ ಕರಿ ಕರಿ ಹಲ್ಲು ಕಡಿಯುತ್ತಾನೆ. ಬಾಗಿಲು ಕಾಯವವರಿಗೆ ಲೇ ಯಾವ ರಂಡಿ ಬಂದಿದ್ದಾಳೆ ಹೊರಗ, ಉಧೋ ಎಂದು ನಿಂತಿದ್ದಾಳೆ. ನನಗೆ ಆ ಶಬದ, ಹಾಕಬೇಡಿ ಎಂದು ನಾನು ಎಷ್ಟು ಸಲ ಹೇಳಿದರೂ ಆಕೆಯನ್ನು ಯಾಕೆ ಬಾಗಿಲದ ಹತ್ತಿರ ಕರಕೊಂಡಿರಿ ದಬ್ಬಿರಿ ಆ ಕಡೆ ಎಂದು ಹೇಳುತ್ತಾನೆ ಮಲ್ಲೈಶೆಟ್ಟಿ. ಆಗ ಬಾಗಿಲು ಕಾಯುವವರು ಹೇಳುತ್ತಾರೆ, ನೋಡಮ್ಮ ನಾವು ಎಷ್ಟು ಸಲ ಹೇಳಿದರೂ ನೀನು ಕೇಳಲಿಲ್ಲ. ಆ ಶಬ್ದ ಆತನಿಗೆ ಆಗುವುದಿಲ್ಲವೆಂದು ನಮಗೆ ಆರ್ಡರ್ ಬಂದಿದೆ, ಬಡಿಯಿರಿ ಎಂದು ಹೇಳಿದ್ದಾರೆ ಎನ್ನುತ್ತಾರೆ. ಆಗ ಮುದುಕಿ ಹುಲಿಗೆಮ್ಮ ಅಪ್ಪಾ ಈಗ ಇಚ್ಛೆ ಬಂದಂಗೆ ಬಡಿದುಕೊಳ್ಳಿರಿ ಎಂದು ಹೇಳುತ್ತಾಳೆ ಆ ಮುದುಕಿ. ಆಗ ಬಾರಕೋಲು ತೆಗೆದುಕೊಂಡು ಮುದುಕಿಗೆ ಬಡಿಯುತ್ತಾರೆ. ನಿಂತ ಜಾಗದಲ್ಲಿಯೇ ಬಡಿಯುತ್ತಾರೆ. ಆಗ ಮುದುಕಿಗೆ ಬಡಿದಾಗ ಮುದುಕಿ ಏನು ಅನ್ನುತ್ತಾಳೆ ಎಂದರೆ ಇವನದು ಇನ್ನೂ ಸೊಕ್ಕು ಮುರಿದಿಲ್ಲ. ಇವನದು ಇನ್ನು ಎಷ್ಟು ಸೊಕ್ಕು ಐತಿ ಎಂಬುದನ್ನು ನೋಡಿಯೇ ಬಿಡುತ್ತೇನೆ ಎಂದು ಹೇಳುತ್ತಾಳೆ.

ಹಠಮಾಡಿ ನಿಲ್ಲುತ್ತಾಳೆ ಮುದುಕಿ. ಆಗ ಮತ್ತೆ ಬಡಿಯುತ್ತಾರೆ. ಬಾಗಿಲು ಕಾಯುವವರು ಬಡಿದಂತೆಲ್ಲ ಉಧೋ ಎಂದು ಹೇಳುತ್ತಾಳೆ. ಆಗ ಮಲ್ಲೈಸೆಟ್ಟಿಗೆ ಬಹಳ ಸಿಟ್ಟು ಬಂದು ಬಿಟ್ಟಿತು. ಎಷ್ಟು ಬಡಿದರೂ ಆ ರಂಡೆ ಮತ್ತೇ ಉಧೋ ಅಂಬುತ್ತಾಳೆ. ವಗಿಯಿರಿ ದೂರ ತೆಗೆದುಕೊಂಡು ಹೋಗಿ ಇಬ್ಬರು ಎಂದು ಹೇಳುತ್ತಾನೆ ಮಲ್ಲೈಶೆಟ್ಟಿ. ಆಗ ಇಬ್ಬರು ಆಳುಗಳು ರಟ್ಟೆ ಹಿಡಿದು ದೂರ ಎಳೆದುಕೊಂಡು ಹೋಗಿ ವಗಿಯುತ್ತಾರೆ. ಅವರು ವಾಪಾಸ್ಸು ಬರುವುದಕ್ಕಿಂತ ಮೊದಲೆ ತಲೆಬಾಗಿಲದ ಹತ್ತಿರ ಬಂದು ನಿಂತಿರುತ್ತಾಳೆ. ಹ್ಹಾ... ಈಗ ಇನ್ನೂ ಆಕೆಯನ್ನು ವಗೆದು ನಾವು ಬಂದೀವಿ. ಆಗಲೇ ಇಲ್ಲಿ ಇದ್ದಾಳಲ್ಲ. ನಮಗಿಂತ ಮೊದಲೆ ಇಲ್ಲಿ ಬಂದು ನಿಂತು ಬಿಟ್ಟೆಯಾ, ಎಂದು ಹೇಳುತ್ತಾರೆ. ಮುದುಕಿ ನೀನು ಎಷ್ಟು ಬಂಡಿ ಇದ್ದೀಯಾ, ನಿನ್ನಂತ ಬಂಡೀನಾ ನಾವು ಎಲ್ಲಿಯೂ ನೋಡಿಲ್ಲ. ಹೋಗಮ್ಮ ನೀನೇನು ಬಂಡತನಕ್ಕೆ ಬಿದ್ದಿಯಾ ಎಂದು ಬೈಯುತ್ತಾರೆ. ಆಗಲಪ್ಪಾ ನನ್ನಂತ ಬಂಡಿ

ಎಲ್ಲಿದ್ದಾಳೆ, ಬಂಡತನಕ್ಕೆ ಬಿದ್ದೀನಿ, ಬಿದ್ದೀನಿ. ಇವತ್ತು ಹಠ ಮಾಡಿ ನಾನು ನೋಡಿಯೇ ತೀರುತ್ತೇನೆ ಎಂದು ಹೇಳುತ್ತಾಳೆ. ಆಗ ನಿಂತುಕೊಂಡಳು ತಲಬಾಗಿಲಿಗೆ. ಆಕಾಶಕ್ಕೆ ಭೂಮಿಗೆ ಏಕವಾಗಿ ಚೀಲದಾಗಿನಿಂದ ಮುತ್ತಿನ ಚಂಡು ತೆಗೆದುಕೊಂಡಳು. ಮುತ್ತಿನ ಚಂಡಿನ ತುಂಬಾ ಭಂಡಾರ ಉಗ್ಗಿಬಿಟ್ಟಳು. ಆ ಚಂಡು ಸುವಾಸನೆ ಬೀರುವ ರೀತಿಯಲ್ಲಿ ಗಮ ಗಮ ಅನ್ನುವ ರೀತಿಯಲ್ಲಿ ಇದೆ. ಆಗ ಆ ಚೆಂಡು ಹಿಡಿದುಕೊಂಡು ಉಧೋ ಉಧೋ ಎಂದು ಬೀಡಿ ಮಂಚಕ್ಕೆ ವಗೆದು ಬಿಟ್ಟಳು. ಮಂಚದ ಮೇಲೆ ಮಲಗಿದ್ದ ಮಲ್ಲೈಸೆಟ್ಟಿ ಎದ್ದು ಕಣ್ಣು ತೆರೆಯುತ್ತಾನೆ. ಚಂಡು ಗಮ, ಗಮ ಎಂದು ಸುವಾನೆ ಬೀರಿದಾಗ ಮಲ್ಲೈಶೆಟ್ಟಿ ಏನು ನನ್ನ ದೇವರು, ಏನುವಾಸನೆ, ನನ್ನ ಮುತ್ತಿನ ಚೆಂಡೋ ಎಂಥ ವಾಸನೆ, ಯಾವ ದೇವರದ್ದಾಗಿದ್ದಿತು. ಆಗ ಆ ಮುತ್ತಿನ ಚೆಂಡನ್ನು ಕೈಯಲ್ಲಿ ಹಿಡಿದುಕೊಂಡು ತಿರುವು ಮುರುವು ತಿರುಗಿ ನೋಡುತ್ತಾನೆ. ಛೆ, ಛೆ, ಛೆ, ನನ್ನ ಭಕ್ತಿಗೆ ಇದನ್ನು ಕೊಟ್ಟಿದ್ದಾನೋ ಪರಮಾತ್ಮ. ಇದನ್ನು ಎಲ್ಲಿಯೂ ಇಡತಕ್ಕದ್ದಲ್ಲವೆಂದು ಅಂದುಕೊಂಡು, ದೇವರ ಜಗಲಿ ಮೇಲೆಯೇ ಇಡಬೇಕೆಂದು ಹೆಂಡತಿಯನ್ನು ಕರೆಯುತ್ತಾನೆ. ಎಂಥ ಚೆಂಡು ಕೊಟ್ಟಿದ್ದಾನೆ ನೋಡೆ, ದೇವನು ನನ್ನ ಭಕ್ತಿಗೆ, ನಾನು ಮೂಸಿ ನೋಡುವುದಿಲ್ಲ ಎಂದು ಗಂಡನಿಗೆ ಹೇಳುತ್ತಾಳೆ ಹೆಂಡತಿ.

ಆಗ ಮೂಸಿ ನೋಡುತ್ತಾನೆ. ಎಷ್ಟು ವಾಸನೆ ಇದೆ ಇದನ್ನು ತೆಗೆದುಕೊಂಡು ಹೋಗಿ ಜಗಲಿ ಮೇಲೆ ಇಡು ಎಂದು ಹೇಳುತ್ತಾನೆ. ಛೆ, ಏನು ಗಮ, ಗಮವಿದೆ ಎಂದು ಹೇಳುತ್ತಾನೆ. ಆಗ ಹೆಂಡತಿ ಅದನ್ನು ತೆಗೆದುಕೊಂಡು ಹೋಗಿ ಜಗಲಿ ಮೇಲೆ ಇಡುತ್ತಾಳೆ. ಅದನ್ನು ಮೂಸಿ ನೋಡಿ ಒಂದು ವಾರದೊಳಗೆ ೩೬೦ ಹುಟ್ಟಿದವು. ಮೈತುಂಬಾ ಹುಣ್ಣು, ಮೂಗು ಪಿಶಿಸಿ ಹುಣ್ಣು, ತಲೆಡೊಬಿ ಹುಣ್ಣು, ಕಪಾಳ ಹುಣ್ಣು, ಹಲ್ಲು ಹುಣ್ಣು, ಕುತುಗಿ ಹುಣ್ಣು, ಹೊಟ್ಟೆ ಹುಣ್ಣು, ಬೆನ್ನು ಬೇತಾಳದ ಹುಣ್ಣು, ಕೇಸುದುಣ್ಣು, ಕೀಲು, ಕೀಲುಗಳಿಗೆ ಹುಣ್ಣಾಗಿ, ಜಿಬಿ, ಜಿಬಿ, ಜಿಬಿ ಎಂದು ಜಿಬಿಗುಟ್ಟಿದವು ವಾರ ಎಂಬುದರೊಳಗೆ, ಆಗ ಈತನನ್ನು ತೆಗೆದುಕೊಂಡು, ಮಿರ್ಜಿಗೆ ಹೋದರು, ಹುಬ್ಬಳ್ಳಿಗೆ ಹೋದರು, ಧಾರವಾಡಕ್ಕೆ ಹೋದರು, ಬೆಂಗಳೂರಿಗೆ ಹೋದರು, ಎಲ್ಲೆಲ್ಲಿ ತಿರುಗಿದರು ಯಾವ ಡಾಕ್ಟರ್ ಮುಟ್ಟಲಿಲ್ಲ. ಏನು ಇಲ್ಲ ಎಂದು ಹೇಳಿದರು. ಇದೇನಿದು ಎಂದು ಆತನ ಕತೆ ಮುಗಿಯಿತು ಎಂದು ಮನೆಗೆ ತಂದು ಒಗೆದರು. ಮಂಚಕ್ಕೆ ತಂದು ಒಗೆದರು. ಮಂಚದ ಮೇಲೆ ಒಬ್ಬರೂ ಹೋಗದ ರೀತಿ ಕೆಟ್ಟವಾಸನೆ ಹೊಡೆಯುತ್ತಿದ್ದಾನೆ. ಆಗ ಹುಲಿಗೆಮ್ಮ (ಮುದುಕಿ) ಈಗಲಾದರೂ ಇವನ ಸೊಕ್ಕು ಮುರಿದಿದೆಯೋ, ಇಲ್ಲವೋ ನೋಡಿಬರೋಣವೆಂದು ಮಲ್ಲೈಶೆಟ್ಟಿ ಮನೆ ಹತ್ತಿರ ಬಂದಳು. ಅವನ ಮನೆ ಹತ್ತಿರ ಬಂದಾಗ ಮತ್ತೆ ಮುದುಕಿ ವೇಷವಾಗಿ ಜೋಳಿಗೆ ಹಾಕಿಕೊಂಡು, ಅಡ್ಡಿಗಿ ಹಿಡಿದುಕೊಂಡು ಬಂದಳು. ಮತ್ತೆ ಬಾಗಿಲಿಗೆ ಬಂದು ನಿಂತಾಗ ಆಕಡೆ, ಈಕಡೆ, ಇರುವ ಆಳುಗಳು ನೋಡುತ್ತಾರೆ. ಮತ್ತೆ ಈ ಮುದುಕಿ ಬಂದಳಲ್ಲ ಎಂದು ಕೊಂಡು ಸುಮ್ಮಸಾಗುತ್ತಾರೆ. ಮತ್ತೆ ಮುದುಕಿ ಬಾಗಿಲಿಗೆ ನಿಂತುಕೊಂಡು ಉಧೋ... ಉಧೋ... ಎನ್ನುತ್ತಾಳೆ. ಆ ಶಬ್ದ ಸಾಯೋ ಸ್ಥಿತಿಯಲ್ಲಿದ್ದ ಮಲ್ಲೈಶೆಟ್ಟಿ ಕಿವಿಗೆ ಬಿದ್ದಿತು. ಜೋಗಮ್ಮ ಬಂದಿರಬೇಕು ನೋಡಿರಿ ಎಂದ. ಎಚ್ಚೆತ್ತು ಕೊಂಡಿದ್ದಾನೆ, ಎಂದು ಅಂದು ಕೊಂಡಳು ಮುದುಕಿ. ಮುದುಕಿ ಹುಲಿಗೆಮ್ಮ ಹೌದುರೀ ಜೋಗಮ್ಮ ಬಂದಿದ್ದಾಳೆ ಎಂದು ಮಲ್ಲೈಶೆಟ್ಟಿಗೆ ಅವನ ಹೆಂಡತಿ ತಿಳಿಸಿದಳು. ಆಗ ಚೆಂಬು ನೀರು ಹಾಕಿ ಒಳಕ್ಕೆ ಕರೆದುಕೊಳ್ಳೇ ಎಂದು ತನ್ನ

ಹೆಂಡತಿಗೆ ಮಲ್ಲೈಶೆಟ್ಟಿ ತಿಳಿಸಿದ. ಆಗ ಮಲ್ಲೈಶೆಟ್ಟಿ ಹೆಂಡತಿ ಚೆಂಬು ನೀರು ಆಕೆಯ ಪಾದಕ್ಕೆ ಹಾಕಿ ಕೈಮುಗಿದು ಒಳಕ್ಕೆ ಕರೆದುಕೊಂಡು ಬಂದಳು. ಆಗ ಒಳಕ್ಕೆ ಬಂದ ಮುದುಕಿ (ಹುಲಿಗೆಮ್ಮ) ಅವನ ಕೋಣೆಗೆ ಹೋಗಲು ಕಾಲು ಇಡುತ್ತಾಳೆ. ಅವನ ಕೋಣೆಗೆ ಕಾಲು ಇಡುವಂತಿಲ್ಲ. ಅಷ್ಟು ವಾಸನೆ, ಕೆಟ್ಟವಾಸನೆ ಅವನ ಕೋಣೆಯಿಂದ ಬರುತ್ತದೆ. ಏನಿದು ಇಷ್ಟು ಕೆಟ್ಟವಾಸನೆ ಎಂದು ಅನ್ನುತ್ತಾಳೆ. ಏನಿಲ್ಲ ತಾಯಿ ಬಾರವ್ವ ಎಂದು ಎದ್ದು ಹೆಣಕ್ಕೆ ಹೆಣವೇ ಕೈಮುಗಿಯುತ್ತದೆ. ಆ ರೀತಿಯಾಗಿದ್ದ ಮಲ್ಲೈಶೆಟ್ಟಿ ಬಾ ತಾಯಿ ನಿನ್ನ ಮೇಲೆ ಮಾಡಿದ್ದು ಬಹಳ ತಪ್ಪು ಆಯಿತು. ತಪ್ಪು ಮಾಡಿದ್ದಕ್ಕಾಗಿ ಈ ಶಿಕ್ಷೆ ಅನುಭವಿಸಿದ್ದೇನವ್ವ ತಾಯಿ, ಶರಣಾಗುತ್ತೇನೆ ನಾನು. ನನ್ನ ಬ್ಯಾನಿ ತೆಗೆದು ಕೊಳ್ಳವ್ವಾ ಎಂದು ಕೈ ಮುಗಿಯುತ್ತಾನೆ. ಆಗ ಮನಸ್ಸಿನಾಗ ಅಂದುಕೊಳ್ಳುತ್ತಾಳೆ. ನೀನು ಎಷ್ಟು ಅಹಂಕಾರದಿಂದ ಎಷ್ಟು ಸೊಕ್ಕಿನಿಂದ ಮೆರೆದೆಯಲ್ಲೋ, ಎಂದು ಅನ್ನುತ್ತಾಳೆ. ಹೆಣ್ಣು ದೇವರೆಂದರೆ ಆಗದಂತವನು ಈಗ ನನಗೆ ಶರಣಾದೆಯಾ, ಹೌದು ತಾಯಿ ನಾನು ತಪ್ಪು ಮಾಡಿದ್ದೇನವ್ವ ನನ್ನನ್ನು ಕ್ಷಮಿಸಿಬಿಡು ಎಂದು ಕೇಳಿ ಕೊಳ್ಳುತ್ತಾನೆ ಮಲ್ಲೈಶೆಟ್ಟಿ. ನನ್ನ ಬ್ಯಾನಿ ಬ್ಯಾನಿ ತೆಗೆದು ಬಿಡವ್ವಾ ಎಂದು ಕೇಳಿ ಕೊಳ್ಳುತ್ತಾನೆ ಮಲ್ಲೈಶೆಟ್ಟಿ. ಆಗ ಮುದುಕಿ ತಪ್ಪು ಎಂದು ಶರಣಾಗಿದ್ದಾನೆ, ತಪ್ಪು ಮಾಡಿದ ಮೇಲೆ, ತಪ್ಪು ಎಂದು ಶರಣಾದ ಮೇಲೆ ಒಪ್ಪಿಕೊಂಡ ಮೇಲೆ ಸುಮ್ಮನಿರುವುದು ಸರಿಯಲ್ಲ, ಅವನ ಬ್ಯಾನಿಯನ್ನು ತೆಗೆದು ಬಿಡೋಣವೆಂದು ಅಂದುಕೊಳ್ಳುತ್ತಾಳೆ ಮುದುಕಿ.

ಆಗ ಸ್ನಾನ ಮಾಡಿಸುತ್ತಾರೆ ಮುದುಕಿಗೆ, ಸೀರೆ ಕುಬುಸ ಹೊಸವು ತಂದು ಉಡಿಸುತ್ತಾರೆ. ಆಗ ಮಲ್ಲೈಶೆಟ್ಟಿ ಮುಂದೆ ಬಂದು ಕುಳಿತು ನೋಡುತ್ತಾಳೆ. ಮಲ್ಲೈಶೆಟ್ಟಿಗೆ ಹೇಳುತ್ತಾಳೆ. ಏನಪ್ಪಾ ನಾನು ಕೊಟ್ಟ ಔಷಧ ಕುಡಿಯುತ್ತೀಯಾ, ತಿನ್ನುತ್ತೀಯಾ ಎಂದು ಕೇಳುತ್ತಾಳೆ. ಆಗಲಿ, ತಾಯಿ, ನೀನು ಕೊಟ್ಟು ಔಷಧಿ ಕುಡಿಯುತ್ತೇನೆ. ನೀನು ಕೊಟ್ಟ ತೀರ್ಥವನ್ನು ಕುಡಿಯುತ್ತೇನೆ, ನೀನು ಕೊಟ್ಟ ಔಷಧವನ್ನು ತಿನ್ನುತ್ತೇನೆ ಎಂದು ಹೇಳಿದ ಮಲ್ಲೈಶೆಟ್ಟಿ. ಸರಿ ಎಂದು ತನ್ನ ಜೋಗುಳಿಗೆಯಲ್ಲಿ ಇಟ್ಟುಕೊಂಡಿದ್ದ ಮಾಂಸದ ತುಂಡನ್ನು ಕರೆ ಮಾಡಿರುವುದನ್ನು ಮಲ್ಲೈಶೆಟ್ಟಿ ಕೈಯಲ್ಲಿ ಇಡುತ್ತಾಳೆ. ನಂತರ ಹೆಂಡದ ಬಾಟಲನ್ನು ಕೊಡುತ್ತಾಳೆ. ಆಗ ಇದನ್ನು ತಿಂದು, ಇದನ್ನು ಕುಡಿ ಎಂದು ಹೇಳುತ್ತಾಳೆ. ಅಂದರೆ ಮಾಂಸದ ಕರೆಯನ್ನು ತಿಂದು ಹೆಂಡವನ್ನು ಕುಡಿ ಎಂದು ಹೇಳುತ್ತಾಳೆ. ಅವೆರಡನ್ನು ಕೈಯಲ್ಲಿ ಹಿಡಿದುಕೊಂಡು ಬೋರಾಡಿ ಅಳುತ್ತಾನೆ. ಏನು ತಾಯಿ ಎಂಥದ್ದು ಕೊಟ್ಟುಬಿಟ್ಟಿದ್ದೀಯಾ, ನನ್ನ ಕೈಯಾಕ ಇದನ್ನು ತಿಂದು, ಇದನ್ನು ಕುಡಿಯದಿದ್ದರೆ, ನಿನ್ನ ಬ್ಯಾನಿ ವಾಸಿಯಾಗುವುದಿಲ್ಲಪ್ಪಾ ಎಂದು ಹೇಳುತ್ತಾಳೆ ಮುದುಕಿ. ಅಯ್ಯೋ ತಾಯಿ ಎಂಥದ್ದು ತಂದೆವ್ವ ನನಗೆ ಎಂದು ಅಳುತ್ತಾನೆ. ಕಣ್ಣು ಮುಚ್ಚಿ ಕೊಂಡು, ಉಧೋ ಉಧೋ ಎಂದು ಕೊಳ್ಳುತ್ತಾ ತಿನ್ನೋ ನನ್ನ ಮಗನೆ ಎಂದು ಮುದುಕಿ ಹೇಳುತ್ತಾಳೆ. ಆಗ ಕಣ್ಣು ಮುಚ್ಚಿಕೊಂಡು, ತಾಯಿ ಹುಲಿಗೆಮ್ಮ ಎಂದು, ನಾನು ಮಾಡಿದ ಪಾಪದ ಪ್ರಾಯಶ್ಚಿತ್ತ ಅನುಭವಿಸುತ್ತೇನಮ್ಮ ಎಂದು ಆಗ ಉಧೋ ಉಧೋ ಎಂದು ಕಂಡ ತಿಂದು ಹೆಂಡ ಗಟಗಟನೆ ಕುಡಿದ ಮಲ್ಲೈಶೆಟ್ಟಿ.

ಆಗ ತಣ್ಣಗೆ ತನ್ನ ಜನ್ಮಕ್ಕೆ ಸಂತೋಷವಾಯಿತು ಮಲ್ಲೈಶೆಟ್ಟಿಗೆ. ಎಷ್ಟು ಔಷಧ ಕುಡಿದರೂ ಆತನಿಗೆ ಶಾಂತಿ ಆಗಿದ್ದಿಲ್ಲ. ಆಗ ಆಕೆ ಹೇಳಿದ ವಾಕ್ಯದಲ್ಲಿ ನಡೆದ. ಆಗ ಆಕಿ ತನ್ನ ಉಡಿಯಲ್ಲಿದ್ದ ಭಂಡಾರ ತೆಗೆದುಕೊಂಡು,

ಉಧೋ ಉಧೋ ಎಂದು ಅವನ ಮೈಮೇಲೆ ಹಾಕಿದಳು. ಆಗ ಒಂದು ವಾರ ಎಂಬುವಷ್ಟರಲ್ಲಿ ಹುಣ್ಣು ಉಪ್ಪ ಎಲ್ಲವೂ ಜಳಜಳವಾದವು. ಅಲ್ಲಿಯವರೆಗೆ ಆಕೆಯನ್ನು ಅಲ್ಲಿಯೇ ಇಟ್ಟುಕೊಂಡಿದ್ದ ಮಲ್ಲೈಶೆಟ್ಟಿ ಆಗ ಎಲ್ಲ ವಾಸಿಯಾದ ಮೇಲೆ ನಾನು ಬರಲೇನಪ್ಪಾ ಮಗನೆ ಎಂದಳು ಮುದುಕಿ. ಆಗ ಮಲೈಶೆಟ್ಟಿ, ತಾಯಿ ನಮ್ಮವ್ವ ಎಂದು ಅನ್ನುತ್ತಾನೆ. ತಾಯಿ ನಿನ್ನನ್ನು ಹಾಗೆಯೇ ಕಳಿಸುವುದಿಲ್ಲ, ಎಂದು ಹೊಸ ಸೀರೆ, ಹೊಸ ಕುಬುಸ ತಂದು ಆಕೆಗೆ ತಾಯಿ ನಮ್ಮವ್ವ ನಿನ್ನ ಕಥೆ ಕೇಳಿದವರಿಗೆ ಯಾವ ರೋಗ ಬಾರದಂತೆ ನೋಡವ್ವ ಎಂದು ಹೇಳುತ್ತಾನೆ ಮಲೈಶೆಟ್ಟಿ.

ತಾಯಿ ನಮ್ಮವ್ವ ನಿನ್ನ ಹೆಸರು ಎತ್ತಿ ಬದುಕಿದೇನವ್ವ ಎಂದು ಹೇಳುತ್ತಾನೆ ಮಲೆಶೆಟ್ಟಿ. ಇವತ್ತಿಗೂ ಹುಲಿಗೆಮ್ಮ ಎಂದು ಹೆಸರೆತ್ತಿ ಏನೇ ಜಡ್ಡು, ಜಾಪತ್ತು ಬಂದರೂ, ಆಕೆಯ ಹೆಸರೆತ್ತಿ ಉಧೋ ಉಧೋ ಎಂದರೆ ಆ ಬ್ಯಾನಿ ವಾಸಿಯಾಗುತ್ತದೆ ಎಂದು ಹೇಳಿದ್ದಾಳೆ. ಅದರಂತೆ ನಡೆದವರಿಗೆ ಒಳ್ಳೆಯದಾಗುತ್ತದೆ, ಒಳ್ಳೆಯದಾಗಬಹುದು.

**ಸಾವುಕಾರ ನಾಗಸೆಟ್ಟಿ, ಸಾವುಕಾರ ಭೀಮಸೆಟ್ಟಿ**

ಸಾವುಕಾರ ನಾಗಶೆಟ್ಟಿ, ಸಾವುಕಾರ ಭೀಮಶೆಟ್ಟಿ ಎಂದು ಇದ್ದರು. ಊರ ಹೊರಗೆ ಅವರ ಉಳ್ಳಾಗಡ್ಡಿ, ಹಸಿಮೆಣಸಿನಕಾಯಿ ತೋಟ ಭರ್ಜರಿಯಾಗಿತ್ತು. ನಾಗಸೆಟ್ಟಿ ತೋಟ ಶ್ರೀಮಂತವಾಗಿತ್ತು. ಈಕೆ ಹುಲಿಗೆಮ್ಮ ಪರಶುರಾಮನ ಗರ್ಭಿಣಿ. ತರಕಾರಿ ಊಟ ಮಾಡಬೇಕೆಂದು ಬೇರೆ ವೇಷದಲ್ಲಿ ಉಧೋ ಎಂದು ಹೋಗಿ ನಿಲ್ಲುತ್ತಾಳೆ. ಸಾವುಕಾರ ನಾಗಸೆಟ್ಟಿ ಏನಮ್ಮ ಜೋಗುತಿ ನಾವು ಮಾಲೆಲ್ಲ ಅಂಗಡಿಗೆ ಕಳಿಸಬೇಕು ನಡಿ ಎಂದು ಹೇಳುತ್ತಾನೆ. ಅಪ್ಪಾ ಬದನೆಕಾಯಿ, ಉಳ್ಳಾಗಡ್ಡಿ, ಟೊಮಾಟೋ, ಗಜ್ಜರಿ, ಮೂಲಂಗಿ, ಎಲ್ಲವೂ ರಾಶಿ, ರಾಶಿ, ಹಾಕಿರುವಿರಿ. ಸಾಕು ನನಗೆ ಏನುಬೇಡ ಮೂರು ಉಳ್ಳಾಗಡ್ಡಿ, ಮೂರು ಬದನೆಕಾಯಿ ಕೊಡಪ್ಪಾ ಎಂದು ಕೇಳುತ್ತಾಳೆ. ಏ ಇನ್ನು ವ್ಯಾಪಾರವಾಗಿಲ್ಲ ನಾವು ದಾನ ಮಾಡುವುದಿಲ್ಲ ಹೋಗು ಎಂದು ಬೈಯುತ್ತಾನೆ. ಸಾವುಕಾರ ನಾಗಸೆಟ್ಟಿ ನೀನಾದರೂ ದಾನ ಮಾಡಬೇಕಪ್ಪಾ ಎಂದು ಕೇಳುತ್ತಾಳೆ. ಅವನೂ ಬೈಯುತ್ತಾನೆ. ರಾಶಿ, ರಾಶಿ ಇರುವ ತರಕಾರಿ ಮೇಲೆ ಅಡ್ಲಿಗಿಯಲ್ಲಿರುವ ಭಂಡಾರ ತೆಗೆದು ಅವುಗಳ ಮೇಲೆ ತೂರುತ್ತಾಳೆ. ಮನುಷ್ಯನ ಎತ್ತರವಿರುವ ರಾಶಿಗಳು ಒಂದು ಹಿಡಿಕೆಯಾದವು. ಅವರು ಅತ್ತಿತ್ತ ನೋಡುತ್ತಾರೆ. ಒಂದು ಜೋಗತಿ ಬಂದಳಲ್ಲ ನೋಡಿರೆಂದು ಹುಡುಕುತ್ತಾರೆ. ಎಲ್ಲೆಲ್ಲಿ ಇಲ್ಲ. ಅತ್ತ ಭೀಮಸೆಟ್ಟಿ ತೊಗರಿ, ಹಲಸಂದಿ ಒಕ್ಕುತ್ತಿರುತ್ತಾನೆ. ಎರಡಾಳಿನಷ್ಟು ಎತ್ತರವಿರುವ ರಾಶಿಗಳು, ತೊಗರಿ ಗುಗ್ಗರಿ, ಹಲಸಂದಿ ಗುಗ್ಗರಿ ತಿನ್ನೊ ಆಸೆ ಆಗಿದೆ ಹುಲಿಗೆಮ್ಮನಿಗೆ. ಸಾವುಕಾರ ಭೀಮಶೆಟ್ಟಿ ಕಾಳು ಕೊಡಪ್ಪ ಗುಗ್ಗರಿ ತಿನ್ನೊ ಆಸೆ ಎಂದು ಕೇಳುತ್ತಾಳೆ. ಹೇ ಜೋಗುತಿ ನಾವು ದಾನ ಕೊಡುವವರಲ್ಲವೆಂದು ಬೈಯುತ್ತಾನೆ. ಅಂಗಡಿಗೆ ಹಾಕದೆ ನಾವು ದಾನ ಮಾಡುವುದಿಲ್ಲವೆಂದು ಹೇಳುತ್ತಾನೆ. ಆಳುಗಳು ಆಕೆಯನ್ನು ಬಡಿದು ದಬ್ಬುತ್ತಾರೆ. ಅಡ್ಲಿಗಿ ತೆಗೆದುಕೊಂಡು ಉಧೋ ಎಂದು ಭಂಡಾರ ಉಗ್ಗುತ್ತಾಳೆ. ಮನುಷ್ಯನಷ್ಟು ಎತ್ತರವಿರುವ ರಾಶಿ ಹಿಡಿಕೆಯಷ್ಟು ಆಗುತ್ತದೆ. ಹಲಸಂದೆ, ತೊಗರಿ ಹಿಡಿಕೆಯಷ್ಟು ರಾಶಿಯಾಗುತ್ತದೆ. ಆ ಜೋಗುತಿ ಎಲ್ಲಿದ್ದಾಳೆಂದು ಹುಡುಕುತ್ತಾರೆ. ಎಲ್ಲೆಲ್ಲೂ ಇಲ್ಲ. ಜೋಗುತಿಗಾಗಿ ಹುಡುಕುತ್ತಾರೆ. ಊರ

ಹನುಮಪ್ಪನಗುಡಿ ಮುಂದೆ ಅಡ್ಡಿಗಿ ಇಟ್ಟುಕೊಂಡು ಮಲಗಿರುತ್ತಾಳೆ. ಹೇ ಜೋಗುತಿ, ಬಾ ಇಲ್ಲಿ ಏನು ಮೋಡಿ ಮಾಡಿಯೇಸು ರಾಶಿ ಮುಂದೆ ನಿಲ್ಲಿಸಿ ಏನು ಬೇಕು ನಿನಗೆ ಎಂದು ಕೇಳುತ್ತಾರೆ. ಹೆಚ್ಚಿಲ್ಲ ಮೂರು ಉಳ್ಳಾಗಡ್ಡಿ, ಮೂರು ಬದನೆಕಾಯಿ ಕೇಳಿದೆ ನೀವು ಕೊಡಲಿಲ್ಲ ಎಂದು ಹೇಳುತ್ತಾಳೆ. ಮೊದಲಿನಂತೆ ರಾಶಿ ಮಾಡು, ಕೊಡುತ್ತೇವೆ ಎಂದು ಹೇಳುತ್ತಾರೆ. ಮತ್ತೆ ಭಂಡಾರ ಉಗ್ಗುತ್ತಾಳೆ. ಆಕಾಶಕ್ಕೆ ಎತ್ತರವಾಗಿ ರಾಶಿಯಾಗುತ್ತದೆ. ದೊಡ್ಡಾಕಿಯವ್ವ ನೀನು ಎಂದು ಕೇಳುತ್ತಾರೆ. ನಾನು ಹುಲಿಗೆಮ್ಮನೆಂದು ಹೇಳುತ್ತಾಳೆ. ನನಗೆ ಭಾರತ ಹುಣ್ಣಿಮೆ ಹಬ್ಬದಾಗ ಅಡ್ಡಿಗಿ ತುಂಬಿ, ಇನ್ನಷ್ಟು ಹೆಚ್ಚುತ್ತದೆ ಬೆಳೆ ಎಂದು ಹೇಳುತ್ತಾಳೆ. ಮೊದಲು ಉಳ್ಳಗಡ್ಡಿ ನಿನ್ನ ಅಡ್ಡಿಗಿ ತುಂಬಿದ ಮೇಲೆಯೇ ಮುಂದಿನ ಕೆಲಸವೆಂದು ನಾಗಸೆಟ್ಟಿ ಆಕೆಯ ಪಾದಕ್ಕೆ ಬೀಳುತ್ತಾನೆ. ಭೀಮಸೆಟ್ಟಿ ಆಕೆಯನ್ನು ಹುಡುಕಿಕೊಂಡು ಬರುತ್ತಾನೆ. ಆಕೆಯನ್ನು ಬಡಿಯಲು ಹೋಗುತ್ತಾನೆ. ಆಗ ಏನು ಮಾಡಿದ್ದೇನೆ ಎಂದು ಕೇಳುತ್ತಾಳೆ. ನನ್ನೇಕೆ ಬಡಿಯುತ್ತೀರಿ, ಎಂದು ಕೇಳುತ್ತಾಳೆ. ನಮ್ಮ ರಾಶಿಗಳನ್ನು ಮೊದಲಿನಂತೆ ಮಾಡು ಎಂದು ಭೀಮಶೆಟ್ಟಿ ಕೇಳುತ್ತಾನೆ. ಆಗ ರಾಶಿ ಮುಂದೆ ನಿಂತು ಭಂಡಾರ ಉಗ್ಗುತ್ತಾಳೆ. ಆ ರಾಶಿಗಳು ಮೊದಲಿನಂತೆ ಆಗುತ್ತವೆ. ಭಂಡಾರ ತೆಗೆದುಕೊಂಡು ಉಧೋ ಎಂದು ಉಗ್ಗುತ್ತಾಳೆ. ರಾಶಿ ಮೊದಲಿನಂತೆ ಆದವು.

ಏನು ಬೇಕು ತಾಯಿ ನಿನಗೆ ಎಂದು ಭೀಮಸೆಟ್ಟಿ ಕೇಳುತ್ತಾನೆ. ನನಗೆ ಏನು ಬೇಡ ಭಾರತ ಹುಣ್ಣಿಮೆ ದಿನ ನನಗೆ ಗುಗ್ಗರಿ ಎಡೆ ಮಾಡಿ ಹಾಕಿ ಎಂದು ಕೇಳುತ್ತಾಳೆ. ಭಾರತ ಹುಣ್ಣಿಮೆ ದಿನ ಆಕೆಗೆ ಗುಗ್ಗರಿ ಎಡೆ ಹಾಕದೇ ನಾವು ಊಟಮಾಡುವುದಿಲ್ಲವೆಂದು ಭೀಮಸೆಟ್ಟಿ ಹೇಳುತ್ತಾನೆ. ಗುಗ್ಗರಿ ಎಡೆಮಾಡಿ ಹಾಕುತ್ತಾನೆ. ಹುಲಿಗೆಮ್ಮ ಆಗಿನಿಂದ ಶಾಂತವಾಗಿ ಇರುತ್ತಾಳೆ.

### ಅಣ್ಣ ತಂಗಿ

ರೆಡ್ಡಿ ವಂಶದಾಗ ಇಬ್ಬರು ಅಣ್ಣತಂಗಿ, ಮಲ್ಲರೆಡ್ಡಿ, ಬಡವಿ ನೀಲಮ್ಮ, ಬಡವಿ ನೀಲಮ್ಮನಿಗೆ ೭ ಮಂದಿ ಗಂಡು ಮಕ್ಕಳು. ಅವರು ಬಹಳ ಬಡವರು. ಅವರ ತಂದೆ ಕೂಲಿ ಕೆಲಸ ಮಾಡುತ್ತಿದ್ದ. ಆದರೆ ಮಳೆಗಾಲದಲ್ಲಿ ಆತನಿಗೆ ಎಲ್ಲಿ ಕೆಲಸ ಸಿಗಲಿಲ್ಲ. ಅವ್ವಾ ನಿನ್ನ ಅಣ್ಣನ ಮನೆಗೆ ಹೋಗಿ ಊಟ ಮಾಡಿಕೊಂಡು ಬರುತ್ತೇವೆ ಎಂದು ಬಡವಿ ನೀಲಮ್ಮನ ಮಕ್ಕಳು ತನ್ನ ತಾಯಿಗೆ ಹೇಳುತ್ತಾರೆ. ನಿನ್ನ ಅಣ್ಣ ಬಹಳ ಶ್ರೀಮಂತ. ಆದುದರಿಂದ ಅಲ್ಲಿ ಊಟ ಮಾಡಿಕೊಂಡು ಬರುತ್ತೇವೆ ಎಂದು ಬಡವಿ ನೀಲಮ್ಮನ ಮಕ್ಕಳು ತನ್ನ ತಾಯಿಗೆ ಹೇಳುತ್ತಾರೆ. ನಿನ್ನ ಅಣ್ಣ ಬಹಳ ಶ್ರೀಮಂತ. ಆದುದರಿಂದ ಅಲ್ಲಿ ಊಟ ಮಾಡಿಕೊಂಡು ಬರುತ್ತೇವೆ ಎಂದು ಹೋಗುತ್ತಾರೆ. ಮಕ್ಕಳು ಹೋದರೆ ನೋಡುವುದಿಲ್ಲ. ಮಕ್ಕಳಿಗೆ ಹೊರಗಡೆ ನಿಂತು, ನಿಂತು ಸಾಕಾಗುತ್ತದೆ. ಡೋಣಿಯಲ್ಲಿ ಅನ್ನ ಬಿದ್ದಿರುತ್ತದೆ. ಅದು ಬೇರೆ ಮುಸರಿ ಡೋಣಿ, ಮುಸುರಿ ಡೋಣಿಯಲ್ಲಿ ಎಷ್ಟೊಂದು ಅನ್ನ ಹಾಳಾಗಿ ಹೋಗುತ್ತದೆ. ತೆಗೆದುಕೊಂಡು ಹೋಗೋಣವೆಂದು ಆಲೋಚಿಸುತ್ತಾರೆ. ಅದನ್ನು ತೆಗೆದುಕೊಂಡು ಹೋಗಿ ತಿನ್ನೋಣ ಏನು ತಮ್ಮ, ಹೋಗಿ ಬಟ್ಟೆ ತೆಗೆದುಕೊಂಡು ಬಾ ಎಂದು ಅವರಲ್ಲಿ ಅಣ್ಣ ಕಳಿಸುತ್ತಾನೆ. ಅವನು ಹೋಗಿ ಬಟ್ಟೆ ತೆಗೆದುಕೊಂಡು ಬಂದು ಎಲ್ಲ ಹುಡುಗರು ಡೋಣಿಯಲ್ಲಿರುವ ಅನ್ನು ಹಾಕಿಕೊಳ್ಳುತ್ತಾರೆ ಪುಟ್ಯಾಗ. ಬಡವಿ ನೀಲಮ್ಮನ ಮಕ್ಕಳ ಅನ್ನ ತೆಗೆದುಕೊಂಡು ಹೋಗುತ್ತಾರೆ ಎಂದು ತನ್ನ ಗಂಡನಿಗೆ ಹೇಳುತ್ತಾಳೆ.

ಹೇಗಾದರೂ ಮಾಡಿ ಆ ಅನ್ನ ಕಿತ್ತುಕೊಳ್ಳಲು ಆಳುಗಳನ್ನು ಕರೆಸುತ್ತಾಳೆ. ಹುಂಚಿ ಬರಲು ತೆಗೆದುಕೊಂಡು ಹೊಡಿಯಿರಿ ಎಂದು ಆಳುಗಳನ್ನು ಬಿಡುತ್ತಾಳೆ. ಆ ಅನ್ನ ಕಸಿದುಕೊಳ್ಳುತ್ತಾರೆ. ನಡಿಯಿರಿ ಎಂದು ಬೈಯುತ್ತಾರೆ. ನಮ್ಮ ಎಮ್ಮೆಗಳು ತಿಂದು ಹಾಲು ಕೊಡುತ್ತವೆ ಎಂದು ಬೈಯುತ್ತಾರೆ. ಅನ್ನ ತೆಗೆದುಕೊಂಡು ಹುಡುಗರನ್ನು ಬಾಸುಂಡೆ ಬರುವಂತೆ ಬಡಿದು ಕಳಿಸುತ್ತಾರೆ. ಆ ಹುಡುಗರು ಮನೆಗೆ ಅಳುತ್ತಾ ಹೋಗುತ್ತಾರೆ. ಬಡವಿ ನೀಲಮ್ಮ ಯಾಕೆ ಅಳುತ್ತೀರಪ್ಪಾ ಎಂದು ಮಕ್ಕಳನ್ನು ಕೇಳುತ್ತಾಳೆ. ಡೋಣಿಯಲ್ಲಿನ ಅನ್ನ ತೆಗೆದುಕೊಳ್ಳುತ್ತಿದ್ದೆವು, ಅದನ್ನು ಕಸಿದುಕೊಂಡು ಬಡಿದರು ಎಂದು ಹೇಳುತ್ತಾರೆ. ನೀವ್ಯಾಕೆ ಹೋಗಿದ್ದಿರಿ ಎಂದು ತಾಯಿ ಬೈಯುತ್ತಾಳೆ. ಮಲ್ಲರೆಡ್ಡಿ ನಿಮ್ಮ ಅಣ್ಣ ಇದ್ದಾನೆಂದು ಹೋಗಿದ್ದೆವು. ಬಡಿದು ಕಳಿಸಿದರೆಂದು ಹೇಳುತ್ತಾರೆ. ಪಾಪ ಬಡತನ ಕೆಟ್ಟದೆಂದು ಹೋಗಬಾರದಪ್ಪಾ ಎಂದರೂ ನೀವು ಹೋಗಿರಪ್ಪಾ ಎಂದು ಹೇಳುತ್ತಾಳೆ. ಆ ಹುಡುಗರನ್ನು ಬಡವಿ ನೀಲಮ್ಮ ಮಲಗಿಸುತ್ತಾಳೆ. ಈಕೆ ನನ್ನ ಜನ್ಮ ಇರಬಾರದೆಂದು ಮಕ್ಕಳಿಗೆ ಹಸಿವೆ ಇದೆ, ಗಂಡನಿಗೆ ಕೆಲಸವಿಲ್ಲವೆಂದು ಅಳುತ್ತಾ ಕೂಡುತ್ತಾಳೆ. ಅದೇ ಸಮಯಕ್ಕೆ ಆದಿಶಕ್ತಿ ಹುಲಿಗೆಮ್ಮ ಅಡ್ಲಿಗಿ ತೆಗೆದು ಅವರ ಮನೆಗೆ ಬರುತ್ತಾಳೆ. ಹಿಂದಕ್ಕೆ ಮೂರು ಹುಣ್ಣು, ಮುಂದಕ್ಕೆ ಮೂರು ಹುಣ್ಣು ಹಾಕಿಕೊಂಡು ಉಧೋ ಎಂದು ನಿಲ್ಲುತ್ತಾಳೆ. ಯಾರಮ್ಮ ತಾಯಿ ನಾನು ಉಪವಾಸ ಇದ್ದೇನೆ ಎಂದು ಆಕೆಯ ಮುಂದೆ ಹೇಳಲಿಲ್ಲ. ತನ್ನ ಕಷ್ಟವನ್ನು ತಾನು ನುಂಗಿಕೊಂಡು ಬಂದು ಚೆಂಬು ನೀರು ತಂದು ಪಾದ ತೊಳೆಯುತ್ತಾಳೆ. ಆ ನೀರನ್ನು ಹಿಡಿದುಕೊಂಡು ನನ್ನ ಕಷ್ಟ ಪರಿಹಾರ ಮಾಡೆಂದು ತಾನು ಕುಡಿದು ತನ್ನ ಮಕ್ಕಳಿಗೆ ಕುಡಿಸಿ, ಜಗಲಿ ಮೇಲೆ ಇಡುತ್ತಾಳೆ. ಈ ಜನ್ಮ ಇರಬಾರದೆಂದು ಹೆಂಗಾರ ಮಾಡಿ ಈ ತಾಳಿಮಾರಿ ಅಕ್ಕಿ ತಂದರಾಯಿತೆಂದು, ತಾಳಿ ತರಲು ಹೋಗುತ್ತಾಳೆ. ತಾಳಿಬಿಚ್ಚಿ ಇದನ್ನು ಮಾರಿ ಒಂದು ಸೇರು ಅಕ್ಕಿ ತಂದರಾಯಿತೆಂದು ಅಂಗಡಿಗೆ ಹೋಗುತ್ತಾಳೆ. ಅಷ್ಟರಲ್ಲಿ ಹುಲಿಗೆಮ್ಮ ಅಂಗಡಿಯವನ ಮನಸ್ಸಿಗೆ ತಾಳಿ ತೆಗೆದುಕೊಳ್ಳದೆ ಅಕ್ಕಿ ಕೊಡುವಂತ ಮನಸ್ಸು ಕೊಡುತ್ತಾಳೆ. ಅವರು ಮಾಂಗಲ್ಯ ಬೇಡವೆಂದು ನಾಲೆ ಬಂದು ಏನಾದರೂ ಕೆಲಸಮಾಡುವೆಯಂತೆ ಎಂದು ಅಕ್ಕಿಯನ್ನು ಕೊಡುತ್ತಾರೆ. ಆ ಅಕ್ಕಿಯನ್ನು ಮನೆಯಲ್ಲಿ ಇಟ್ಟು ನೀರಿಗೆ ಹೋಗುತ್ತಾಳೆ. ತನ್ನ ಮಕ್ಕಳ ಕಷ್ಟ ಹೇಳತೀರದು.

ಬಾವಿ ಹಾರೋಣವೆಂದು ಬಾವಿಗೆ ಹೋಗುತ್ತಾಳೆ. ಅಷ್ಟರಲ್ಲಿ ಆಕೆಯ ಮನದಲ್ಲಿ ಹುಲಿಗೆಮ್ಮ ಬಂದು ನೀನು ಬಾವಿ ಹಾರಬೇಡ ಮಗಳೆ ಹಿಂದಕ್ಕೆ ಹೋಗು ಎಂದು ಮನಸ್ಸಿನಲ್ಲಿ ಹೇಳುತ್ತಾಳೆ. ವಾಪಾಸು ಹೋಗುತ್ತಾಳೆ. ಕೊಡ ತಂದು ಅಕ್ಕಿ ತೊಳೆದು ಒಲೆ ಮೇಲೆ ಇಟ್ಟು ಮತ್ತೆ ಹಾವಿನ ಹುತ್ತಿನಾಗೆ ಕೈ ಇಟ್ಟು ಸಾಯೋಣವೆಂದು ತೀರ್ಮಾನ ಮಾಡುತ್ತಾಳೆ. ಆ ಹುತ್ನಾಗೆ ಏಳು ಹೆಡೆ ಸರ್ಪಕ್ಕೆ ಹುಣ್ಣು ಆಗಿ ನಿದ್ದೆ ಇರುವುದಿಲ್ಲ. ಕೈ ಇಡುತ್ತಾಳೆ. ಹುಲಿಗೆಮ್ಮ ಅಲ್ಲಿಗೆ ಬಂದು ಬಡ ನೀಲಮ್ಮನ ಕೈಗೆ ಆಶೀರ್ವಾದ ಮಾಡುತ್ತಾಳೆ. ಬಡವಿ ನೀಲಮ್ಮನ ಕೈ ಹಾವಿಗೆ ಬಡಿದ ತಕ್ಷಣ ಅದರ ಹುಣ್ಣು ಒಡೆಯುತ್ತದೆ. ಅದಕ್ಕೆ ವಿಪರೀತ ಆನಂದವಾಗುತ್ತದೆ. ಯಾವ ತಾಯಿ ಆಗಿದ್ದಾಳು ಎಷ್ಟೋ ದಿನದಿಂದ ನನಗೆ ನಿದ್ದೆ ಇದ್ದಿಲ್ಲ. ಯಾರಾಗಿರಬಹುದು ಎಂದು ಹಾವು ನೋಡುತ್ತದೆ. ಹುಲಿಗೆಮ್ಮ ಅಲ್ಲಿಗೆ ಬಂದು ಕಷ್ಟವಿದೆ ಎಂದು ಬಂದಿದ್ದಾಳೆ. ನೀನು ಹೋಗಿ ನಾಗರಾಜ ಆಕೆಯ ಕಷ್ಟ ಈಡೇರಿಸಪ್ಪ ಎಂದು ಹೇಳುತ್ತಾಳೆ. ಆಗ ನಾಗರಹಾವು ಆಕೆಯ ಕೈಗುಂಟ ಬಂದು ಉಡ್ಯಾಕ (ಸೆರಗಿನಲ್ಲಿ) ಕುಳಿತುಕೊಳ್ಳುತ್ತದೆ. ವಾಪಸ್ಸು ಮನೆಗೆ ಬರುತ್ತಾಳೆ. ಬಂದವಳು ನೋಡುತ್ತಾಳೆ ಇದನ್ನು ಸೆರಗಿನಿಂದ ಹೊರಕ್ಕೆ ಬಿಡಬಾರದೆಂದು

ಅದನ್ನು ಬಡಿಯುತ್ತಾಳೆ. ಅದು ಮಾಯದ ಸರ್ಪ ಸತ್ತಂತೆ ಇರುತ್ತದೆ. ಅದನ್ನು ಗಡಿಗೆಯಲ್ಲಿ ತುಂಡುಗಳನ್ನು ಮಾಡಿ ಹಾಕುತ್ತಾಳೆ. ಕುಚ್ಚಲು ಇಡುತ್ತಾಳೆ.

ಯಾವಾಗ ಕುಚ್ಚಲು ಇಟ್ಟಳೋ ಮಕ್ಕಳು ಏನವ್ವಾ ಅದು ಎಂದು ನೋಡುತ್ತಾರೆ. ತಾಯಿಯನ್ನು ಕೇಳುತ್ತಾರೆ. ಮೀನು ತಂದಿದ್ದೇನೆ ನಿಮಗೆ ಎಂದು ಹೇಳುತ್ತಾಳೆ. ತಾಯಿ ಮೀನು ತಂದಿದ್ದಾಳೆ ಎಂದು ಮಕ್ಕಳಿಗೆ ಸಂತೋಷವಾಗುತ್ತದೆ. ನಾನು ಬರುವ ತನಕ ಯಾರು ತಿನ್ನಬೇಡಿ ಎಂದು ಹೊರಕ್ಕೆ ನೀರು ತರಲು ಹೋಗುತ್ತಾಳೆ. ತಾಯಿ ನೀರು ತರಲುಹೋದ ಕೂಡಲೇ ಮಕ್ಕಳೆಲ್ಲ ಸೇರಿ ಚೌಟಿನಿಂದ ತೆಗೆದು ತಿನ್ನಲು ಮುಂದಾಗುತ್ತಾರೆ. ಬಾಯಲ್ಲಿ ಇಟ್ಟುಕೊಳ್ಳುತ್ತಾರೆ. ಕಲ್ಲು, ಕೈಯಲ್ಲಿ ಇಟ್ಟು ಕೊಳ್ಳುತ್ತಾರೆ ಕಲ್ಲು, ಹಲ್ಲಿಗೆ ನುರಿಯುವುದಿಲ್ಲ. ಅಷ್ಟೊತ್ತಿಗೆ ತಾಯಿ ಬರುತ್ತಾಳೆ. ಇದೆಂತ ಮೀನು ಕಲ್ಲಿಗೆ ನುರಿಯುತ್ತಿಲ್ಲ, ಹಲ್ಲಿಗೆ ನುರಿಯುತ್ತಿಲ್ಲವೆಂದು ತಾಯಿಯನ್ನು ಬೈಯುತ್ತಾರೆ.

ಬಡವಿ ನೀಲಮ್ಮ ತಾನು ತೆಗೆದುಕೊಂಡು ನೋಡುತ್ತಾಳೆ. ಬಂಗಾರ... ಕುದ್ದಂತೆಲ್ಲ ಬಂಗಾರ, ಮುತ್ತು, ರತ್ನ. ಹುಲಿಗೆಮ್ಮನ ಪಾದ ತೊಳೆದು ನೀರು ನೋಡುತ್ತಾಳೆ. ಅದರಲ್ಲಿ ಮುತ್ತು, ರತ್ನ, ಹುಲಿಗೆಮ್ಮನ ಮಹಿಮೆಯಿಂದ ಇದೆಲ್ಲವೆಂದು ಬಡವಿ ನೀಲಮ್ಮ ತಿಳಿಯುತ್ತಾಳೆ. ಊಟ ಮಾಡುತ್ತಾರೆ.

ಮಲ್ಲರೆಡ್ಡಿಯನ್ನು ನೋಡಬೇಕೆಂದು ಹುಲಿಗೆಮ್ಮ ಉಧೋ ಎಂದು ಅವನ ಮನೆ ಮುಂದೆ ನಿಲ್ಲುತ್ತಾಳೆ. ಇವಳ್ಯಾವಳೋ ಜೋಗುತಿ ಬಂದಾಳೆಂದು ಮಲ್ಲರೆಡ್ಡಿ ಹೇಳುತ್ತಾನೆ. ನಾವು ಜೋಗತಿಯರಿಗೆ ನೀಡಲ್ಲವೆಂದು ಮುಂದಕ್ಕೆ ಕಳಿಸುತ್ತಾನೆ. ಆಕೆಯನ್ನು ದೂಡುತ್ತಾರೆ. ಬಡವಿ ನೀಲಮ್ಮನ ಹತ್ತಿರವಿರುವ ಭಕ್ತಿ ಇವನಲ್ಲಿ ಇಲ್ಲ, ಇವನ ಸೊಕ್ಕು ಅಡಗಿಸಬೇಕೆಂದು ಉಡಿಯಲ್ಲಿ ಭಂಡಾರ ಉಗ್ಗುತ್ತಾಳೆ. ಅವನಿಗೆ ಬಡತನ ಬರುತ್ತದೆ. ಬಡವಿ ನೀಲಮ್ಮ ಶ್ರೀಮಂತಳಾಗುತ್ತಾಳೆ. ಶುಕ್ರವಾರ, ಮಂಗಳವಾರ ಹುಲಿಗೆಮ್ಮನ ಧ್ಯಾನ ಮಾಡುತ್ತಾಳೆ. ಇದರಂತೆ ಇರಬೇಕಾದರೆ ಮಲ್ಲರೆಡ್ಡಿ ಹೆಂಡತಿ ಕಟ್ಟಿಗೆ ಹೊತ್ತುಕೊಂಡು ಬಂದು ಮಾರುತ್ತಿರುತ್ತಾಳೆ.

ಬಡವಿ ನೀಲಮ್ಮ ಮಕ್ಕಳಿಗೆ ಹೇಳುತ್ತಾಳೆ. ನಮ್ಮ ಅಣ್ಣನ ಹೆಂಡತಿ ಕಟ್ಟಿಗೆ ಮಾರುತ್ತಾಳೆ ಕರೆದು ಬನ್ನಿ ಎಂದು ಹೇಳುತ್ತಾಳೆ. ಮಕ್ಕಳು ಬರುವುದಿಲ್ಲ, ನಮ್ಮನ್ನು ಬಡಿದಿದ್ದಾಳೆ ನಾವು ಕರೆಯುವುದಿಲ್ಲವೆಂದು ಹೇಳುತ್ತಾರೆ. ಅಣ್ಣತಮ್ಮಂದಿರು ಒಟ್ಟುಗೂಡಿ, ನೀನೇ ಕರೆ ಎಂದು ಹೇಳುತ್ತಾಳೆ. ಅಡಿಕಿ, ಎಲೆ, ಕುಬುಸ ಕೊಟ್ಟು ಹಣ ಕೊಟ್ಟಿದ್ದಕ್ಕಾಗಿ ಕುಬುಸ, ಹಣ ಕೊಟ್ಟ ಬಗ್ಗೆ ಗಂಡನಿಗೆ ಹೇಳುತ್ತಾಳೆ. ಮರುದಿನವು ಕಟ್ಟಿಗೆ ಮಾರಲು ಅಲ್ಲಿಗೆ ಹೋಗುತ್ತಾಳೆ. ಗಂಡನು ಅಲ್ಲಿಗೆ ಹೋಗುತ್ತಾನೆ. ತಂಗಿ ಬಡವಿ ನೀಲಮ್ಮನ ಮನೆಗೆ. ಅಣ್ಣನ ಹೆಂಡತಿ ಬಡವಿ ನೀಲಮ್ಮನನ್ನು ಗುರುತಿಸುತ್ತಾಳೆ. ನಿನ್ನ ತಂಗಿ ಎಂದು ಹೇಳುತ್ತಾಳೆ. ಅವರ ಮನೆ ಮುಟ್ಟು ಸಾಮಾನುಗಳೆಲ್ಲ ನಮಗೆ ಸೇರಿದವು. ಅವುಗಳನ್ನು ತೆಗೆದುಕೊಂಡು ಹೋಗಿ ನಿನ್ನ ತಂಗಿ ಕಟ್ಟಿಸಿಕೊಂಡಿದ್ದಾಳೆ ಎಂದು ದೂರುತ್ತಾಳೆ. ನೀನು ವ್ಯಾಪಾರಕ್ಕೆ ಹೋದಾಗ ತೆಗೆದುಕೊಂಡು ಹೋಗಿರಬೇಕೆಂದು ಹೇಳುತ್ತಾಳೆ. ಬಡವಿ ನೀಲಮ್ಮನ ಅಣ್ಣ ಹಾಗಾದರೆ ನಮ್ಮ ತಂಗಿ ಮನೆಗೆ ಹೋಗಿ ನೋಡುತ್ತೇನೆ ಎಂದು ಹೇಳುತ್ತಾನೆ. ಎಷ್ಟೊತ್ತನ ಆಗಲಿ ನಿನ್ನ ತಂಗಿಯನ್ನು ಕಡಿದು ಬರಬೇಕೆಂದು ಹೆಂಡತಿ ಹೇಳುತ್ತಾಳೆ. ಹುರುದುಂಬಿಸಿ ಹೇಳುತ್ತಾಳೆ. ಕಟ್ಟಿಗೆ ಮಾರಲು ತಂಗಿ ಮನೆಗೆ

ಹೋಗುತ್ತಾಳೆ. ತಂಗಿ ಕಟ್ಟಿಗಿ ಮಾರಲು ಬಂದ ಅಣ್ಣನಿಗೆ ಕರೆಯುತ್ತಾಳೆ. ಕಟ್ಟಿಗೆ ಮಾರಲು ತಂಗಿ ಮನೆಗೆ ಹೋಗುತ್ತಾನೆ. ತಂಗಿ ಕಟ್ಟಿಗಿ ಮಾರಲು ಬಂದ ಅಣ್ಣನಿಗೆ ಕರೆಯುತ್ತಾಳೆ. ಕಟ್ಟಿಗೆ ಹಾಕಿದ ಕುಡುಗೋಲು ತೆಗೆದುಕೊಂಡು ತಂಗಿಯನ್ನು ಕಡಿಯಲು ಮುಂದಾಗುತ್ತಾನೆ. ಹುಲಿಗೆಮ್ಮ ಅದೇ ಹೊತ್ತಿಗೆ ಮಂಗಳವಾರ ದಿನ ಉಧೋ ಎಂದು ನಿಲ್ಲುತ್ತಾಳೆ. ಬಡವಿ ನೀಲಮ್ಮ ಬಂಗಾರದ ಮಂಚದ ಮೇಲೆ ಕುಳಿತಾಕಿ ಇಳಿದು ಬಂದು ಆಕೆಯ ಪಾದಕ್ಕೆ ತುಂಬಿದ ಕೊಡದ ನೀರು ಹಾಕುತ್ತಾಳೆ. ಆಕೆಯ ಮಕ್ಕಳು ಸೊಸೆಯಂದಿರು ಎಲ್ಲರೂ ಭಕ್ತಿಯಿಂದ ನಿಲ್ಲುತ್ತಾರೆ. ಹುಲಿಗೆಮ್ಮ ದೇವಿಯನ್ನು ಒಳಕ್ಕೆ ಬರಮಾಡುತ್ತಾಳೆ. ಬಡವಿ ನೀಲಮ್ಮ. ಬಡವಿ ನೀಲಮ್ಮ ಅಣ್ಣನನ್ನು ಹುಲಿಗೆಮ್ಮ ಕೇಳುತ್ತಾಳೆ. ನಿನ್ನ ಹೆಂಡತಿ ಏನು ಹಚ್ಚಿ ಕಳಿಸಿದ್ದಾಳೆಪ್ಪಾ ಎಂದು. ಇದ್ದದ್ದೆಲ್ಲವನ್ನು ಇದ್ದಂತೆ ಹೇಳುತ್ತಾಳೆ ಎಂದು ಗಾಬರಿಯಾಗುತ್ತಾನೆ. ಇದೆಲ್ಲ ಬಡವಿ ನೀಲಮ್ಮ ಆದಿಶಕ್ತಿ ಹುಲಿಗೆಮ್ಮನಿಂದ ಪಡೆದಿದ್ದಾಳಪ್ಪ. ನಿನ್ನ ಹೆಂಡತಿ ಮಾತು ಕೇಳಿ ಬಂದಿಯಲ್ಲ ಎಂದು ಹೇಳುತ್ತಾಳೆ. ಹುಲಿಗೆಮ್ಮ ಬಿಚ್ಚಿ ಹೇಳುತ್ತಾಳೆ. ನಿನ್ನ ಮನೆ ಹಾಳಾಗಲು ನಿನ್ನ ಸೊಕ್ಕು ನಿನ್ನ ಹೆಂಡತಿ ಸೊಕ್ಕಿನಿಂದ ಹೀಗಾಗಿದೆ. ಮೊದಲಿನಂತೆ ಆಗುವೆ ಎಂದು ಹೇಳುತ್ತಾಳೆ. ತಾಯಿ ನಾವು ಎಂದೆಂದೂ ಅಡ್ಡಿಗಿ ಹಿಡಿದವರಲ್ಲಾ. ನಮ್ಮ ತವರು ಮನೆಯವರು ನೀನೇನೋಡಪ್ಪಾ ಎಂದಾಗ, ಹುಲಿಗೆಮ್ಮ ನನ್ನ ಸ್ಥಳಕ್ಕೆ ಹುಲಿಗಿ ಕ್ಷೇತ್ರಕ್ಕೆ ಬಾ ಎಂದು ಹೇಳುತ್ತಾಳೆ. ಮಲ್ಲರೆಡ್ಡಿ ಹುಲಿಗಿ ಕ್ಷೇತ್ರಕ್ಕೆ ಹೋಗಿ ಹುಲಿಗೆಮ್ಮನಿಗೆ ನಡೆದುಕೊಂಡ ನಂತರ ಮನೆತನ ಉದ್ಧಾರವಾಯಿತು.

## ಸದ್ದು ಸದ್ದುಲೋ ಹನುಮ, ಗದ್ದಲು ಬಹಳ ಮಾಡಬೇಡ

ವಿಷ್ಣು ಅವತಾರದಾಗ ರಾಮನ ದೂತ ಆಂಜನೇಯ, ಮಾರುತಿ ವೇಷ ಆದಾಗ, ಬಳೆ ತೆಗೆದುಕೊಂಡು ಹೋಗುತ್ತಾನೆ. ಹೋಗುತ್ತಾ, ಹೋಗುತ್ತಾ ಬಳೆ ಮಾರಿಕೊಳ್ಳುತ್ತಾ ಹೋಗುತ್ತಾ... ಇರುವಾಗ ಒಂದು ಸಣ್ಣ ಹುಡುಗಿ ಎದುರಿಗೆ ಬರುತ್ತಾಳೆ. ಏನಪ್ಪಾ ಎಂದು ಕೇಳಿದಳು. ಹಾಕುತ್ತೇನೆ ಬಾರಮ್ಮಿ ಬಳೆ ಹಾಕುತ್ತೇನೆ ಬಾ ಎಂದು ಹತ್ತಿರಕ್ಕೆ ಕರೆದ. ಹತ್ತಿರಕ್ಕೆ ಬಂದಳು. ಹತ್ತಿರಕ್ಕೆ ಬಂದ ತಕ್ಷಣ ಒಳ್ಳೆಯ ಹರೆಯದ ಸುಂದರಿಯಾಗಿ ಕಂಡಳು. ಈಗ ನಾನು ನೋಡಿದೆ ಹುಡುಗಿಯಾಗಿದ್ದಳು, ತಿರುಗಿ ನನ್ನ ಹತ್ತಿರಕ್ಕೆ ಬಂದ ಮೇಲೆ ಎಷ್ಟು ಎತ್ತರ ಕಾಣುತ್ತಾಳಲ್ಲ ಎಂದು ಆಶ್ಚರ್ಯವಾಗಿ ತಾರಮ್ಮ ಕೈ ಎಂದನು. ಕೈ ಕೊಟ್ಟಳು. ಒಂದು ಕೈ ಕೊಡು ಎಂದರೆ ಒಂಭತ್ತು ಕೈ ತೋರಿಸುತ್ತಾಳೆ. ಒಂದು ಕೈ ಕೊಡಮ್ಮ ಅಳತೆ ನೋಡುತ್ತೇನೆ ಎಂದು ಕೇಳಿದರೆ, ಒಂಭತ್ತು ಕೈ ಕೊಡುತ್ತಾಳೆ. ಅಬ್ಬಬ್ಬಾ ನಾನು ಹೆದರಿಬಿಟ್ಟೆನ್ನಾ, ಯಾರು ನೀನು ಎಂದು ಕೇಳಿದನು.

"ಸದ್ದು ಸದ್ದುಲೋ ಹನುಮ, ಗದ್ದಲು ಬಹಳ ಮಾಡಬೇಡ ಇದ್ದಲೇ ನಿನ್ನ ಇರಗೊಡವೆ" ಎಂದಳು. ನಾನು ಇದ್ದಲ್ಲೇ ಹೇಗೆ ಇರಗೊಡವೆ ಎಂದು ಕೇಳುತ್ತಾನೆ ಬಳೆಗಾರ. ನೀನು ಆಂಜನೇಯ, ನೀನು ಆಂಜನೇಯನಾಗಿ ಊರೂರಿಗೆ, ಹಳ್ಳಿ ಹಳ್ಳಿಗೆ ಇರು ನಾನು ಹುಲಿಗೆಮ್ಮ, ನಾನು ಜೋಗುತಿಯಾಗಿ ಬರುತ್ತೇನೆ. ನೀನು ಯಾವ ಊರಾಗ ಇರುತ್ತೀಯೋ ನಾನು ಆ ಊರಿಗೆ ಬರುತ್ತೇನೆ ಎಂದು ಹೇಳುತ್ತಾಳೆ, ಇಬ್ಬರು ವಚನ ಕೊಡುತ್ತಾರೆ.ಆತ ಆಂಜನೇಯನ ರೂಪ, ಈಕೆ ಹುಲಿಗೆಮ್ಮನ ರೂಪ, ಹೋಗಪ್ಪಾ ಆಂಜನೇಯಾ ಹುಲಿಗೆಮ್ಮ ಬರುತ್ತಾಳೆ ಎಂದು ಮುಂದಿನ ಊರಾಗ ಹೇಳು ಹೋಗು, ಹುಲಿಗೆಮ್ಮ ಬರುತ್ತಾಳೆ ವರ್ಷಕ್ಕೆ ಐದು ಬಳೆ ಕೊಡಿರಿ ಎಂದು ಹೇಳು

ಹೋಗಪ್ಪ ಎಂದು ಹುಲಿಗೆಮ್ಮ ಹೇಳುತ್ತಾಳೆ. ಹಾಗಾಗಿ ಹುಲಿಗೆಮ್ಮನಿಗೆ ಹಸಿರು ಬಳೆ ಇಷ್ಟ. ಹುಲಿಗೆಮ್ಮ ಆದಿಶಕ್ತಿ.

**ಪರಿಷೆ ಮತ್ತು ಮಾನ್ಯೇವು**

ಊರು ಹೊಸೂರು, ಅಲ್ಲಿ ತಾಯಿ ಮುದ್ದಮ್ಮನಿದ್ದಳು. ಆಕೆಗೆ ಇಬ್ಬರು ಮಕ್ಕಳು. ಹುಲಿಗೆಮ್ಮ ಮತ್ತು ಹೊಸೂರಮ್ಮನೆಂದು ಇವರಿಬ್ಬರು ಅಕ್ಕತಂಗಿಯರು. ಹುಲಿಗೆಮ್ಮನಿಗೆ ಕೊಟ್ಟದ್ದು ಮಂದಿ ಪಾಲಾಗುತ್ತಿತ್ತು. ಹೊಸೂರಮ್ಮನಿಗೆ ಕೊಟ್ಟದ್ದು ಹಾಗೆಯೇ ಇರುತ್ತಿತ್ತು. ಹುಲಿಗೆಮ್ಮ ಚಿಕ್ಕ ಹುಡುಗಿ ಇದ್ದಾಗಿನಿಂದ ಆಕೆಗೆ ಜನ ಬಳಕೆ ಜಾಸ್ತಿ. ಆದರೆ ಹೊಸೂರಮ್ಮನಿಗೆ ಜನ ಬಳಕೆ ಇಲ್ಲ. ಹೊಸೂರಮ್ಮ ಚಿಕ್ಕ ಹುಡುಗಿ ಇದ್ದಾಗಿನಿಂದ ಆಕೆಗೆ ಜನ ಬಳಕೆ ಇಲ್ಲ ತನ್ನದೇನೋ ತಾನೇನೋ.

ಹುಲಿಗೆಮ್ಮನಿಗೆ ತಾಯಿ ಹಾಗೂ ಯಾರಾದರೂ, ಏನಾದರೂ ಕೊಟ್ಟರೆ ಆಕೆ ಮಂದಿಗೆ ಕೊಟ್ಟು ಬರಿಕೈಯಲ್ಲಿ ಇರುತ್ತಿದ್ದಳು. ಹೊಸೂರಮ್ಮನಿಗೆ ಏನಾದರೂ ಕೊಟ್ಟರೆ ಅದನ್ನು ಆಕೆ ಯಾರಿಗೂ ಕೊಡುತ್ತಿರಲಿಲ್ಲ. ಒಂದು ಸಲ ಹೊಸ ಸೀರೆಯನ್ನು ಹುಲಿಗೆಮ್ಮನಿಗೆ ಹಾಗೂ ಹೊಸೂರಮ್ಮನಿಗ ತಾಯಿ ಮುದ್ದಮ್ಮ ಉಡಿಸಿದಳು. ಉಡಿಸಿ ಕಳಿಸಿದಳು. ಹುಲಿಗೆಮ್ಮ ತಾನು ಉಟ್ಟ ಸೀರೆಯನ್ನು ಮಂದಿಗೆ ಕೊಟ್ಟಳು. ಹೊಸೂರಮ್ಮ ಆ ಸೀರೆಯನ್ನು ಯಾರಿಗೂ ಕೊಡಲಿಲ್ಲ. ಮುದ್ದಮ್ಮ ಕೇಳಿದಳು, ನಿನ್ನ ತಂಗಿಯ ಮೇಲೆ ಏಕೆ ಸೀರೆ ಇಲ್ಲವೆಂದು. ನೀನು ಮನೆಯಲ್ಲಿ ಇರುತಕ್ಕವಳಲ್ಲವೆಂದು ತಾಯಿ ಮುದ್ದಮ್ಮ ಹುಲಿಗೆಮ್ಮನಿಗೆ ಹೇಳುತ್ತಾಳೆ. ಸಿಟ್ಟಿನಿಂದ ಹೇಳುತ್ತಾಳೆ. ಸೀರೆ ಮಂದಿಗೆ ಕೊಟ್ಟಮೇಲೆ ನೀನು ಮನೆಯಲ್ಲಿ ಇರುತಕ್ಕವಳಲ್ಲವೆಂದು ಮುದ್ದಮ್ಮ ಹೇಳುತ್ತಾಳೆ. ಮುದ್ದಮ್ಮ ಹುಲಿಗೆಮ್ಮನಿಗೆ ಮನೆ ಬಿಟ್ಟು ಹೋಗು ಎಂದು ಹೇಳುತ್ತಾಳೆ. ಹುಲಿಗೆಮ್ಮ ಹೊಸೂರಿನಿಂದ ಹುಲಿಗಿಗೆ ಹಾರುತ್ತಾಳೆ. (ಹೊಸೂರಿನಲ್ಲಿ ಇರುವ ಪಾದಗಟ್ಟಿಯಿಂದ ಹುಲಿಗೆ ಪೂಲ್‌ನ ಕೆಳಗೆ ಪಾದಗಟ್ಟಿ ಇದೆ. ಅಲ್ಲಿಂದ ಆ ಕಡೆ ಹಾರಿದ್ದಾಳೆ. ಎರಡು ಕಡೆ ಪಾದಗಟ್ಟಿ ಇದೆ).

ಹುಲಿಗೆಮ್ಮನ ಜಾತ್ರೆ ಮೊದಲು ಹೊಸೂರಮ್ಮನ ಜಾತ್ರೆ ನಂತರ ನಡೆಯುತ್ತದೆ. ಹುಣ್ಣಿಮೆಗೆ ಹುಲಿಗೆಮ್ಮನಿಗೆ ಕಂಕಣ ಕಟ್ಟುತ್ತಾರೆ. ಅಮವಾಸ್ಯೆಗೆ ಹೊಸೂರಮ್ಮನಿಗೆ ಕಂಕಣ ಕಟ್ಟುತ್ತಾರೆ. ಹುಲಿಗೆಮ್ಮ ಜನರಿದ್ದಲ್ಲಿ ಇರುವಾಕೆ. ಏನು ಕೊಟ್ಟರೂ ಮಂದಿಗೆ ದಾನ ಮಾಡುವ ಬುದ್ಧಿ ಹುಲಿಗೆಮ್ಮನದು. ಹುಲಿಗೆಮ್ಮನಿಗೆ ಜನರೆಂದರೆ ತುಂಬಾ ಇಷ್ಟ. ಹುಲಿಗೆಮ್ಮ ನನಗೆ ಜನಬೇಕು ಎಂದು ಹಾರಿಬಂದಳು. ಹೊಸೂರಿನಿಂದ ಹುಲಿಗೆಮ್ಮ ಹೇಳುತ್ತಾಳೆ. ಜನ ನನಗೆ ಬೇಕು, ಹೊಸೂರಮ್ಮ ನೀನು ಆಸ್ತಿವಂತೆ. ನಿನಗೆ ಆಸ್ತಿ ಇರಲಿ ನನಗೆ ಜನವಿರಲಿ. ನಾನು ದಾನ ಮಾಡುವವಳು. ನನಗೆ ಜನಬೇಕು ಎಂದು ಹುಲಿಗೆಮ್ಮ ಹೊಸೂರಿನಿಂದ ಹುಲಿಗಿಗೆ ಬಂದಿದ್ದಾಳೆ ಎಂದು ಕತೆ ಇದೆ.

**ಚೌಡಿಭಟ್ಟರ ಕಥೆ**

ಕಾನುಕಾಯನ ಗೋತ್ರಜರಾದ ವೆ. ಬ್ರ. ಶ್ರೀ ಚೌಡಿಭಟ್ಟ ಎಂಬ ಹೆಸರಿನ ಋತ್ವಿಜರು ಅಂದು ಶ್ರೀ ಸೋಮೇಶ್ವರ ಲಿಂಗದ ಪೂಜೆ ಮಾಡುತ್ತಾ ಬಂದಿದ್ದರು. ಸೌ. ಅಂಚಿಕಟ್ಟೆ ಅವರ ಧರ್ಮಪತ್ನಿ. ಪತಿ ಪತ್ನಿಯರಿಬ್ಬರೂ

ಶಿವಾಲಯದಲ್ಲಿ ಸೇವೆ ಸಲ್ಲಿಸುತ್ತ ಆದರ್ಶ ಜೀವನ ನಡೆಸುತ್ತಿದ್ದರು. ಗ್ರಾಮ ನಿವಾಸಿಗಳಿಗೆ ಧಾರ್ಮಿಕ ಜೀವನದಲ್ಲಿ ಸದಾಕಾಲವೂ ಸಹಾಯ ಸಹಕಾರಗಳನ್ನೀಯುತ್ತಿದ್ದರಲ್ಲದೇ, ಭಟ್ಟ ದಂಪತಿಗಳು, ಸಮಾಜ ಸೇವೆಯಲ್ಲಿಯೂ ಮಾರ್ಗದರ್ಶನ ನೀಡುತ್ತಿದ್ದರು. ಗ್ರಾಮ ನಿವಾಸಿಗಳು ಸಹ ಭಟ್ಟರಲ್ಲಿ, ಭಕ್ತಿ ಹಾಗೂ ಗೌರವ ಸಲ್ಲಿಸುವಲ್ಲಿ ಹಿಂದೆ ಇರಲಿಲ್ಲ. ಮಳೆಯ ತುಟಾಗ್ರತೆಯಿಂದಾಗಿ ಈ ಪ್ರದೇಶ ಯಾವಾಗಲೂ ಕೃಷಿಯಲ್ಲಿ ಹಿಂದುಳಿದಿದ್ದಾಗಿತ್ತು. ತುಂಗಭದ್ರೆಯ ನೀರನ್ನು ಕೃಷಿಗೆ ಉಪಯೋಗಿಸಬೇಕೆನ್ನುವ ಯೋಚನೆಯಲ್ಲಿ ಚೌಡಿಭಟ್ಟರು ಸದ ಮಗ್ನರಾಗಿರುತ್ತಿದ್ದರು. ಗ್ರಾಮ ನಿವಾಸಿಗಳ ಸಹಕಾರದಿಂದ ನದಿಗೆ ಅಡ್ಡ ಗೋಡೆ ನಿರ್ಮಿಸಿ ಕಾಲುವೆ ತೋಡಿ ಈ ಪ್ರದೇಶದ ನೀರಾವರಿಗೆ ವ್ಯವಸ್ಥೆಗೊಳಿಸಿದರು. ಈ ಪ್ರದೇಶದ ಜನರ ಆರ್ಥಿಕ ಜೀವನಕ್ಕೆ ಇದೊಂದು ಭಧ್ರ ಬುನಾದಿಯಾಯಿತು. ಚಾಲುಕ್ಯ ವಿಕ್ರಮ ಶಕೆ ೧೩ರಲ್ಲಿ, ಅಂದಿನ ಆಳರಸರು ಚೌಡಿಭಟ್ಟರ ಈ ಘನ ಕಾರ್ಯಕ್ಕೆ ಮೆಚ್ಚಿ ಅವರಿಗೆ ಕೆಲ ದತ್ತಿಗಳನ್ನು ನೀಡಿದರು. ಈ ಐತಿಹಾಸಿಕ ಘಟನೆಯ ವಿವರವನ್ನು ಸಾರಿ ಹೇಳುವ ಶಿಲಾಶಾಸನವು ಶ್ರೀ ಸೋಮೇಶ್ವರ ದೇವಾಲಯದಲ್ಲಿ ನಿಂತಿದೆ.

ಚೌಡಿಭಟ್ಟರ ವಂಶಜರೇ ಆದ ಸೋಮನಾಥ ಭಟ್ಟರು ಅವರ ಪೂರ್ವಜರಂತೆಯೇ ಧಾರ್ಮಿಕ, ಸಾಮಾಜಿಕ ಪ್ರವೃತ್ತಿಯನ್ನು ಹೊಂದಿ ಈ ಪ್ರದೇಶದಲ್ಲಿ ಘನತೆ ಮೆರದವರಾಗಿದ್ದರು. ಶ್ರೀ ಸೋಮನಾಥ ಭಟ್ಟರೂ ಸಹ ಶಿವಾರ್ಚನೆ ಮಾಡುತ್ತಿದ್ದರು. ಅಲ್ಲದೆ ಶಕ್ತಿಯ ಆರಾಧಕರೂ ಆಗಿದ್ದರು. ಶಕ್ತಿಯ ಮಹಿಮೆಯನ್ನು ಕುರಿತು ತಮ್ಮ ಆಸ್ತಿಕ ಅನುಯಾಯಿಗಳಿಗೆ ಸದಾ ಉಪದೇಶ ನೀಡುತ್ತಿದ್ದರು. ಭಟ್ಟರ ಉಪದೇಶಾಮೃತದಲ್ಲಿ ವಿಶೇಷ ಶ್ರದ್ಧೆ ಹಾಗೂ ಭಕ್ತಿ ಇರಿಸಿದವರೆಂದರೆ, ಇದೇ ಗ್ರಾಮ ನಿವಾಸಿಗಳಾದ ನಾಗಜೋಗಿ ಮತ್ತು ಬಸವಜೋಗಿ ಎಂಬುವರು. ಇವರೀರ್ವರು ಗಂಗಾಮತಸ್ಥರಿದ್ದು ದೇವಿಯಲ್ಲಿ ಅನನ್ಯ ಭಕ್ತಿ ಹೊಂದಿದವರಾಗಿದ್ದರು. ವೇದಾಂತ ವಿಚಾರಗಳನ್ನು ಹೊಂದಿದ ದೇವಿ ಭಾಗವತದ ಪ್ರಸಂಗಗಳನ್ನು ಸಣ್ಣ ಸಣ್ಣ ಕತೆಗಳನ್ನಾಗಿ ಅನೇಕ ಉದಾಹರಣೆಗಳೊಂದಿಗೆ, ಭಟ್ಟರು ಇವರೀರ್ವರಿಗೂ ತಿಳಿಸಿ ಹೇಳುತ್ತಿದ್ದರು. ನಾಗಜೋಗಿ ಮತ್ತು ಬಸವ ಜೋಗಿಯವರ ಮನೆಯಲ್ಲಿ ಸವದತ್ತಿಯ ದೇವಿ ಎಲ್ಲಮ್ಮನಿಗೆ ಪೂಜಾದಿಗಳು ಅವರ ಪೂರ್ವಜರಿಂದ ಸಲ್ಲಿಸಲ್ಪಡುತ್ತಿದ್ದವು. ಪ್ರತಿ ಹುಣ್ಣಿಮೆಗೂ ದೇವಿ ಎಲ್ಲಮ್ಮನ ದರ್ಶನಕ್ಕೆ ಅವರ ಪೂರ್ವಜರು ಸವದತ್ತಿಗೆ ಹೋಗಿ ಬರುತ್ತಿದ್ದಂತೆಯೇ ನಾಗಜೋಗಿ ಬಸವಜೋಗಿಯವರು ಸಹ ಅದೇ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದವರಾಗಿದ್ದರು. ಅವರು ಈ ಧಾರ್ಮಿಕ ಸಂಪ್ರದಾಯಕ್ಕೆ, ಶ್ರೀದೇವಿ ಎಲ್ಲಮ್ಮನಲ್ಲಿ ಅನನ್ಯ ಭಕ್ತಿಯುಳ್ಳವರಾದ ನಾಗಜೋಗಿ ಬಸವಜೋಗಿಯವರಿಗೆ, ಭಟ್ಟರ ವೇದಾಂತ ಪೂರಿತ ಉಪದೇಶ ಪರಿಪಕ್ವತೆಯನ್ನು ತಂದಿದುದರಲ್ಲಿ ಸಂಶಯವಿಲ್ಲ. ಅವರ ಭಕ್ತಿಯ ಪರಾಕಾಷ್ಠತೆಯ ಫಲವೇ ಶ್ರೀದೇವಿ ಹುಲಿಗೆಮ್ಮನ ಅವತಾರಕ್ಕೆ ಕಾರಣವಾಯಿತು.

ಅದೊಂದು ವರ್ಷಾ ಋತುವಿನ ಕಾಲ. ನಾಗಜೋಗಿ ಮತ್ತು ಬಸವಜೋಗಿ ಈರ್ವರೂ ವಾಡಿಕೆಯಂತೆ ಪೂರ್ಣಿಮೆಯ ದರ್ಶನಕ್ಕಾಗಿ ಎಲ್ಲಮ್ಮನ ಗುಡ್ಡಕ್ಕೆ ಪ್ರಯಾಣ ಬೆಳೆಸಲು ಉದ್ಯುಕ್ತರಾಗಿ ತಮ್ಮ ಗುರುಗಳಾದ ಸೋಮನಾಥ ಭಟ್ಟರಲ್ಲಿ ಬಂದರು. ಈರ್ವರನ್ನೂ ಸೋಮನಾಥಭಟ್ಟರು ಹರಸಿ ಬೀಳ್ಕೊಟ್ಟರು. ಅಂದು ಮಾತ್ರ ಸೋಮನಾಥಭಟ್ಟರ ಮುಖದಲ್ಲಿ ಭಯವೂ ಕುತೂಹಲವೂ ಆವರಿಸಿರುವುದು ಕಂಡುಬಂದಿತು.

ವಾಹನಗಳ ಸೌಕರ್ಯವೇ ಇಲ್ಲದ ಅಂದನ ಕಾಲದಲ್ಲಿ ಪ್ರಯಾಣ ತುಂಬಾ ಕಷ್ಟಕರವೆನ್ನಿಸಿದ್ದಿತು. ಶ್ರೀದೇವಿ ಎಲ್ಲಮ್ಮನಲ್ಲಿಯ ಭಕ್ತಿ, ನಾಗಜೋಗಿ ಬಸವಜೋಗಿಯವರಿಗೆ, ಪ್ರಯಾಣದ ಆಯಾಸವನ್ನು ಹೋಗಲಾಡಿಸುತ್ತಿದ್ದಿತು. ಉಧೋ ಉಧೋ ಎನ್ನುವ ಉದ್ಗಾರ ಮಾತ್ರ ಪ್ರಯಾಣದುದ್ದಕ್ಕೂ ಅವರ ಬಾಯಿಯಿಂದ ಹೊರಬರುತ್ತಿತ್ತು. ಹೀಗೆಯೇ ದಿನಗಟ್ಟಲೇ ಅವರ ಪ್ರವಾಸ ಸಾಗಿದ್ದಿತು. ಆಷಾಢ ಶುದ್ಧ ಚತುರ್ದಶಿಯ ಹೊತ್ತಿಗೆ, ಇಬ್ಬರೂ ಭಕ್ತರು ಸವದತ್ತಿಯ ಸಮೀಪಕ್ಕೆ ಬರುವಷ್ಟರಲ್ಲಿ ಮಳೆ ಧಾರಾಕಾರವಾಗಿ ಸುರಿಯತೊಡಗಿತು. ಮಾರನೆಯ ದಿನವೇ ಪೂರ್ಣಿಮೆ. ಪೂರ್ಣಿಮೆಯಂದು ನಾಗಜೋಗಿ ಬಸವಜೋಗಿಯರು ದೇವಿಯ ದರ್ಶನ ಪಡೆದುಕೊಂಡೇ ಅನ್ನ ಆಹಾರಾದಿಗಳನ್ನು ಸ್ವೀಕರಿಸಬೇಕು. ಮಳೆ ನಿಲ್ಲುವ ಲಕ್ಷಣಗಳು ಕಾಣಬರುತ್ತಿರಲಿಲ್ಲ. ಅವರು ಅಂದುಕೊಡಂತೆಯೇ ಮಲಪ್ರಭಾ ನದಿಯು ತುಂಬಿ ಹರಿಯುತ್ತಿದ್ದಿತು. ನದಿಯ ದಡಕ್ಕೆ ಬಂದು ಭಕ್ತರೀರ್ವರೂ ನದಿಯಲ್ಲಿ ಪ್ರವಾಹ ಕಡಿಮೆಯಾಗಲೆಂದು ಕಾಯುತ್ತ ಕುಳಿತರು.

ನದಿಯ ದಡದಲ್ಲಿ ದಟ್ಟವಾಗಿ ಬೆಳೆದ ಕಾಡಿನಲ್ಲಿ ಆ ಘೋರ ಕತ್ತಲೆಯಲ್ಲಿ ಮರದಡಿಯೊಂದರಲ್ಲಿ ಓರೆಯಾಗಿ ಕುಳಿತಿದ್ದಾರೆ. ಮಿಂಚಿದಾಗೊಮ್ಮೆ ಆಕಾಶದಲ್ಲಿ ಒತ್ತರಿಸಿಕೊಂಡು ಬರುತ್ತಿರುವ ಮೋಡಗಳು ಕಾಣುತ್ತಿವೆ. ದಿಕ್ಕು ದಿಕ್ಕುಗಳಲ್ಲಿ ಭೋರ್ಗರೆಯುತ್ತಿರುವ ಗುಡುಗಿನ ಶಬ್ದ; ಒಂದೊಂದು ಸಲ ಸಿಡಿಲಿನ ಶಬ್ದವೂ ಕೇಳಿಬರುತ್ತಿದೆ. ಈರ್ವರ ಉಟ್ಟು ಬಟ್ಟೆಗಳು ಸಾಕಷ್ಟು ಒದ್ದೆಯಾಗಿವೆ. ಎಷ್ಟೇ ದೊಡ್ಡ ಗಾತ್ರದ ಮರದಡಿಯಲ್ಲಿ ಓರೆಯಾಗಿ ಕುಳಿತರೂ ಆ ಅವಿರತ ಮಳೆಯ ಹನಿಗಳಿಂದ ಬಟ್ಟೆಗಳನ್ನು ಒಣದಾಗಿ ಉಳಿಸಲು ಅವರಿಂದ ಸಾಧ್ಯವಾಗಿರಲಿಲ್ಲ. ಅದು ಅಷಾಢ ಮಾಸವಿದ್ದುದರಿಂದ ಗಾಳಿಯೂ ಬೀಸುತ್ತಿತ್ತು. ಆ ಗಾಳಿ ಮಳೆಗಳಲ್ಲಿ ಇಬ್ಬರೂ ತತ್ತರಿಸಿ ಹೋಗಿದ್ದಾರೆ. ಮಳೆ ನಿಲ್ಲುವ ಯಾವ ಸೂಚನೆಗಳೂ ಕಾಣಬರಲಿಲ್ಲ. ಚತುರ್ದಶಿಯ ರಾತ್ರಿ ಕಳೆದು ಪೂರ್ಣಿಮೆಯ ಅರುಣೋದಯವಾಯಿತಾದರೂ ಸೂರ್ಯರಶ್ಮಿಗಳು, ಮೋಡಗಳನ್ನು ಭೇದಿಸಿಕೊಂಡು ಬರಲಾರದಂತೆ ತಡೆಯಲ್ಪಟ್ಟಿದ್ದವು. ಪೂರ್ಣಿಮೆಯ ಹಗಲೆಲ್ಲವೂ ಮಳೆ ಧಾರಾಕಾರವಾಗಿ ಸುರಿಯುತ್ತಲೇ ಇದ್ದಿತು. ಭಕ್ತರೀರ್ವರಿಗೂ ಮಳೆ ಕಡಿಮೆಯಾದೀತೆಂಬ ಆಸೆ. ಆದರೂ ಮಳೆಯ ಪರಿವೇ ಅವರಿಗಿದ್ದಂತಿರಲಿಲ್ಲ. ದೇವಿಯ ದರ್ಶನದ್ದೇ ಅವರ ಬಯಕೆ. ದರ್ಶನವಿಲ್ಲದೆ ಆಹಾರಾದಿಗಳ ಸೇವನೆ ಇಲ್ಲ. ಮಳೆ ನಿಲ್ಲದೇ ಹೊಳೆ ದಾಟುವಂತಿಲ್ಲ. ಚತುರ್ದಶಿ ಮತ್ತೂ ಹುಣ್ಣಿಮೆ, ಹೀಗೆ ಎರಡು ದಿನಗಳಿಂದ ಅವರಿಗೆ ಊಟವಿರಲಿಲ್ಲ. ಹಸಿವಿನ ಬಾಧೆ ಒಂದೆಡೆಯಾದರೆ, ಉಟ್ಟ ಬಟ್ಟೆಗಳು ತೊಯ್ದು ಚಳಿಯ ಬಾಧೆ ಮತ್ತೊಂದೆಡೆಗೆ, ಹೀಗಾಗಿ ಭಕ್ತರೀರ್ವರೂ ತತ್ತರಿಸಿ ಹೋಗಿದ್ದರು. ಅವರಿಗೆ ಇಂತಹ ಪ್ರಸಂಗ ಹಿಂದೆಂದೂ ಒದಗಿ ಬಂದಿರಲಿಲ್ಲ.

ಶ್ರೀದೇವಿಯ ಗುಡ್ಡಕ್ಕೆ ಹೊರಡುವಾಗ, ತಮ್ಮ ಗುರುಗಳಲ್ಲಿ ಆಶೀರ್ವಾದ ಪಡೆಯಲು ಹೋದಾಗ, ಭಯ ಮತ್ತೂ ಕುತೂಹಲಪೂರಿತ ಮುಖಚರ್ಮದ ಕಲ್ಪನೆ ಈಗ ಅವರಿಗೆ ಹೊಳೆಯತೊಡಗಿತು. ಶ್ರೀದೇವಿಯ ದರುಶನ ಪಡೆಯಲು ಈಗ ಯಾರಿಂದಲೂ ಸಹಾಯ ದೊರೆಯುವ ಸಾಧ್ಯತೆಯೇ ಇರಲಿಲ್ಲ. "ಆ ದೇವಿಯೇ ನಮ್ಮನ್ನು ಪಾರು ಮಾಡುವಳೆಂಬ" ಅಚಲ ಶ್ರದ್ಧೆ ಮಾತ್ರ ಅವರಲ್ಲಿ ತುಂಬಿ ತುಳುಕುತ್ತಿದ್ದಿತು.

ಪೂರ್ಣಿಮೆಯ ಸಂಜೆಗೆ ಮಳೆ ನಿಂತಿತಾದರೂ ನದಿಯಲ್ಲಿ ಪ್ರವಾಹ ತಗ್ಗಲಿಲ್ಲ. ಮಳೆಯಲ್ಲಿ ತೊಯ್ದಿದ್ದ ಬಟ್ಟೆಗಳು ಮೈಮೇಲೆಯೇ ಅರ್ಧಂಬರ್ಧ ಒಣಗಿದ್ದವು. ಕುಳಿತಲ್ಲಿಯೇ ಕಲ್ಲು ಬಂಡೆಯ ಮೇಲೆ ಈರ್ವರೂ ಒರಗಿಕೊಂಡಿದ್ದರು. ನಾಲಿಗೆಯ ಮೇಲೆ, ದೇವಿಯ ನಾಮ, ಮನದಲ್ಲಿ ಶ್ರೀದೇವಿಯ ಸುಂದರ ಮೂರ್ತಿಯ ಚಿತ್ರಣ ಲಾಸ್ಯವಾಡುತ್ತಿದ್ದಾಗಲೇ ಅವರಿಗೆ ನಿದ್ರೆಯ ಮಂಪರು ಕವಿಯಿತು.

ನಾಗಜೋಗಿ ಬಸವಜೋಗಿ ಇಬ್ಬರೂ ತದೇಕ ಚಿತ್ತದಿಂದ ದೇವಿಯ ಕಡೆಗೆ ನೋಡುತ್ತಿದ್ದಾರೆ. ದೇವಿಯ ದೃಷ್ಟಿ ಇವರ ಮೇಲೆ ಬೀಳುತ್ತಿಲ್ಲ. ಆರ್ತತೆಯಿಂದ ದೇವಿಯನ್ನು ಕೂಗುತ್ತಿದ್ದಾರೆ. ಇಬ್ಬರ ಮೈಮೇಲೆಯೂ ಪರಿವೆಯೇ ಇಲ್ಲ. ಸೋಮನಾಥ ಭಟ್ಟರು ಕಾಣಿಸಿಕೊಳ್ಳುತ್ತಾರೆ. ಭಕ್ತರೀರ್ವರೂ ದೇವಿಯ ಅವಕೃಪೆಯನ್ನು ಗುರುಗಳೆದುರು ತೋಡಿಕೊಳ್ಳುತ್ತಾರೆ. ಶಿಷ್ಯರೀರ್ವರನ್ನೂ ಸಾಂತ್ವನಗೊಳಿಸುತ್ತ ಅವರಿಗೆ ಮಹಿಮೆಯನ್ನು ತಿಳಿಸಿ ಹೇಳುತ್ತಾರೆ. ದೇವಿಯು ನಿಮ್ಮ ಭಕ್ತಿಯ ಪರೀಕ್ಷೆ ನಡೆಸಿದ್ದಾಳೆಂದೂ ಮತ್ತೂ ಇಂಥ ಪರೀಕ್ಷೆಯಲ್ಲಿ ಜಯ ಯಾವಾಗಲೂ ಭಕ್ತರಿಗೇನೇ ಎಂದೂ ಭಟ್ಟರು ಹೇಳಿ ಶಿಷ್ಯರೊಡಗೂಡಿ ದೇವಿಯನ್ನು ವೇದಾಂತ ವಾಕ್ಯಗಳಿಂದ ಸ್ತುತಿಸತೊಡಗುತ್ತಾರೆ.

ಕರುಣೆಯೇ ಭಕ್ತಾಧೀನೆಯೇ ನಿನ್ನಿಂದ ಸತ್ಯ, ರಜ, ತಮೋಗುಣಗಳುದಿಸಿದವು. ನಿನ್ನ ಸೂತ್ರದ ಗೊಂಬೆಗಳು, ಸರ್ವಜೀವರುಗಳು ನಿನ್ನ ಸೂತ್ರದ ಗೊಂಬೆಗಳು. ಸರ್ವಜೀವರು, ತತ್ವಭೂತಿಗಳು ಮತ್ತೂ ಸರ್ವ ವ್ಯವಹಾರಗಳು ನಿನ್ನ ತೇಜಸ್ಸುಗಳು, ನಾನಾ ಗುಣಗಳು, ನಾನಾ ಜಾತಿಗಳು, ನಾನಾ ಮತಗಳು ಮತ್ತೂ ನಾನಾ ಭಕ್ತಿಗಳು ಎಲ್ಲ ನೀನೇ ಆಗಿರುವಿ. ಸತಿಯು, ಪುರುಷರು, ಸುತರು, ಬಳಗಗಳು, ಮದುವೆಯು, ಮುಂಜಿವೆಯು ನೀನೇ ಇರುವೆ. ಕರ್ಮವೆಲ್ಲವೂ ನೀನೇ ಇರುವಿ. ಬಡತನ, ಹಿತ-ಅಹಿತ, ಇಹ-ಪರ ಎಲ್ಲವೂ ನೀನೇ. ಚಲಿಸುತ್ತಿರುವ ಗಾಳಿ, ಹರಿಯುವ ನೀರು, ಅಗ್ನಿ ಮತ್ತೂ ಆಗಸ ಇವೆಲ್ಲವೂ ನೀನೇ ಆಗಿರುವೆ, ಸರ್ವಸಾಕ್ಷಿಯು ನೀನೆ. ಸರ್ವ ಜ್ಞಾನಿಯು ನೀನೇ. ಅಗ್ನಿಯು ನಿನ್ನನ್ನು ಸುಡಲಾರದು. ಜಲವು ನಿನ್ನನ್ನು ತೋಯಿಸಲಾರದು. ವಾಯು ನಿನ್ನನ್ನು ಒಣಗಿಸಲಾರದು. ಒಳಗೆ, ಹೊರಗೆ ಎಲ್ಲೆಲ್ಲಿಯೂ ನೀನೇ ಇರುವಿ. ಸೂರ್ಯನಿಗೆ ತೇಜಸ್ಸು, ಚಂದ್ರನಿಗೆ ಶೀತಲ ಕಿರಣ ನಿನ್ನಿಂದಲೇ ಬಂದಿರುವವು, ನಿನ್ನ ಮಾಯೆಯಿಂದ ಜಗತ್ತು ಉತ್ಪನ್ನವಾಗಿ, ತೋರಿ ಲಯವನ್ನು ಹೊಂದುವರು. ನಿನ್ನ ಮಾಯೆಯಿಂದಲೇ ಹರಿ, ಹರ, ಬ್ರಹ್ಮಾದಿಗಳು ಜನಿಸಿ ಅಡಗುವರು. ನಿನ್ನನ್ನು ಕೆಣಕಿ ಅದಾರು ಬದುಕುವರು ನೀನು ಮಾಯೆಯಿಂದಲೇ ಹರಿ, ಹರ, ಬ್ರಹ್ಮಾದಿಗಳು ಜನಿಸಿ ಅಡಗುವರು. ನಿನ್ನನ್ನು ಕೆಣಕಿ ಅದಾರು ಬದುಕುವರು! ನೀನು ಯಾರ ಮೇಲೆ ಯಾರ ಮೇಲೆ ಸಿಟ್ಟಾಗಿರುವೆಯೋ ಅವರನ್ನು ಯಾರು ಕಾಪಾಡಬಲ್ಲರು! ಕಾಯುವವಳು ಕೊಲ್ಲುವವಳು ನೀನೇ. ನಿನ್ನ ಮಹಿಮೆಯನ್ನು ಕೊಂಡಾಡುವವನು ಅಮರನೇ ಸರಿ. ಯಾವ ಪುರುಷನಿಗೆ ನಿನ್ನ ಪದ ದೊರೆತಿದೆಯೋ ಯಾರು ನಿನ್ನ ಸ್ಮರಣೆಯನ್ನು ನಿತ್ಯ ಮಾಡುವರೋ, ಯಾರು ನಿನ್ನನ್ನು ಪರಬ್ರಹ್ಮವೆಂದು ನಂಬಿರುವರೋ ಅವರು ಹರಿಹರಗಿಂತಲೂ ಮಿಗಿಲಾದವರು. ಬ್ರಹ್ಮ, ವಿಷ್ಣು, ಮಹೇಶ್ವರರಿಗೆ, ಅನುಕ್ರಮವಾಗಿ ಸೃಷ್ಟಿ, ಸ್ಥಿತಿ, ಲಯ ಅಧಿಕಾರಗಳನ್ನು ಕರುಣಿಸಿರುವೆ. ನೀನು ಯಾರಿಗೆ ಒಲಿಯುವೆಯೋ, ಅವರು ನಿನ್ನಲ್ಲಿಯೇ ಐಕ್ಯರಾಗುವರು.

ನಿನ್ನ ಸ್ಮರಣೆಯನ್ನು ಒಮ್ಮೆ ಮಾಡಿದರೂ ಅದು ನಿನಗೆ ಪರ್ವತ ಗಾತ್ರದಷ್ಟು ಭಾರವಾಗುವುದು. ನಿನ್ನ ಧ್ಯಾನದಲ್ಲಿ ಮಗ್ನನಾದವನಿಗೆ ಯಾವ ಸ್ಮರಣ ಮಾತ್ರದಿಂದ ಸರ್ವಫಲಗಳು ದೊರಕುವವು. ನಿನ್ನ ಭಕ್ತರನ್ನು ನಿಂದಿಸಿದವರ ವಂಶಾರಣ್ಯಗಳನ್ನೇ ಸುಟ್ಟು ಹಾಕುವಿ. ನಿನ್ನ ಭಕ್ತನ್ನು ಸದಾ ನೀನು ಕಾಪಾಡುವಿ, ನಿನ್ನ ಭಕ್ತನ ಗಾಳಿ ಸೋಂಕಿದರೆ ಪಾಪಿಷ್ಠನ ಪಾಪ ನಶಿಸಿಹೋಗುವವು. ನಿನ್ನ ದಯವುಳ್ಳವನು ಅಡವಿಯಲ್ಲಿರಲಿ, ಮನೆಯಲ್ಲಿರಲಿ, ಅಗ್ನಿಯಲ್ಲಿರಲಿ, ನೀರಿನೊಳಿರಲಿ ಮತ್ತೂ ರಣರಂಗದಲ್ಲಿರಲಿ ಅವನನ್ನು ರಕ್ಷಿಸಲು ನೀನು ಸದಾ ಸಿದ್ಧಳಿರುವಿ. ನಿನಗೆ ಆಶೆ ಎಂಬುದಿಲ್ಲ. ಆದರೆ ನಿನ್ನ ಭಕ್ತರನ್ನು, ಅವರ ಕುಟುಂಬದವರನ್ನು ಕಾಪಾಡಲೇಬೇಕೆಂಬ ಆಶೆ ಮಾತ್ರ ಅತಿಯಾಗಿದೆ. ಅಂದ ಬಳಿಕ ನೀನು ನಿರಾಶೆಯುಳ್ಳವಳೆಂದು ಹೇಗೆ ಭಾವಿಸೋಣ?

ಕಣ್ಣಿನ ಕಣ್ಣು ನೀನು, ಕಿವಿಯ ಕಿವಿ ನೀನು, ವಾಕ್ಕಿನ ವಾಕ್ಕು ನೀನು, ಮೂಗಿನ ಅಘ್ರಾಣಿಸುವ ಶಕ್ತಿ ನೀನು, ಪಂಚತತ್ವವು ನೀನು, ಪಂಚ ಇಂದ್ರಿಯಗಳು ನೀನು, ಸರ್ವ ಪಿಂಡಾಂಡ ಮತ್ತೂ ಬ್ರಹ್ಮಾಂಡದಲ್ಲಿ ಇದ್ದು ಇಲ್ಲದಂತೆಯೂ ಇಲ್ಲದೆಯೇ ಇರುವವಳು ನೀನೇ ಆಗಿರುವಿ. ನಿನ್ನ ದರಶುನವಿಲ್ಲದೆ ಅನ್ನ ನೀರನ್ನು ಮುಟ್ಟಲಾರೆವು. ನಿನ್ನ ಕಾಣದಲೇ ಮರಳಲಾರೆವು. ನಮ್ಮ ಯಾವ ಪಾಪಕ್ಕಾಗಿ ನೀನಿಂದು ನಮಗೆ ಈ ಘೋರ ಶಿಕ್ಷೆ ನೀಡುತ್ತಿರುವೆ. ನೀನು ಯಾವ ಶಿಕ್ಷೆ ವಿಧಿಸಿದರೂ ಸರಿಯೇ, ನಿನ್ನ ಕರುಣೆ ಮಾತ್ರ ನಮ್ಮ ಮೇಲಿರಲಿ. ಕತ್ತಲೆಯ ಕರಾಳ ಛಾಯೆಯಲ್ಲಿಯೇ ಬೆಳಕೊಂದು ಗೋಚರಿಸಿತು. ಅಂತಹ ಬೆಳಕನ್ನು ನಿಜ ಜೀವನದಲ್ಲಿ ಯಾರೂ ಎಂದೂ ಕಂಡುದಿಲ್ಲ. ಆ ಅನಿವರ್ಚನೀಯ ಬೆಳಕಿನ ಮಧ್ಯದಲ್ಲಿ, ಸುಂದರ ಸುಕೋಮಲ ತೇಜೋಮಯ ತಾಯಿ ಕಾಣಿಸಿದಳು. ಮಕ್ಕಳಿರಾ ನಿಮ್ಮನ್ನು ಬಹಳ ಕಷ್ಟಕ್ಕೀಡು ಮಾಡಿದೆ. ನಿಮಗದೆಷ್ಟು ತೊಂದರೆಯಾಯಿತೋ ಪಾಪ, ನೀವು ಇನ್ನು ಮೇಲೆ ಇಷ್ಟೆಲ್ಲ ತೊಂದರೆಪಟ್ಟುಕೊಂಡು ಗುಡ್ಡಕ್ಕೆ ಬರಬೇಕಾದದ್ದಿಲ್ಲ. ನಿಮ್ಮೂರಿನ ಶಿವಾಲಯದ ಪಶ್ಚಿಮ ತಾಣದಲ್ಲಿ ಹರಿಹರ ಬ್ರಹ್ಮಾದಿಗಳು ಪೂಜಿಸುವ ಶ್ರೀಚಕ್ರ ದೊರಕುವುದು. ಸಾಲಿಗ್ರಾಮ ರೂಪದಲ್ಲಿ ನನ್ನ ಮುಖವೂ ಗೋಚರಿಸುವುದು. ಅಲ್ಲಿಯೇ ನೀವು ಅವುಗಳನ್ನು ಪೂಜಿಸಿರಿ. ಅಲ್ಲಿ ನಾನು ಆವಿರ್ಭವಿಸುವೆ" ಎಂದು ಆ ತಾಯಿ ಅಪ್ಪಣೆ ಕೊಡಿಸಿದಳಲ್ಲದೇ ತನ್ನ ಪ್ರಭಾವದಿಂದ ದೇವಿಯು ಭಕ್ತರೀರ್ವರಿಗೂ ಗುಡ್ಡದ ದರ್ಶನವನ್ನು ಮಾಡಿಸಿ ಅಂತರ್ಧಾನವಾದಳು.

ಭಕ್ತರೀರ್ವರೂ ಪಕ್ಕನೆ ಕಣ್ತೆರೆದು ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ. ಇಬ್ಬರಿಗೂ ಒಂದೇ ತೆರನಾದ ಕನಸು. ಬಾಯಿಂದ ಮಾತುಗಳೇ ಹೊರಸೂಸುತ್ತಿಲ್ಲ. ಕಣ್ಣಲ್ಲಿ ಆನಂದ ಬಾಷ್ಪಗಳು ಒಂದೇ ಸಮನೆ ಹರಿಯುತ್ತಿವೆ. ಆನಂದದಿಂದ ಮೈಪುಳಕಿತಗೊಂಡಿತು. ಶ್ರೀದೇವಿ ನಮ್ಮ ಮೇಲೆ ಕೃಪೆ ಮಾಡಿದಳೆಂದು ಮನಗಂಡರು.

ಅಲ್ಲಿಂದ ಮರಳಿದ ಬಳಿಕ, ನಡೆದ ವಿದ್ಯಾಮಾನಗಳೆಲ್ಲವೂ ಗುರು ಸೋಮನಾಥ ಭಟ್ಟರೆದುರು ಸವಿಸ್ತಾರ ವರ್ಣಿಸಿದರು. ದೇವಿಯ ಅಪ್ಪಣೆಯಂತೆ ಶಿವಾಲಯದ ಪಶ್ಚಿಮ ದಿಕ್ಕಿನಲ್ಲಿ ಶ್ರೀ ಚಕ್ರ ಮತ್ತು ಸಾಲಿಗ್ರಾಮಗಳು ದೊರೆತವು. ಅದೇ ಸ್ಥಳದಲ್ಲಿ ಚಿಕ್ಕದೇವಾಲಯ ಒಂದನ್ನು ನಿರ್ಮಿಸಲಾಯಿತಲ್ಲದೇ ಶಾಸ್ತ್ರೋಕ್ತವಾಗಿ ವೇದ ಘೋಷಗಳೊಂದಿಗೆ ದೇವಿಯ ಪ್ರತಿಷ್ಠಾಪನೆ ಮಾಡಲಾಯಿತು. ಹುಲಿಗಿ ಗ್ರಾಮಕ್ಕೇನೇ ಆಕೆಯು ತಾಯಿಯಾದ್ದರಿಂದ ಆಕೆಯು ಹುಲಿಗೆಮ್ಮನಾದಳು. ಶ್ರೀದೇವಿ ಹುಲಿಗೆಮ್ಮನವರನ್ನು ಷೋಢಶೋಪಚಾರಗಳಿಂದ ನಿತ್ಯವೂ ಪೂಜಿಸುವ ಹೊಣೆ ಗುರು ಸೋಮನಾಥ ಭಟ್ಟರದಾಯಿತು.

ಪ್ರತಿ ಮಂಗಳವಾರ, ಶುಕ್ರವಾರ, ಪೂರ್ಣಿಮೆ ಮತ್ತೂ ಅಮವಾಸ್ಯೆಗಳೆಂದು ಶ್ರೀದೇವಿ ಭಾಗವತ ಪಠಣ, ಶ್ರೀ ಸೋಮನಾಥ ಭಟ್ಟರಿಂದ ಜರುಗತೊಡಗಿತು. ಗ್ರಾಮ ನಿವಾಸಿಗಳೆಲ್ಲ ದೇವಸ್ಥಾನ ಸೇರತೊಡಗಿದರು. ಮೂಲ ದೇವಸ್ಥಾನಕ್ಕೆ ಮುಂದುಗಡೆ ಪ್ರಾಂಗಣ ಪಠಣ, ವಿವಿಧ ಅಲಂಕಾರಯುಕ್ತ ಪೂಜೆ, ಭಕ್ಷ್ಯಭೋಜ್ಯ ಹಾರಗಳ ನೈವೇದ್ಯ ಮತ್ತೂ ಬ್ರಹ್ಮ ಭೋಜನಾದಿಗಳು ಜರುಗತೊಡಗಿದವು.

ಶ್ರೀದೇವಿಯ ದರುಶನವಾದ ಬಳಿಕ ನಾಗಜೋಗಿ ಮತ್ತೂ ಬಸವಜೋಗಿಯಲ್ಲಿ ವಿಚಿತ್ರ ಮಾರ್ಪಾಟು ಕಾಣತೊಡಗಿತು. ಸದಾವಕಾಲದಲ್ಲಿ ದೇವಿಯ ಉಪಾಸನೆಯಲ್ಲಿ ತೊಡಗಿದರು. ಮನದಲ್ಲಿ ದೇವಿಯ ಸುಂದರ ಮೂರ್ತಿ ಗೋಚರಿಸತೊಡಗಿತು. ಊಟ ಮಾಡುವಾಗ, ಮಲಗುವಾಗ, ತಿರುಗಾಡುವಾಗ, ಕುಳಿತಲ್ಲಿ, ನಿಂತಲ್ಲಿ ದೇವಿಯನ್ನೇ ಧ್ಯಾನಿಸತೊಡಗಿದರು. ಮುಖದಲ್ಲಿ ತೇಜಸ್ಸು ಹೊಳೆಯತೊಡಗಿತು. ಸಿಟ್ಟು ಅವರ ಮನದಿಂದ ದೂರ ಸರಿಯಿತು. ಮನೆ ಮಾರುಗಳನ್ನು ಹೆಚ್ಚಿಗೆ ಹಚ್ಚಿಕೊಳ್ಳದೇ ಅವರು ಏಕಾಂತವನ್ನು ಬಯಸತೊಡಗಿದರು. ದುಃಖ ದುಮ್ಮಾನಗಳಲ್ಲಿ ತೊಳಲಾಡುವ ಜನ ಅವರಲ್ಲಿ ಸಾಂತ್ವನಕ್ಕಾಗಿ ಬರತೊಡಗಿದರು. "ಶ್ರೀದೇವಿಯಲ್ಲಿ ನಂಬಿಕೆಯನ್ನಿಟ್ಟು ಅವಳನ್ನು ಪೂಜಿಸಿರಿ. ಅವಳೇ ನಿಮ್ಮ ಸಂಕಷ್ಟಗಳನ್ನು ದೂರಮಾಡುತ್ತಾಳೆ" ಎಂಬುದೇ ಅವರು ಎಲ್ಲರಿಗೂ ಹೇಳುವ ಏಕೈಕ ವಾಕ್ಯವಾಯಿತು. ಈ ಪ್ರದೇಶದ ಜನತೆಯಲ್ಲಿ ಧರ್ಮ ಜಾಗೃತಗೊಂಡು, ಧರ್ಮಾಚರಣೆ ನಿತ್ಯದ ಉಸಿರಾಗಬೇಕು. ಅಧರ್ಮವನ್ನು ಮೆಟ್ಟಿನಿಲ್ಲುವ ಚಿರಂತನ ಶಕ್ತಿ ಜನತೆಯಲ್ಲಿ ಸಂಚಯಿಸಬೇಕು. ಇದಕ್ಕೆ ಪೂರಕವಾಗಬಹುದಾದ ವ್ರತ ಒಂದನ್ನಾಚರಿಸಬೇಕೆಂಬುದಾಗಿ ನಾಗಜೋಗಿ ಬಸವಜೋಗಿಯವರು ಯೋಚಿಸತೊಡಗಿದರು. ನಿಷ್ಕಾಮ ಕರ್ಮದ ಅಂತಃಪುರದಲ್ಲಿ ಅಡಿ ಇರಿಸಿದವನಿಗೆ 'ತಾನು ತನ್ನದು' ಎಂದು ಕಲ್ಪನೆ ದೂರಾಗಿ 'ಎಲ್ಲರೂ ತನ್ನವರೇ' ಎಂಬ ವಿಶಾಲ ಅಂತಃಕರುಣೆ ಜಾಗ್ರತಗೊಳ್ಳುತ್ತದೆ. ಇದೇ ಕರುಣೆ ನಾಗಜೋಗಿ ಮತ್ತೂ ಬಸವಜೋಗಿಯವರಲ್ಲಿ ವ್ರತಾಚಾರಣೆಯ ವಿಚಾರ ಮೂಡಿಸಿರಬೇಕು ಅಥವಾ ಶ್ರೀದೇವಿಯೇ ತನ್ನ ಭಕ್ತರೀರ್ವರ ಉಪಾಸನೆಯ ದಿವ್ಯ ಫಲವನ್ನು ಮಾನವ ಕೋಟಿಗೆ ಮನವರಿಕೆ ಮಾಡಿಕೊಡಬೇಕೆಂಬ ಉದ್ದೇಶದಿಂದಲೋ ವ್ರತ ಒಂದರ ಕಲ್ಪನೆಯನ್ನು ಅವರಲ್ಲಿ ಅಂಕುರಗೊಳ್ಳುವಂತೆ ಕೃಪೆ ತೋರಿರಬೇಕು. ಯಾವ ವ್ರತ ಆಚರಿಸುವುದರಿಂದ ಇದು ಸಾಧ್ಯವಾದೀತೆಂಬುದನ್ನು ಕುರಿತು, ನಾಗಜೋಗಿ ಬಸವಜೋಗಿ ಮತ್ತು ಸೋಮನಾಥ ಭಟ್ಟರು ಯೋಚಿಸತೊಡಗಿದರು. ಧರ್ಮಾಚರಣೆಯಲ್ಲಿ ತಿಲಕ ಪ್ರಾಯನಾದ ನಹುಷನ ಚರಿತ್ರೆ, ಆತ ಇಂದ್ರನಾದಾಗ ಸ್ವರ್ಗದಲ್ಲಿ ಆಚರಿಸಿದ ಶಿಬಿಕೋತ್ಸವ ತನ್ಮೂಲಕ ಮೂರು ಲೋಕಗಳಲ್ಲಿ ಅಧರ್ಮವು ಅಳಿದು ಧರ್ಮ ಉತ್ಥಾನ ಹೊಂದಿದ ಬಗೆಯನ್ನು ಮನದಲ್ಲಿ ಚಿಂತಿಸಿ ಗುರು ಸೋಮನಾಥಭಟ್ಟರು ಭಕ್ತರೀರ್ವರಿಗೂ ವಿಷಯ ವಿವರಿಸಿದರು. ಮಾರ್ಗದರ್ಶನ ಸೋಮನಾಥಭಟ್ಟರದು; ಆಚರಣೆ ನಾಗಜೋಗಿ ಬಸವಜೋಗಿಯರದು, ಬಾಳೆದಂಡಿಗೆ ಆಚರಣೆಯ ಪ್ರಾರಂಭ ಅಲ್ಲಿಂದಲೆ ಆಯಿತು.

ಈ ವ್ರತಾಚಾರಣೆಯ ಜೊತೆಯಲ್ಲಿಯೇ ಶ್ರೀದೇವಿಯ ಮಹಿಮೆಯುನ್ನು ಲೋಕಕ್ಕೆ ತೋರಿಸಿಕೊಡಬೇಕಾಗಿದ್ದಿತು. ಇದು ಪವಾಡ ರೂಪಿಸಿದರೆ ಮಾತ್ರ ಸಾಧ್ಯವೆಂದು ಭಟ್ಟರಿಗೆ ತಿಳಿದಿದ್ದಿತಾದ್ದರಿಂದ ಪಾಯಸ ನಿವೇದನೆ ಮತ್ತೂ ಅಗ್ನಿಕುಂಡದ ಕಾರ್ಯಕ್ರಮವನ್ನು ಸೋಮನಾಥಭಟ್ಟರು ರೂಪಿಸಿದರು.

ವೈಶಾಖ ಶುದ್ಧ ಪೂರ್ಣಿಮೆಯಿಂದ ವ್ರತಾಚರಣೆ ಪ್ರಾರಂಭವಾಯಿತು. ಪ್ರತಿಪದೆಯೆಂದು ನಾಗಜೋಗಿ ಬಸವ ಜೋಗಿಯರಿಗೆ ತೈಲಾಭ್ಯಂಗ ಮಾಡಿಸಿ ಪುಣ್ಯಾಹವಾಚನ ನೆರವೇರಿಸಿದರಲ್ಲದೇ ಶ್ರೀದೇವಿಯನ್ನು ಕುರಿತು ಆಚರಿಸಬೇಕಾಗಿರುವ ಬಾಳೆದಂಡಿಗೆ ನಿವೇದನೆ ಮತ್ತೂ ಅಗ್ನಿಕುಂಡ ಕಾರ್ಯಕ್ರಮ ಜರುಗಿಸಲು ಕಂಕಣಬದ್ಧರಾಗಿ ಮಾಡಲಾಯಿತು. ದೇವಿಚರಿತೆಯ ದಿವ್ಯ ಭಾಗಗಳನ್ನು ಓದಿ ಓದಿ ಶ್ರೀ ಸೋಮನಾಥಭಟ್ಟರ ಉಪದೇಶದಂತೆ ನಾಗಜೋಗಿ ಬಸವ ಜೋಗಿಯರು ಕೇವಲ ಹಣ್ಣು ಹಾಲು ಸ್ವೀಕರಿಸಿದರಲ್ಲದೇ ಸದಾವಕಾಲವೂ ದೇವಿಯ ಧ್ಯಾನಮಾಡಿದರು. ನಿಗದಿತ ಸಮಯವಷ್ಟೇ ನಿದ್ರೈಗೈದರು. ಅಷ್ಟಮಿಯಂದು ದೇವಿಯರಿಗೆ ಸರ್ವಾಲಂಕಾರ ಮಾಡಿ ರಥೋತ್ಸವ ಜರುಗಿಸಲಾಯಿತು. ನವಮಿಯ ರಾತ್ರಿಯಲ್ಲಿ ಶಿಬಿಕೆ ಬಾಳೆದಂಡಿಗೆ ತಯಾರಿಸಲಾಯಿತು. ಗ್ರಾಮ ಮತ್ತು ದೇವಾಲಯದ ಎಲ್ಲ ಮನೆ ಮಾರುಗಳು ತಳಿರು ತೋರಣದಿಂದ ಅಲಂಕೃತವಾದವು. ಏಕಾದಶಿಯಂದು ಬ್ರಾಹ್ಮೀ ಮೂಹೂರ್ತದಲ್ಲಿ ತುಂಗಭದ್ರೆಯಲ್ಲಿ ಪೂಜೆಗೈದು ಬಾಳೆದಂಡಿಗೆಯನ್ನೇರಿದ ನಾಗಜೋಗಿಗೆ ಬಸವಜೋಗಿಯು ಮುಖ್ಯವಾಹಕವಾದ ದಂಡಿಗೆಯು ಶ್ರೀದೇವಿಯ ದೇವಾಲಯವನ್ನು ತ್ರಿಪ್ರದಕ್ಷಿಣೆಗೈದು ದೇವಾಲಯ ಪ್ರವೇಶಿಸಿತು. ಬಾಳೆಯ ಎಲೆಗಳು ಹರಿಯದಷ್ಟು ಹಗುರವಾಗಿ ನಾಗಜೋಗಿಯು ದಂಡಿಗೆಯ ಮೇಲೆ ವಿರಾಜಮಾನನಾಗಿದ್ದ. ದ್ವಾದಶಿಯ ಬ್ರಾಹ್ಮೀ ಮೂಹೂರ್ತದಲ್ಲಿ ಹೊಸ ಹರವಿಯೊಂದರಲ್ಲಿ ಅಕ್ಕಿಯ ಅನ್ನ ಬೇಯಿಸಲಾಯಿತು. ನಾಗಜೋಗಿ ಬಸವಜೋಗಿಯವರು ತಮ್ಮ ಬರೀ ಕೈಗಳಿಂದಲೇ ಬಿಸಿ ಬಿಸಿ ಅನ್ನವನ್ನು ಹರವಿಯಿಂದ ತೆಗೆದು ದೇವಿಗೆ ನಿವೇದಿಸಿದರು. ನಂತರ ವ್ರತಾಚರಣೆಯ ಕೊನೆಯ ಕಾರ್ಯಕ್ರಮವಾಗಿ ನಿಗಿ ನಿಗಿ ಕೆಂಡ ತುಂಬಿದ ಅಗ್ನಿ ಕುಂಡದಲ್ಲಿ ಈರ್ವರೂ ಶ್ರೀದೇವಿಯನ್ನು ಪ್ರಾರ್ಥಿಸಿ ಪ್ರವೇಶ ಮಾಡಿ, ಅದರಲ್ಲಿ ಹಾಯ್ದು ಶ್ರೀದೇವಿಯ ದೇವಾಲಯದಲ್ಲಿ ಪ್ರವೇಶಿಸಿದರು. ನೆರೆದ ಜನಸ್ತೋಮ ಉತ್ಸಾಹದಲ್ಲಿ ಮುಳುಗಿಹೋಯಿತು. ಸರ್ವರೂ ಶ್ರೀದೇವಿಯನ್ನೂ ಆಕೆಯ ಭಕ್ತರೀರ್ವರನ್ನೂ ಮನಸಾರೆ ಸ್ಮರಿಸಿದರು. ನಂತರ ನಾಗಜೋಗಿ ಬಸವಜೋಗಿಯರು ಶ್ರೀದೇವಿಗೆ ಮಾಡಿದ ನೈವೇದ್ಯವನ್ನು ವ್ರತಾಚರಣೆಯಲ್ಲಿ ಪಾಲ್ಗೊಂಡವರೆಲ್ಲರೊಂದಿಗೂ ಸೇರಿ ಸ್ವೀಕರಿಸಿದರು. ಅದೇ ಇಂದಿಗೂ ಜೋಗ ಪಂಕ್ತಿ ಎಂದು ಕರೆಯಿಸಿಕೊಳ್ಳುತ್ತದೆ. ಈ ವ್ರತಾಚರಣೆಯೇ ಶ್ರೀದೇವಿ ಹುಲಿಗೆಮ್ಮನ ಜಾತ್ರೆಯಾಗಿ ವರ್ಷ ವರ್ಷವೂ ಸಂಪ್ರದಾಯವಾಯಿತು.

ಈ ವ್ರತಾಚಾರಣೆ ಪ್ರಾರಂಭವಾದ ನಂತರ, ಯಾರಿಂದಲೋ ದೋಷ ಉಂಟಾಗಿ, ಕೆಲ ವರ್ಷಗಳ ನಂತರ ವಿಚಿತ್ರ ಘಟನೆಯೊಂದು ಜರುಗಿತು. ತಾಯಿ ತುಂಗಭದ್ರೆಯಲ್ಲಿ ಮಿಂದು ಪೂಜೈಗೈದು ನಾಗಜೋಗಿಯು ಬಾಳಿದಂಡಿಗೆಯನ್ನೇರಿ ಶ್ರೀದೇವಿಯ ದೇವಸ್ಥಾನಕ್ಕೆ ಬರುತ್ತಿರುವಾಗ ಬಾಳೆದಂಡಿಗೆಯು ಮುರಿದು ನಾಗಜೋಗಿಯು ಕೆಳಗುರುಳಿ ಬಿದ್ದನಲ್ಲದೇ ತಕ್ಷಣ ಮೃತನಾದನು. ಈ ರೀತಿ ನಾಗಜೋಗಿಯು ಅಸುನೀಗಿದುದು ಬಸವ ಜೋಗಿಗೆ ದೊಡ್ಡ ಅಘಾತವೇ ಆದಂತಾಯಿತು. ಲೋಕ ಕಲ್ಯಾಣಾರ್ಥ ಕೈಗೊಂಡಿರುವ ಬಾಳೆದಂಡಿಗೆ ಕಾರ್ಯಕ್ಕೆ ಇಂತಹ ಘನ ಕುಂದು ಬರುವ ಕಾರಣ ಕುರಿತು ಹಳಹಳಿಸತೊಡಗಿದ್ದನು. ತಮ್ಮಿಂದ ಯಾವ ಘನ ಅಪರಾಧವಾಯಿತೋ! ಏಕೆ ಶ್ರೀದೇವಿ ಹುಲಿಗೆಮ್ಮ ತಮಗೆ ಈ ಪ್ರಸಂಗ ತಂದೊಡ್ಡಿದಳೋ ಎಂದು ಮನದಲ್ಲಿಯೇ ಚಡಪಡಿಸತೊಡಗಿದನು. ಶ್ರೀದೇವಿಯನ್ನೇ ಆಶ್ರಯಿಸಿ ಬದುಕುತ್ತಿರುವ ಗ್ರಾಮದ ಜನತೆಗೆ ಯಾವ ವಿಪತ್ತು ಬರಲಿದೆಯೋ ಎಂಬ ದುಃ

ಖವೂ ಒತ್ತರಿಸಿ ಬರತೊಡಗಿತು. ಆದರೂ ಬಸವಜೋಗಿ ಗಾಬರಿಪಡದೇ ಶ್ರೀದೇವಿಯ ಮೇಲೆ ಭಾರಹಾಕಿ ಅವಳನ್ನೇ ಅನೇಕ ರೀತಿಯಲ್ಲಿ ಪ್ರಾರ್ಥಿಸತೊಡಗಿದನು. ಮನಸ್ಸು ಮಾಡಿದರೆ ದೇವಿ ಏನು ಬೇಕಾದರೂ ಮಾಡಬಲ್ಲಳು. ಈ ಜಗವನ್ನೇ ಸೃಷ್ಟಿಸಿದ ಆದಿಶಕ್ತಿಗೆ ಈ ವ್ರತಾಚರಣೆ ಪೂರ್ಣಗೊಳಿಸುವುದು ಅದೆಂತಹ ಘನ ಕಾರ್ಯ ಎಂಬುದಾಗಿ ಚಿಂತಿಸತೊಡಗಿದನು. ಒಮ್ಮೆ ದೇವಿಯನ್ನು ಮನಸಾರೆ ಹೊಗಳುತ್ತಿದ್ದ ಮತ್ತೊಮ್ಮೆ ಹಟಮಾರಿ ಮಕ್ಕಳಂತೆ ಆಕೆಯ ವ್ರತ ಪೂರ್ತಿಗೊಳಿಸುವಂತೆ ಕೃಪೆ ಮಾಡೆಂದು ಹಟಮಾಡತೊಡಗಿದ. ಅಸಂಖ್ಯ ಜನ ಅವನ ಸುತ್ತ ನೆರೆದಿದ್ದರು. ಮೃತ್ಯುದೇವತೆಯ ಭೀಕರತೆಯನ್ನು ಕಂಡು ನೆರದ ಜನ ಕಂಪಿಸುತ್ತಿದ್ದರೆ ಬಸವಜೋಗಿ ಹುಲಿಗೆಮ್ಮನ ಮೇಲೆ ಭರವಸೆಯನ್ನಿರಿಸಿದ. ವ್ರತಾಚರಣೆ ಪೂರ್ತಿಗೊಳಿಸಬೇಕೆಂಬ ಸಂಕಲ್ಪವನ್ನು ಹೊತ್ತು ಭಕ್ತಿಯ ತಲ್ಲೀನತೆಯಲ್ಲಿ ತೊಳಲಾಡುವ ಸ್ಥಿತಪ್ರಜ್ಞನಾದ. ನೆರೆದ ಜನತೆಯ ಗಾಬರಿಯಾಗಲೀ ಚೀತ್ಕಾರವಾಗಲೀ ಹಾಹಾಕಾರವಾಗಲೀ ಅವನಿಗೆ ಕೇಳಿಸಲಿಲ್ಲ. ಅವನ ಆತ್ಮದ ಅಮರವಾಣಿ ಮಾತ್ರ ಸಾರಿ ಸಾರಿ ಹೇಳುತ್ತಿದ್ದುದು ಕೇಳಿಸುತ್ತಿತ್ತು. "ಶ್ರೀದೇವಿ ಹುಲಿಗೆಮ್ಮನ ಮುಂದೆ ನಾಗಜೋಗಿಯನ್ನಿರಿಸು ಮಿಕ್ಕದೆಲ್ಲ ಅವಳಿಗೆ ಸೇರಿದ್ದು ಎಂದು ಅನುಜ್ಞೆಯಂತೆ ನಾಗಜೋಗಿಯ ಮೃತದೇಹವನ್ನು ಶ್ರೀದೇವಿಯ ದೇವಸ್ಥಾನದಲ್ಲಿರಿಸಿ ಬಾಗಿಲು ಮುಚ್ಚಲಾಯಿತು. ಮತ್ತೆ ಕೆಲ ನಿಮಿಷಗಳ ನಂತರ ನಾಗಜೋಗಿಯು ನಿದ್ರೆಯಿಂದ ಎಚ್ಚತ್ತವನಂತೆ ಎದ್ದುಕುಳಿತನು. ಭಕ್ತಿ ಜನಸ್ತೋಮ ಹರ್ಷೋದ್ಗಾರಗಳಿಂದ ಕುಣಿದಾಡತೊಡಗಿದರು. ಮೇರೆ ಮಿಕ್ಕಿದ ಉತ್ಸಾಹದಿಂದ ಎಂದೆಂದೂ ಕೈಬಿಡಲಾರಳೆಂಬ ಅಂಶವನ್ನು ಅಂದು ಜನತೆಗೆ ಮನವರಿಕೆ ಮಾಡಿ ತೋರಿಸಿದಳು. ಸಗುಣೋಪಾಸನ ಸೋಪಾನಗಳಿಂದಲೇ ನಿರ್ಗುಣತ್ವದ ಶಿಖರಕ್ಕೇರಿದ ನಾಗಜೋಗಿ ಬಸವಜೋಗಿಯರಿಗೆ ಶ್ರೀದೇವಿ ಹುಲಿಗೆಮ್ಮ ಆದಿಶಕ್ತಿಯಾಗಿ ಕಾಣಿಸಿಕೊಂಡಳು. ಭವಾನಿಯಾಗಿ, ಭೀಮೆಯಾಗಿ, ಹೈಮವತಿಯಾಗಿ, ಚಂಡಿಯಾಗಿ, ಚಾಮುಂಡಿಯಾಗಿ, ಅಂಬೆಯಾಗಿ, ಜಗಧಾರಿಣಿಯಾಗಿ, ಅನ್ನಪೂರ್ಣೆಯಾಗಿ, ಶಾಕಂಬರಿಯಾಗಿ ಅನೇಕ ರೂಪಗಳನ್ನು ತಾಳಿ ವಿವಿಧ ಸ್ಥಳಗಳಲ್ಲಿ ಅವರವರ ಭಾವನೆಗಳಿಗೆ ತಕ್ಕಂತೆ ರೂಪದೋರಿ ಪೂಜೆಗೊಳ್ಳುತ್ತಿರುವ ಆ ಆದಿಶಕ್ತಿ ಅಂದು ಅವರಿಗೆ ಪರಾತ್ಪರ ಬ್ರಹ್ಮನಾಗಿ ಕಾಣಿಸಿಕೊಂಡಳು. ಹುಲಿಗೆಯ ತುಂಗಭದ್ರೆಯಲ್ಲಿಯೇ ಅವರು ಗಂಗೆ, ನರ್ಮದೆ, ಮಲಪ್ರಭೆಯನ್ನು ಕಂಡರು. ಶ್ರೀದೇವಿಯ ಈ ಪುಣ್ಯಕ್ಷೇತ್ರದಲ್ಲಿಯೇ ಅವರು ಕಾಶಿ, ರಾಮೇಶ್ವರ ಮತ್ತು ಸವದತ್ತಿಯ ಪಾವನತೆಯನ್ನನುಭವಿಸಿದರು. ಬ್ರಹ್ಮನ ಆರಾಧ್ಯದೇವತೆಯಾದ ಸರಸ್ವತಿಯನ್ನು, ವಿಷ್ಣುವಿನ ಹೃದಯ ಕಮಲವೇ ಆದ ಲಕ್ಷ್ಮಿಯನ್ನೂ, ಶಿವನ ದೇಹಾರ್ಧಧಾರಿಣಿಯಾದ ಉಮೆಯನ್ನೂ ಅವರು ಶ್ರೀದೇವಿ ಹುಲಿಗೆಮ್ಮನಲ್ಲಿ ಕಂಡುಕೊಂಡರು.

ಗುರು ಸೋಮನಾಥ ಭಟ್ಟರು ಹಾಕಿಕೊಟ್ಟ ಮಾರ್ಗದಲ್ಲಿ ನಿಷ್ಕಾಮ ಭಕ್ತಿಯನ್ನಿಟ್ಟು ತಾವು ಆತ್ಮಸಾಕ್ಷಾತ್ಕಾರ ಸಾಧಿಸಿಕೊಂಡರಲ್ಲದೇ ಮಾನವ ಕುಲಕೋಟಿಗೆ ಶ್ರದ್ಧಾ ಸ್ಥಾನವನ್ನೇ ನಿರ್ಮಿಸಿ ಪರಮ ಪಾವನ ಕಾರ್ಯವೆಸಗಿದ್ದಾರೆ. ಅವರ ಮಾರ್ಗದಲ್ಲಿ, ಅವರಷ್ಟು ನಿಷ್ಕಾಮ ಭಕ್ತಿಯನ್ನಿರಿಸದಿದ್ದರೂ ಸಹ, ಕಿಂಚಿದ್ಭಕ್ತಿಯನ್ನಿರಿಸಿ ದೇವಿಯ ಸೇವೆಗೈದದ್ದಾದರೆ ಅವನೇ ಪುಣ್ಯವಂತನೆನ್ನುವದರಲ್ಲಿ ಸಂಶಯವಿಲ್ಲ. ನಾಗಜೋಗಿ ಬಸವಜೋಗಿಯರಿಗೆ ದೇವಿಯು ಕೃಪೆ ಮಾಡಿ ಅವರಿಂದ ಬಾಳೆದಂಡಿಗೆ (ಶಿಬಿಕೋತ್ಸವ) ಮತ್ತು ಶರನ್ನವರಾತ್ರ್ಯಾದಿ ಸಕಲ ಪೂಜಾ

ವಿಧಾನಗಳನ್ನು ಮಾಡಿಸಿಕೊಂಡು ಅವರ ಮೂಲಕ ತನ್ನ ಭಕ್ತರಿಗೆಲ್ಲ ಕೃಪೆ ಮಾಡುತ್ತ ಹುಲಿಗಿಯಲ್ಲಿ ನೆಲೆಸಿದ್ದಾಳೆ. ಯಜ್ಞಯಾಗಾದಿಗಳು, ಜಪ, ತಪ, ಹೋಮ ಹವನಾದಿಗಳಾವವೂ ಇಲ್ಲದಿದ್ದರೂ ಸರಿ, ಅವಳನ್ನು ಭಕ್ತಿಪೂರ್ವಕ ಆರಾಧಿಸಿದರೆ ಸಾಕು, ಅವಳಿಂದು ಭಕ್ತರಿಗೆ ಬೇಡಿದಿಷ್ಟಾರ್ಥಗಳನ್ನು ಪೂರೈಸುವವಳಾಗಿದ್ದಾಳೆ. "ನಮೇ ಭಕ್ತಃ ಪ್ರಣಶ್ಯತಿ" ಎಂಬ ವಾಕ್ಯವನ್ನು ನಾಗಜೋಗಿ ಬಸವಜೋಗಿಯವರ ವೃತ್ತಾಂತದಿಂದ ತೋರಿಸಿದ್ದಾಳೆ. ಶ್ರೀದೇವಿ ಹುಲಿಗೆಮ್ಮನನ್ನು ಭಕ್ತಿಯಿಂದ ಪೂಜಿಸಿ, ಭಜಿಸಿ ಇಹದಲ್ಲಿ ಸುಖವನ್ನೂ ಪರದಲ್ಲಿ ಸದ್ಗತಿಯನ್ನು ಪಡೆಯುವ ಸದಾವಕಾಶವನ್ನು ದೇವಿ ಕರುಣಿಸಿರುವುದು ಮಾನವ ಕೋಟಿಗೆ ಒಂದು ವರದಾನವಾಗಿದೆ.

ಅಂದಿನಿಂದ ಇಂದಿನವರೆಗೆ ಅಸಂಖ್ಯ ಜನ ಶ್ರೀದೇವಿಯಲ್ಲಿ ಭಕ್ತಿಯನ್ನಿರಿಸಿ ಅವಳ ಕೃಪೆಗೆ ಪಾತ್ರರಾಗಿದ್ದಾರೆ. ತಮ್ಮ ದುಃಖ ದುಮ್ಮಾನಗಳನ್ನು ಪರಿಹರಿಸಿಕೊಂಡಿದ್ದಾರೆ. ರೋಗ ರುಜಿನಗಳನ್ನು ಗುಣಪಡಿಸಿಕೊಂಡಿದ್ದಾರೆ. ಕಷ್ಟಕಾರ್ಪಣ್ಯಗಳಿಂದ ಮುಕ್ತರಾಗಿದ್ದಾರೆ. ಸಿರಿ ಸಂಪತ್ತನ್ನು ಪಡೆದು ಪುಣ್ಯ ಕಾರ್ಯಗಳನ್ನೆಸಗಿದ್ದಾರೆ. ನಿಷ್ಕಾಮ ಭಕ್ತಿಯನ್ನು ಹೊಂದಿ ಪರಾತ್ಪರ ಬ್ರಹ್ಮವನ್ನೇ ಹೊಂದಿದ್ದಾರೆ (ಶ್ರೀ ಬಿ. ಆರ್. ದೇಸಾಯಿ : ೧೯೭೩ : ೧-೧೨).

### ರೇಣುಕೆ ಜಮದಗ್ನಿಯರ ಕಥೆ

ಸಪ್ತ ಮಣಿಗಳಲ್ಲಿ ಓರ್ವನಾದ ಜಮದಗ್ನಿಯು ಬ್ರಹ್ಮಚರ್ಯಾನುಷ್ಠಾನವನ್ನು ಬಹುಕಾಲ ಮಾಡಿ ಭೂಭಾರವನ್ನು ಇಳಿಸುವುದಕ್ಕೋಸ್ಕರ ಸಾಕ್ಷಾತ್ ನಾರಾಯಣನನ್ನು ಪುತ್ರ ಮುಖೇನ ಪಡೆಯಲು ದೇವತೆಗಳಿಂದ ಪ್ರಾರ್ಥಿತನಾಗಿ ರೇಣುಕಾದೇವಿಯನ್ನು ವಿವಾಹ ಮಾಡಿಕೊಂಡನು. ರೇಣುಕೆಯು ಅಯೋನಿಜಳು. ಜಮದಗ್ನಿಯು ಈಕೆಯನ್ನು ವಿವಾಹವಾಗಿ ಬಹುಕಾಲ ಸಂಸಾರ ಮಾಡಿಕೊಂಡು ತಪೋನಿರತನಾಗಿದ್ದನು. ರೇಣುಕೆಯಲ್ಲಿ ಜಮದಗ್ನಿಗೆ ಜನಿಸಿದ ಐವರು ಸುಪುತ್ರರಲ್ಲಿ ಪರಶುರಾಮನು ಕಡೆಯವನು. ಈ ಪರಶುರಾಮನೇ ಶ್ರೀಮನ್ನಾರಾಯಣರ ಅವತಾರವೆಂದು ತಿಳಿಯಲಾಗಿದೆ. ಈ ಐವರು ಸುಪತ್ರರಿಂದಲೂ, ರೇಣುಕಾ ದೇವಿಯಿಂದಲೂ ಕೂಡಿಕೊಂಡು, ಹೊಸೂರು-ಹುಲಿಗಿ ಪ್ರಾಂತವನ್ನು ಆಶ್ರಯವನ್ನಾಗಿ ಮಾಡಿಕೊಂಡು, ಮಧ್ಯೆ ಪ್ರವಹಿಸುವ ತುಂಗಭದ್ರಾ ನದಿಯ ದಡದಲ್ಲಿ ಜಮದಗ್ನಿಯು ತಪಸ್ಸನ್ನಾಚರಿಸುತ್ತಿದ್ದನು.

ಒಂದು ಸಂದರ್ಭದಲ್ಲಿ ಎಲ್ಲಾ ಕುಮಾರರೂ ಫಲಹಾರ ತರಲು ಅಡವಿಗೆ ಹೋಗಿರಲು, ಜಮದಗ್ನಿಯು ದೇವರ ಪೂಜೆಯಲ್ಲಿ ನಿರತನಾಗಿದ್ದಾಗ ರೇಣುಕೆಯು ಸ್ನಾನಕ್ಕೆಂದು ನದಿಗೆ ತೆರಳಿದಳು. ಸ್ನಾನಾನಂತರ ಹಿಂತಿರುಗಿ ಬರುತ್ತಿದ್ದಾಗ ಚಿತ್ರ ರಥನೆಂಬ ಗಂಧರ್ವನು ತನ್ನ ವನಿತೆಯರೊಂದಿಗೆ ಜಲಕ್ರೀಡೆಯಲ್ಲಿ ನಿರತನಾಗಿದ್ದುದು ಗೋಚರಿಸಿತು. ವಿಚಿತ್ರವಾದ ಕ್ರೀಡಾ ದರ್ಶನದಿಂದ ರೇಣುಕಾದೇವಿಗೆ ಮನೋವಿಕಾರವಾಯಿತು. ತಡವಾಗಿ ಆಶ್ರಮಕ್ಕೆ ಬಂದ ರೇಣುಕೆಯನ್ನು ಸಿಟ್ಟಿನಿಂದ ನೋಡಲು ಆಕೆಯ ಮನಸ್ಸು ಮಲಿನವಾದುದು ಜಮದಗ್ನಿಯ ಜ್ಞಾನದೃಷ್ಟಿಗೆ ತೋರಿತು. ಋಷಿಯು ಮತ್ತಷ್ಟೂ ಕುಪಿತನಾಗಿ ಅನುಕ್ರಮವಾಗಿ ತನ್ನ ಪುತ್ರರನ್ನು ಕರೆದು ತಾಯಿಯ ಶಿರಸ್ಸನ್ನು ಛೇದಿಸುವಂತೆ ಆಜ್ಞಾಪಿಸಿದನು. ಧರ್ಮ ಸಂಕಟದಲ್ಲಿ ಬಿದ್ದ ಮೊದಲಿನ ನಾಲ್ಕು ಮಂದಿ ಪುತ್ರರು (ಯರ್ಮಶ್ವಾಸ, ಸುಕ್ಷೇಣ, ವಸು ಮತ್ತು ವಿಶ್ವಾವಸು) ತಾಯಿಯ ಶಿರಚ್ಛೇದನವನ್ನು ಮಾಡುವ ಪಾಪಕೃತ್ಯಕ್ಕೆ ಅಂಜಿ, ಏನೆಂದೂ

ಪ್ರತ್ಯುತ್ತರವನ್ನು ಕೊಡದೆ ನಿಂತರು. ಜಮದಗ್ನಿಯು ಇವರ ಉದ್ಧಟತನಕ್ಕೆ ಇವರನ್ನು ಶಪಿಸಿ, ಪರಶುರಾಮನನ್ನು ಉದ್ದೇಶಿಸಿ ತನ್ನ ಆಜ್ಞೆಯನ್ನು ಪರಿಪಾಲಿಸಬೇಕೆಂದು ಕೇಳಿಕೊಂಡನು. ತಾಯಿಯ ರುಂಡವನ್ನು ಕತ್ತರಿಸಿ ಹಾಕಿದನು. ಸುಪ್ರಸನ್ನವಾದ ಜಮದಗ್ನಿಯ ಮಗನ ವಿಧೇಯತೆಗೆ ಮನಸೋತು ಬೇಕಾದ ವರವನ್ನು ಬೇಡಬೇಕೆಂದನು. ಈ ಮಾತಿಗೆ ಹರುಷಗೊಂಡು ಪರಶುರಾಮನು ತನ್ನ ತಾಯಿಯನ್ನು ಪುನಃ ಬದುಕಿಸಬೇಕೆಂದು ತಲೆಯನ್ನು ಪ್ರಾರ್ಥಿಸಿಕೊಂಡನು. ಮಾತ್ರವಲ್ಲದೆ ಮಾತೃ ಹತ್ಯಾದೋಷ ತಟ್ಟಬಾರದೆಂದೂ, ತನ್ನ ಅಣ್ಣಂದಿರೆಲ್ಲಾ ಮೊದಲಿನಂತೇ ಸಚೇತನರಾಗಬೇಕೆಂದೂ, ಎಲ್ಲಾ ವಿಷಯಗಳಲ್ಲೂ ಅನುಗ್ರಹಿಸಬೇಕೆಂದೂ ಬೇಡಿಕೊಂಡನು. ಮಹಾತಪಸ್ವಿಯಾದ ಜಮದಗ್ನಿಯು ಎಲ್ಲಾ ವರಗಳನ್ನೂ ಪರಶುರಾಮನಿಗೆ ದಯಪಾಲಿಸಿದನು. ರೇಣುಕಾದೇವಿಯು ನಿದ್ರೆಯಿಂದ ಎದ್ದಂತೆ ಸಜೀವಿತಳಾಗಿ ನಿಂತಳು. ಅಗ್ರಜರೆಲ್ಲರೂ ಉದ್ಧೃತರಾದರು.

ಪರಶುರಾಮನು ರೇಣುಕೆಯನ್ನು ಸಂಹರಿಸಿದುದು ಹುಲಿಗಿ ಪ್ರದೇಶದಲ್ಲಿ. ಅಲ್ಲಿಯೇ ಪಾದದಿಂದ ಕಂಠ ಪರ್ಯಂತ ಇದ್ದ ದೇಹವು ಬಿದ್ದು ಹೋಗಿ, ಶಿರಸ್ಸು ಪ್ರಹಾರ ವೇಗದಿಂದ ಹೊಸೂರು ಪ್ರದೇಶ ಪತಿತವಾಯಿತು. ಈ ಎರಡೂ ಯೋಜಿತವಾಗಿ ರೇಣುಕಾದೇವಿಯು ಬದುಕಿದ ಮೇಲೆ, ಶ್ರೀ ಪರಶುರಾಮನು ತನ್ನ ಕರಕಮಲದಿಂದಲೇ ಒಂದು ಗೋಳಾಕಾರವಾದ ಶಿಲೆಯನ್ನು ತನ್ನ ತಾಯಿಯ ದಂಡವು ಬಿದ್ದಲ್ಲಿಯೂ, ಮತ್ತೊಂದನ್ನು ರುಂಡ ಬಿದ್ದಲ್ಲಿಯೂ ಇರಿಸಿ ತನ್ನ ಪರಶುವಿನಿಂದ ಭಿನ್ನವಾಗಿ ದುರ್ಗಾರೂಪವನ್ನು ತಾಳಿದ ತನ್ನ ತಾಯಿಯ ಅಂಶದಿಂದಲೂ, ಸಾಕ್ಷಾತ್ ಲಕ್ಷ್ಮೀದೇವಿಯ ಆದೇಶದಿಂದಲೂ ಯುಕ್ತರಾಗುವಂತೆ ಮಾಡಿದನು. ಭಗವಂತನ ಇಚ್ಛೆಯಿಂದ ಎರಡು ಕಡೆಗಳಲ್ಲಿಯೂ ದುರ್ಗಾರೂಪದಿಂದ ದೇವಿಯು ಪ್ರತ್ಯಕ್ಷಳಾದಳು.

"ನೀನು ಕಲಿಯುಗ ಇರುವ ಪರ್ಯಂತರ ಇಲ್ಲೇ ಇದ್ದು ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪರಿಪಾಲಿಸುತ್ತ, ವಾಸವಾಗಿದ್ದು ಈ ಭಾರ್ಗವ ಕ್ಷೇತ್ರಕ್ಕೆ ಸ್ಮಾರಕಳಾಗಿರು" ಎಂದು ವರಗಳನ್ನಿತ್ತು ಪರಶುರಾಮನು ಮಹೇಂದ್ರ ಪರ್ವತವನ್ನು ಸೇರಲು ಹೊರಟುಹೋದನು ಡಾ. ಪಿ. ಗುರುರಾಜಭಟ್ : ೧೯೭೬ : ೧-೨).

### ವ್ಯಾಸರಾಯರಿಂದ ಸಾಲಿಗ್ರಾಮ ಪಡೆದುದು

ಶ್ರೀ ವ್ಯಾಸರಾಯರು ಹೊಸೂರಿಗೆ ದಿಗ್ವಿಜಯ ಮಾಡಿ ತಮ್ಮ ಶಿಷ್ಯನ ಮನೆಯಲ್ಲಿ ಇಳಿದುಕೊಂಡರು. ಮರುದಿನ ಪುರಪ್ರಮುಖರು ಬಂದು ಶ್ರೀ ಹೊಸೂರಮ್ಮನ ಗುಡಿಯಲ್ಲಿಯೇ ದೇವತಾರ್ಚನೆ ನಡೆಸಬೇಕೆಂದು ಬೇಡಿಕೊಂಡರು. ಶ್ರೀ ಸ್ವಾಮಿಗಳು ಔದಾಸೀನ್ಯದಿಂದ ಊರ ಪುರಜನದ ಬೇಡಿಕೆಯನ್ನು ಕಡೆಗಣಿಸಿದರು. ಶಿಷ್ಯರೊಂದಿಗೆ ಸ್ವಾಮಿಗಳು ಸ್ನಾನಕ್ಕೆ ನದಿತಟಾಕಕ್ಕೆ ಹೋಗಿ ಸ್ನಾನಾದಿಕಾರ್ಯವನ್ನು ಮುಗಿಸಿದರು. ಹಿಂತಿರುವಾಗ ಶ್ರೀಪಾದರಿಗೆ ಎರಡು ಕಣ್ಣುಗಳು ಮಸುಕಾಗಿ ಕಾಣದಾದವು. ಜ್ಞಾನಿಗಳಾದ ಶ್ರೀವ್ಯಾಸತೀರ್ಥರು, ಇದು ದೇವಿಯ ಕೋಪದಿಂದರಬೇಕೆಂದು ಮನಗಂಡು ಮರುದಿನ ದೇವಾಲಯದಲ್ಲಿಯೇ ತನ್ನ ಆರಾಧ್ಯ ದೇವತೆಯಾದ ಶ್ರೀ ವೇಣುಗೋಪಾಲನ ಪೂಜೆಯನ್ನು ಮಾಡುವೆನೆಂದು ದೇವಿಯನ್ನು ಪ್ರಾರ್ಥಿಸಿಕೊಂಡರು. ಶ್ರೀ ಪಾದಂಗಳವರ ಕಣ್ಣುಗಳು ಮುಂಚಿನಂತೆಯೇ ಶಕ್ತಿಯುತವಾದವು.

ಸಂಕಲ್ಪದಂತೆಯೇ ಶ್ರೀಪಾದರು ಮರುದಿನ ತಮ್ಮ ಪೂಜಾದಿವಿನಿಯೋಗಗಳನ್ನು ದುರ್ಗಾದೇವಿಯ ದೇವಾಲಯದಲ್ಲಿಯೇ ಮಾಡಲು ಸನ್ನದ್ಧರಾದರು. ಆದಿನ ರಾತ್ರಿ ಶ್ರೀಪಾದರಾಯರಿಗೆ ದೇವಿಯು ಸ್ವಪ್ನದಲ್ಲಿ ಕಾಣಿಸಿಕೊಂಡು ರುಕ್ಮಿಣೀ, ಸತ್ಯಭಾಮಾ ಸಹಿತ ಶ್ರೀಕೃಷ್ಣ ದೇವರಾರ್ಚನೆಯಾದನಂತರ ತಮ್ಮಲ್ಲಿರುವ ಎರಡು ಸಾಲಿಗ್ರಾಮಗಳನ್ನು ತನಗೆ ಕಣ್ಣಾಗಿರಿಸಿಕೊಳ್ಳಲು ಒಪ್ಪಿಸಬೇಕೆಂದೂ, ತಾನು ಸ್ವತಃ ಬಂದು ಶ್ರೀಪಾದರ ಕೈಗಳಿಂದ ಹಿಂಬದಿಯಲ್ಲಿ ಅವುಗಳನ್ನು ಸ್ವೀಕರಿಸುವೆನೆಂದೂ ಹೇಳಿ ಅದೃಶ್ಯಳಾದಳು. ಶ್ರೀಪಾದರಿಗೆ ಆದ ಆನಂದ ಅಪರಿಮಿತವಾದುದು. ಮರುದಿನ ಅಂತೆಯೇ ಶ್ರೀಕೃಷ್ಣನ ಪೂಜೆಯಾದ ಅನಂತರ ಶ್ರೀಪಾದರು ತನ್ನ ಎರಡೂ ಕೈಗಳನ್ನು ಸಾಲಿಗ್ರಾಮಗಳೊಂದಿಗೆ ಹಿಂದೆ ಚಾಚಿದಾಗ, ದೇವಿಯು ನೃತ್ಯ ಸಪ್ಪಳದೊಂದಿಗೆ ಅವುಗಳನ್ನು ಸ್ವೀಕರಿಸಿ ಅದೃಶ್ಯಳಾದಳು. ಈ ಸಾಲಿಗ್ರಾಮಗಳೇ ಇಂದಿಗೂ ದೇವಿಯ ಮೂಲ ಮೂರ್ತಿಯ ಎರಡು ಕಣ್ಣುಗಳಾಗಿ ಪೂಜಿಸಲ್ಪಡುತ್ತವೆ ಡಾ. ಪಿ. ಗುರುರಾಜಭಟ್ : ೧೯೭೬ : ೭-೮).

### ಹರಹರ ಮಹಾದೇವ

ವಿಜಯನಗರ ಪತನದನಂತರ ಅದಕ್ಕೆ ಅಧೀನರಾದ ಅನೇಕ ಪಾಳೆಯಗಾರರು ಸ್ವತಂತ್ರರಾದರು. ಹೀಗೆ ಸ್ವತಂತ್ರರಾದವರಲ್ಲಿ ಹರಪನಹಳ್ಳಿಯ ಪಾಳೆಯಗಾರನಾದ ಸೋಮಶೇಖರ ನಾಯಕನೂ ಒಬ್ಬನು. "ಹೊಸೂರು ಕೋಟೆಯ ಪಾಳೆಯಗಾರನು ತಾನೂ ಸ್ವತಂತ್ರನೆಂದು ಘೋಷಿಸಿದನು. ಕುಪಿತನಾದ ಸೋಮಶೇಖರ ನಾಯಕನು ಹೊಸೂರಿನ ಪಾಳೆಯಗಾರನ ಮೇಲೆ ಯುದ್ಧ ಹೂಡಿದನು. ಅನೇಕ ದಿನಗಳ ಘನಘೋರ ಸಮರ ಸಂಭವಿಸಿ ಹೊಸೂರು ಕೋಟೆ ನಾಶವಾಯಿತು. ಬಹುಸಂಖ್ಯೆಯಲ್ಲಿ ಸರದಾರರು, ಸೈನಿಕರು ಮೃತ್ಯುವಶರಾದರು. ಆದರೂ ಸೋಮಶೇಖರ ನಾಯಕನಿಗೆ ಕೋಟೆಯನ್ನು ಗೆಲ್ಲುವುದಾಗಲಿಲ್ಲ. ಸೈನಿಕರು ಜೋಗಮ್ಮನ ವೇಷದಲ್ಲಿ "ಯಾಕುಲದೇ ಜಗಾಕುಲದೇ ಜಗಾ ಉಧೋ ಉಧೋ" ಎಂಬ ಘೋಷಣೆ ಹಾಕುತ್ತಾ ಸಂಚರಿಸುತ್ತಿದ್ದರು. ಹಿಂದೂ ಸಾಮ್ರಾಜ್ಯ ಸಂಸ್ಥಾಪಕನಾದ ಛತ್ರಪತಿ ಶಿವಾಜಿಯ ಸೈನಿಕರು ಹರ ಹರ ಮಹಾದೇವ ಎಂಬ ಘೋಷಣೆಯಿಂದ ಸ್ಫೂರ್ತಿ ಉತ್ಸಾಹಗಳನ್ನು ಪಡೆಯುತ್ತಿದ್ದಂತೆ ಹೊಸೂರಿನ ಕೋಟೆಯ ಸೈನಿಕರು ಮೇಲಿನ ಘೋಷಣೆಯಿಂದ ಸ್ಫೂರ್ತಿಯನ್ನು ಪಡೆದು ನಾಯಕನೊಂದಿಗೆ ಧೈರ್ಯೋತ್ಸಾಹಗಳಿಂದ ಸೆಣಸುತ್ತಿದ್ದರು.

ಈ ಮಧ್ಯೆ ಒಂದು ದಿನ ಸೋಮಶೇಖರನಿಗೆ ಸ್ವಪ್ನದಲ್ಲಿ ಗ್ರಾಮದೇವತೆ ಶ್ರೀ ಹೊಸೂರಮ್ಮ ದೇವಿಯು ಹೊಸೂರು ಕೋಟೆಯನ್ನು ರಕ್ಷಿಸುತ್ತಿದ್ದಂತೆಯೂ, ಅದು ಅಜೇಯವೆಂಬಂತೆಯೂ ಕಂಡಿತು. ಇದರಿಂದ ಪಶ್ಚಾತ್ತಾಪವಾಗಿ ನಾಯಕನು ಶ್ರೀ ಹೊಸೂರಮ್ಮನಿಗೆ ಶಿರಸಾಷ್ಟಾಂಗ ಪ್ರಣಾಮಗಳನ್ನು ಮಾಡಿ ತನ್ನನ್ನು ಕ್ಷಮಿಸುವಂತೆ ಬೇಡಿಕೊಂಡನಲ್ಲದೆ, ಭಯಭಕ್ತಿಗಳಿಂದ ಶ್ರೀದೇವಿಯ ಪೂಜೆಯನ್ನು ವಿಜೃಂಭಣೆಯಿಂದ ಮಾಡಿಸಿದನು. ಸುಪ್ರಸನ್ನಳಾದ ದೇವಿಯು ಅವನಿಗೆ ಪ್ರತ್ಯಕ್ಷಳಾಗಿ ಕ್ಷಮಾದಾನ ಮಾಡಿದಳು. ಈ ಸುಸಂದರ್ಭದಲ್ಲಿ ಸೋಮಶೇಖರ ನಾಯಕರು ಶ್ರೀ ಹೊಸೂರಮ್ಮ ದೇವಿಯ ಪೂಜೆ ಮತ್ತು ಇನ್ನಿತರ ಸಂಪ್ರದಾಯಗಳನ್ನು ಅನೂಚೀನವಾಗಿ

ಜರುಗಿಸುವುದಕ್ಕಾಗಿ ಎಪ್ಪತ್ತು ಎಕರೆ ಸುಜಲಾ ಸುಫಲಾ ಭೂಮಿಯನ್ನು ಕಾಣಿಕೆಯಿತ್ತನು ಡಾ. ಪಿ. ಗುರುರಾಜಭಟ್ : ೧೯೭೬ : ೯-೧೦).

### ರೋಗ ಪರಿಹಾರ

ಈ ಘಟನೆಯು ೧೯೬೦ ನೇ ಸಾಲಿನ ಅಕ್ಟೋಬರ್ ತಿಂಗಳಲ್ಲಿ ಜರುಗಿತ್ತು. ಬಳ್ಳಾರಿಯ ಹಳ್ಳಿಯಲ್ಲಿ ದ್ಯಾಮಪ್ಪನೆಂಬ ಬಡ ರೈತನು ಇದ್ದಾನೆ. ಇವನಿಗೆ ಒಬ್ಬ ಮಗಳು ಯಮನವ್ವನೆಂಬುವಳು ಇರುತ್ತಾಳೆ. ಈಕೆಯನ್ನು ಅದೇ ಊರಲ್ಲಿ ಹಳ್ಳಿ ಭೀಮಪ್ಪನಿಗೆ ಕೊಟ್ಟು ಆತನನ್ನು ಅಳಿಯತನಕ್ಕೆ ಇಟ್ಟುಕೊಂಡಿದ್ದಾನೆ. ೧೯೬೦ನೇ ಇಸ್ವಿಯ ಭಾದ್ರಪದ ಮಾಸದಲ್ಲಿ ಯಮನವ್ವನಿಗೆ ಜಡ್ಡಾಯಿತು. ಜಡ್ಡಿನ ಲಕ್ಷಣವು ಬಹಳ ಚಮತ್ಕಾರವಾಗಿತ್ತು. ಮೈಯಲ್ಲಿ ಸಣ್ಣಾಗಿ ಜ್ವರವಿದ್ದು ಯಾವಾಗಲೂ ನಡುಗುತ್ತಿದ್ದಳು. ಅನೇಕ ಮಂದಿ ವೈದ್ಯರು ಡಾಕ್ಟರುಗಳಿಗೆ ತೋರಿಸಿದ್ದಾಯಿತು. ಗುಣವಾಗಲಿಲ್ಲ. ಒಂದು ದಿನ ಶ್ರೀದೇವಿಯು ದ್ಯಾಮವ್ವನ ಮೈಯಲ್ಲಿ ಪ್ರವೇಶಿಸಿ "ಯಾವಾಗಲೂ ನಿಮ್ಮ ಮನೆತನದವರು ನನ್ನಲ್ಲಿ ಶ್ರದ್ಧೆ ಭಕ್ತಿಯನ್ನಿರಿಸಿದ್ದರು. ಈಗ ದ್ಯಾಮಪ್ಪನು ನನ್ನನ್ನು ತಾತ್ಸಾರ ಮಾಡಿದ್ದಾನೆ. ನೀನು ಇಲ್ಲಿ ಗುಡಿಗೆ ಬರಬೇಕು ಮತ್ತು ನನ್ನಲ್ಲಿ ಭಕ್ತಿ ಶ್ರದ್ಧೆ ಹೊಂದಬೇಕು. ಅಂದರೆ ನಿನ್ನ ಕಷ್ಟ ಪರಿಹಾರ ಮಾಡುವೆನು" ಎಂದು ಹೇಳಿದಳು. ಮೂರು ದಿನ ಮೈಯಲ್ಲಿ ಎಚ್ಚರವಿಲ್ಲದೆ ಮಲಗಿಬಿಟ್ಟಳು. ಅದೇ ಸ್ಥಿತಿಯಲ್ಲಿ ದಸರೆಯ ಮುಂದೆ ಶ್ರೀ ಹುಲಿಗೆಮ್ಮನ ಗುಡಿಗೆ ಕರಕೊಂಡು ಬಂದು, ತಪ್ಪಾಯಿತೆಂದು ಬೇಡಿಕೊಂಡು, ಸೇವೆಗೈಯಲು ಪ್ರಾರಂಭಮಾಡಲಾಗಿ ಮರುದಿನವೇ ಗುಣವಾಯಿತು. ಈಗ ಒಂದು ಹೆಣ್ಣು ಶಿಶುವನ್ನು ಹೆತ್ತು ಸೌಖ್ಯದಿಂದ ಇರುತ್ತಾಳೆ. (ಬಿ. ಆರ್. ದೇಸಾಯಿ : ೧೯೭೩ : ೨೦).

### ಭಕ್ತರ ಕೈವಾರಿ ಶ್ರೀದೇವಿ ಟೀಪುಸುಲ್ತಾನನ ಮೇಲೆ ಕೃಪೆ ಮಾಡಿದ್ದು

ಒಮ್ಮೆ ಟೀಪು ಸುಲ್ತಾನನು ದಂಡಯಾತ್ರೆಗೆ ಹೊರಟಿದ್ದಾನೆ. ದಾರಿಯಲ್ಲಿ ಅನೇಕ ಪಾಳೆಯಗಾರರನ್ನು ಸದೆಬಡೆಯುತ್ತ, ಅವರನ್ನು ಗೆಲ್ಲುತ್ತ ಅವರಿಂದ ಕಪ್ಪಕಾಣಿಕೆಯನ್ನು ಸ್ವೀಕರಿಸುತ್ತ ಹೊರಟಿದ್ದಾನೆ. ಹೀಗೆ ಸಾಗುತ್ತಾ ಸಾಗುತ್ತ ಹುಲಿಗಿ ಗ್ರಾಮಕ್ಕೆ ಆಗಮಿಸಿದನು. ಆಗಿನ ಕಾಲಕ್ಕೆ ಹುಲಿಗಿಯ ಭದ್ರವಾದ ಕೋಟೆಯಿಂದ ಯುಕ್ತವಾಗಿ ಅಭೇದ್ಯವಾಗಿತ್ತು. ಕೋಟೆಯನ್ನು ಮುತ್ತಿ ಒಂದು ತಿಂಗಳಾದರೂ ಸೋಲು ಗೆಲುವು ನಿಶ್ಚಯವಾಗಲೊಲ್ಲದು. ಹುಲಿಗಿಯ ಪಾಳೆಯಗಾರ ದೇವಿಯ ಪರಮ ಭಕ್ತನಿದ್ದನು. ಒಂದು ದಿನ ಪಾಳೆಯಗಾರನು ಟೀಪುವಿನಿಂದ ಜರ್ಜರಿತನಾಗಿ ಶ್ರೀದೇವಿಯನ್ನು ಕುರಿತು ನಾನಾ ರೀತಿಯಿಂದ ಸ್ತೋತ್ರಮಾಡಿ ಶ್ರೀದೇವಿಯ ದಂಡಕವನ್ನು ಭಕ್ತಿಪರವಶದಿಂದ ಪಾಡುತ್ತಿರಲು ಅವನಿಗೆ ನಿದ್ರೆ ಬಂದಂತಾಗಿ ಮಲಗಿಬಿಟ್ಟನು. ಅವನ ಕನಸಿನಲ್ಲಿ ಶ್ರೀದೇವಿಯು ಬಂದು "ಕುಮಾರ, ಏಕೆ ದುಃಖ ಮಾಡುವೆ? ನಾನಿರಲು ನೀನು ದುಃಖಿಸುವುದೆ? ಇನ್ನು ಮೂರು ದಿನಗಳಲ್ಲಿ ಟೀಪುವೇ ತನ್ನ ಬಿಡಾರವನ್ನು ಇಲ್ಲಿಂದ ಎಬ್ಬಿಸುತ್ತಾನೆ. ನೀನು ಕಾಳಜಿ ಮಾಡುವ ಕಾರಣವಿಲ್ಲ" ಹೀಗೆಂದು ಅಪ್ಪಣೆ ಕೊಟ್ಟಳು. ಮರುದಿನ ಟೀಪುವಿನ ಬಿಡಾರದಲ್ಲಿ ಅಲ್ಲೋಲ ಕಲ್ಲೋಲ ಪ್ರಾರಂಭವಾಯಿತು. ದಂಡಾಳುಗಳು ಮತ್ತು ಆನೆ, ಕುದುರೆ, ಎಲ್ಲವೂ ಕಣ್ಣು ಕಾಣದೆ ಬಳಲಹತ್ತಿದವು. ಇದೇನು ಆಶ್ಚರ್ಯ ಎಂದು ಸುತ್ತಮುತ್ತ

ನೋಡಿ ಸ್ವತಃ ಕುದುರೆಯನ್ನೇರಿ ತನ್ನ ಸೈನ್ಯದಲ್ಲಿ ತಿರುಗಾಡುತ್ತಿರಲು ಅವನ ಕುದುರೆಯು ಒಂದು ಹೆಜ್ಜೆಯನ್ನು ಸಹ ಮುಂದಿಡದೆ ಚಡಪಡಿಸಲು ಪ್ರಾರಂಭಿಸಿತು. ಸೈನ್ಯದಲ್ಲಿ ಎತ್ತ ನೋಡಿದರತ್ತ ಹಾಹಾಕಾರವು ಪ್ರಾರಂಭವಾಯಿತು. ಇಷ್ಟಾದ ಬಳಿಕ ದೂರದಿಂದ ಯಾರೋ ಹೆಣ್ಣುಮಗಳು ಬರುವಂತೆ ಭಾಸವಾಯಿತು. ನೋಡುತ್ತಾನೆ ಇವಳೇನು ಮೋಹಿನಿಯೋ ಅಥವಾ ದೇವಲೋಕದ ಅಪ್ಸರೆಯೋ ಎಂದು ನೋಡುತ್ತಿರಲಾಗಿ ಅವಳು ತೀರ ಹತ್ತಿರ ಬಂದಳು."

ಟೀಪು: "ನೀನಾರಮ್ಮಾ, ನನ್ನ ದಂಡಿನ ಪಾಳೆಯದಲ್ಲಿ ನಿರ್ಭಯವಾಗಿ ಅಡ್ಡಾಡಲು ನಿನಗೆ ಸ್ವಲ್ಪವಾದರೂ ಭಯವಿಲ್ಲವೇ?

ಸ್ತ್ರೀ: "ನಾನು ಇಲ್ಲಿಯವಳೇ ಇದೇ ಊರಲ್ಲಿರುವವಳು"

ಟೀಪು: "ನೀನು ನನ್ನೆದುರಿಗೆ ಇಷ್ಟು ದಿಟ್ಟತನದಿಂದ ಮಾತಾಡುವಿ. ನನ್ನ ಎದುರಿನಲ್ಲಿ ಸ್ತ್ರೀಯರು ಬರಬೇಕಾದರೆ ಅಂಜುವರು. ಇದನ್ನೆಲ್ಲ ನೋಡಲಾಗಿ ನೀನು ಮನುಷ್ಯಳಲ್ಲ. ನಮ್ಮ ಚಾಮುಂಡಿಯೇ ನೀನಿರುವೆಯೆಂದು ತಿಳಿಯುವೆ. ಅಲ್ಲವೆಂದಾದರೆ ಸಾಮಾನ್ಯ ಮನುಷ್ಯಳಾಗಿದ್ದರೆ ನನ್ನ ಎದುರಿಗೆ ಬರುವ ಸಾಹಸ ಮಾಡುತ್ತಿದ್ದಿಲ್ಲ. ಒಂದು ವೇಳೆ ನೀನು ಚಾಮುಂಡಿಯೇ ನಿಜವಾಗಿದ್ದ ಪಕ್ಷದಲ್ಲಿ ನನ್ನ ಸೈನ್ಯದ ಅವಸ್ಥೆಯು ಹೀಗಾಗಲು ಕಾರಣವೇನು? ದಯವಿಟ್ಟು ನನಗೆ ತಿಳಿಸುವ ಕೃಪೆ ಮಾಡಬೇಕೆಂದು" ಟೀಪುವು ಪ್ರಾರ್ಥಿಸುತ್ತಾನೆ.

ಶ್ರೀದೇವಿ: "ಕುಮಾರ ನೀನಂದಂತೆ ನಾನು ಸಾಮಾನ್ಯ ಸ್ತ್ರೀಯಾಗಿರದೆ ಚಾಮುಂಡಿಯೇ. ಇಲ್ಲಿ ನಾನು ಅವತಾರ ಮಾಡಿದ್ದೇನೆ. ಇಲ್ಲಿ ನಾನು ವ್ಯಾಘ್ರೇಶ್ವರಿ ಎಂದು ಹೆಸರಾಗಿದ್ದೇನೆ. ಮೈಸೂರಿನಲ್ಲಿ ನೀನು ಹೇಗೆ ನನ್ನ ಪರಮ ಭಕ್ತನೋ ಅದರಂತೆಯೇ ಈ ಊರಿನಲ್ಲಿರುವ ಪಾಳೆಯಗಾರನು ನನ್ನ ಪರಮ ಭಕ್ತನು. ಮತ್ತು ಕೇವಲ ಧರ್ಮನಿಷ್ಠನು. ಈತನಿಗೆ ನೀನು ತೊಂದರೆ ಕೊಟ್ಟಿದ್ದಕ್ಕೆ ನನ್ನ ಪ್ರಭಾವ ತೋರಿಸಬೇಕಾಗಿ ಬಂದಿತು. ನೀನು ಇಂದೇ ಈ ಊರ ಗೊಡವಿಗೆ ಬರುವುದಿಲ್ಲವೆಂದು ನನಗೆ ವಚನ ಕೊಟ್ಟರೆ ಪುನಃ ನಿನ್ನ ಸೈನ್ಯಕ್ಕೆ ಮಾರ್ಗತೋರುವೆ" ಹೀಗೆಂದು ಹೇಳಿ ಅಂತರ್ಧಾನವಾದಳು.

### ಹುಲಿಗೆಮ್ಮನ ಕಥೆ

ಹುಲಿಗೆಮ್ಮನಿಗೆ ಹಿನ್ನೆಲೆಯಾಗಿ ಹೇಳುವ ಕತೆ ಮತ್ತು ಸವದತ್ತಿಯ ಎಲ್ಲಮ್ಮನಿಗೆ ಹಿನ್ನೆಲೆಯಾಗಿ ಹೇಳುವ ಕತೆಯು ಬಹುಮಟ್ಟಿಗೆ ಒಂದೇ ಆಗಿದೆ. ಎಲ್ಲಮ್ಮನೇ ಹುಲಿಗೆಮ್ಮನ ರೂಪದಲ್ಲಿ 'ಹುಲಿಗಿ'ಯಲ್ಲಿ ಪ್ರತ್ಯಕ್ಷಳಾಗಿದ್ದಾಳೆ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಇದು ಸಹಜವೂ ಹೌದು.

ಲಭ್ಯವಿರುವ ಪುರಾಣ ಕತೆಯ ಸ್ವರೂಪ ಇಂತಿದೆ: ನರ್ಮದಾ ನದಿಯ ಬಯಲಿನಲ್ಲಿ ಜಮದಗ್ನಿಯು ವಾಸಿಸುತ್ತಿದ್ದ. ಅವನ ಹೆಂಡತಿಯ ಹೆಸರು ರೇಣುಕೆ. ಈಕೆ ಒಬ್ಬಳು ರಾಜಕುಮಾರಿಯಾಗಿದ್ದು, ಜಮದಗ್ನಿಯ ತಪಃಶಕ್ತಿಗೆ ಮರುಳಾಗಿ ಆತನನ್ನು ಮದುವೆಯಾಗುತ್ತಾಳೆ. ಜಮದಗ್ನಿ - ರೇಣುಕೆಯರಿಗೆ ೫ ಜನ ಮಕ್ಕಳು. ಕೊನೆಯವನೇ ಪರಶುರಾಮ.

ದಿನಂಪ್ರತಿ ನರ್ಮದೆಯಲ್ಲಿ ಸ್ನಾನಮಾಡಿ ಮಡಿಯುಟ್ಟು, ಮರಳಿನ ಕೊಡದಲ್ಲಿ ಜಮದಗ್ನಿಯ ಯಜ್ಞಕ್ಕೆ ನೀರು ತರುವುದು ರೇಣುಕೆಯ ಕೆಲಸ. ಒಂದು ದಿನ ರೇಣುಕೆಯು ಸ್ನಾನ ಮಾಡುತ್ತಿರುವಾಗ ನರ್ಮದೆಯಲ್ಲಿ ಕೆಲವು ಜನ ಗಂಧರ್ವರು ಸ್ನಾನ ಮಾಡುವುದನ್ನು ನೋಡುತ್ತಾಳೆ. ಅವಳ ಮನಸ್ಸು ಸ್ವಲ್ಪ ಚಂಚಲವಾಗುತ್ತದೆ. ಪರಿಣಾಮವಾಗಿ ಆ ದಿನ ಆಕೆಗೆ ಉಸುಕಿನಲ್ಲಿ ಕೊಡ ಮಾಡಲಾಗುವುದಿಲ್ಲ. ಅಸಹಾಯಕಳಾದ ರೇಣುಕೆ ಆಶ್ರಮಕ್ಕೆ ಬರುತ್ತಾಳೆ. ವಿಷಯ ತಿಳಿದ ಜಮದಗ್ನಿಯು ಆಕೆಯ ತಲೆ ಕತ್ತರಿಸಲು ಮಕ್ಕಳಿಗೆ ಆಜ್ಞಾಪಿಸುತ್ತಾನೆ. ತಾಯಿಯ ತಲೆ ಕಡಿಯಲು ನಿರಾಕರಿಸಿದ ಮೊದಲ ನಾಲ್ಕು ಮಕ್ಕಳು ಸುಟ್ಟು ಭಸ್ಮರಾಗುತ್ತಾರೆ. ಕೊನೆಯವನಾದ ಪರಶುರಾಮನು ತಾಯಿಯ ತಲೆ ಕತ್ತರಿಸುತ್ತಾನೆ ಮತ್ತು ಜಮದಗ್ನಿ ನೀಡಿದ ವರದಿಂದ ಸತ್ತ ತಾಯಿಯನ್ನು ಮರಳಿ ಬದುಕಿಸಿ ಹಿಮಾಲಯಕ್ಕೆ ಹೋಗುತ್ತಾನೆ.

**ಹುಲಿಗೆಮ್ಮನ ಬಗೆಗಿನ ಪವಾಡದ ಕಥೆಗಳು**

೧. ಹುಲಿಗೆಮ್ಮಳು ಒಬ್ಬ ಮಾಮೂಲು ಸ್ತ್ರೀ ವೇಷಧರಿಸಿ ಅಡ್ಲಿಕೆ ಹಿಡಿದುಕೊಂಡು ಬರುತ್ತಿರುವಾಗ ಒಬ್ಬ ರೈತ ಬಹಳ ಅಂದರೆ ಜೋಳದ ರಾಶಿಯಷ್ಟು ಬೆಳೆದಿದ್ದನಂತೆ. ಆ ರಾಶಿಯನ್ನು ನೋಡಿ ಜೋಗತಿಯು ಆ ರೈತನನ್ನು ಕಂಡು ಉಧೋ ಎಂದು ನಿಂತಾಗ ಆ ರೈತ ಒಂದು ಹಿಡಿ ಕೂಡ ಜೋಳ ಹಾಕಲಿಲ್ಲ. ಅದನ್ನು ಕಂಡು ಸಿಟ್ಟಿಗೆದ್ದು ತನ್ನ ಭಂಡಾರವನ್ನು ಉಗ್ಗಿದಾಗ ಜೋಳದ ರಾಶಿಯು ಗುಡ್ಡವಾಯಿತು. ಆ ರೈತ ಕಲ್ಲಾಗಿ ಹೋದನಂತೆ. ಮತ್ತು ಮಣ್ಣೆಲ್ಲಾ ಸುಂಕಾಗಲಿ ಎಂದು ಶಾಪ ಹಾಕಿದಳಂತೆ. ಈವತ್ತಿಗೂ ಹೊಸಪೇಟೆಯಲ್ಲಿ 'ಜೋಳದ ರಾಶಿಯ ಗುಡ್ಡ' ಎಂದು ಆ ಹೆಸರಿನ ಮೂಲಕ ಕರೆಯುತ್ತಾರೆ.

೨. ಅಂಬಿಗನು ದಿನಾಲು ಆ ಕಡೆಯಿಂದ ಈ ಕಡೆಗೆ ತನ್ನ ದೋಣಿಯ ಮೂಲಕ ಜನರನ್ನು ಹೊಳೆದಾಟಿಸುತ್ತಿದ್ದನಂತೆ. ಅಂತ ಸಮಯದಲ್ಲಿ ಹುಲಿಗೆಮ್ಮಳು ಒಂದು ಒಳ್ಳೆ ರೂಪದಲ್ಲಿ ಹೋಗುತ್ತಿದ್ದುದನ್ನು ಕಂಡು ಅಂಬಿಗನು ಮನಸ್ಸಿನಲ್ಲಿ ಆಕೆಯ ಬಗ್ಗೆ ಹೊಲಸು ಭಾವಿಸಿ ಕಂಡಾಗ ಇದನ್ನು ಮನಗಂಡ ಹುಲಿಗೆಮ್ಮ ದೇವಿ ನದಿಯಲ್ಲಿ ನಡುವೆ ತಾನು ಮಾಯವಾಗಿ ಅಂಬಿಗನನ್ನು ಅಂಬಿಗನ ದೋಣಿಯನ್ನು ಮುಳುಗುವಂತೆ ಮಾಡಿದಳು. ಇದನ್ನರಿತ ಅಂಬಿಗನ ಹೆಂಡತಿಯು ತಾಯಿ ನಮ್ಮವ್ವ ನನ್ನ ಗಂಡನನ್ನು ಉಳಿಸವ್ವ ಎಂದು ಬೇಡಿದಾಗ ಹುಲಿಗೆಮ್ಮ ಇದನ್ನೆಲ್ಲಾ ಹೇಳಿದಳು. ಆಗ ಅಂಬಿಗನ ಹೆಂಡತಿ ಅಳುತ್ತಿರುವುದನ್ನು ಕಂಡು ಸರಿ ನಾನು ನಿನ್ನ ಗಂಡನನ್ನು ಉಳಿಸುತ್ತೇನೆ. ಮುಂದೆ ನಿನಗೆ ಮಕ್ಕಳಾದಾಗ ನಿನಗೆ ಹೆಣ್ಣಾಗಲಿ ಗಂಡಾಗಲಿ ಅವಿಷ್ಟು ಮಕ್ಕಳನ್ನು ನನಗೆ ಬಿಡಬೇಕು. ಅಂದರೆ ಅವರಿಗೆ ಮುತ್ತು ಕಟ್ಟಬೇಕು ಎಂದು ಹೇಳಿ ಅವರು ನನ್ನ ಸೇವೆ ಮಾಡಬೇಕು ಎಂದೇಳಿ ಮಾಯವಾದಳಂತೆ.

೩. ಒಬ್ಬ ಗೌಡ ತನ್ನ ಹೊಲದಲ್ಲಿ ಬದನೆಕಾಯಿ, ಹಸಿಮೆಣಸಿನಕಾಯಿ, ಚೌಳೇಕಾಯಿ, ಗೆಜ್ಜರಿ, ಉಳ್ಳಾಗಡ್ಡಿ ಎಲ್ಲವನ್ನೂ ತನ್ನ ತೋಟದಲ್ಲಿ ಬೆಳೆಯುತ್ತಿದ್ದನಂತೆ. ಹುಲಿಗೆಮ್ಮಳು ಪರಶುರಾಮನ ಬಸುರು ಇದ್ದಾಗ ಆಕೆಗೆ ಬದನೆಕಾಯಿ, ಹಸಿಮೆಣಸಿನಕಾಯಿ ತಿನ್ನಲು ಬಯಕೆಯಾಗಿ ಒಂದು ಜೋಗಮ್ಮಳ ಅವತಾರದಲ್ಲಿ ಕೇಳಲು ಹೋದಾಗ ಆ ಗೌಡ ಈಕೆಗೆ ಒಂದು ಚೂರು ಇವುಗಳನ್ನು ಕೊಡದೆಯೇ ಆಕೆಯನ್ನು ಮುಂದೆ ನಡಿ

ಎಂದು ಹೇಳಿದಾಗ ಆ ಗೌಡ ಮಾತಂಗಿಯೆನ್ನುವ ಮಾದಿಗರ ಹೆಣ್ಣುಮಗಳನ್ನು ಇಟ್ಟುಕೊಂಡಿರುತ್ತಾನೆ. ಇದನ್ನರಿತ ಆ ಜೋಗತಿ ರಾತ್ರಿ ಹೊಲದಲ್ಲಿ ಹೋಗಿ ಬೆಳೆಯನ್ನೆಲ್ಲಾ ನಾಶಮಾಡಿ ಅವುಗಳನ್ನು ಮಾತಂಗಿ ಮನೆಯಿಂದ ಚೆಲ್ಲಿಕೊಂಡು ಬಂದಳಂತೆ. ಬೆಳಿಗ್ಗೆ ಆ ಗೌಡ ತೋಟಕ್ಕೆ ಹೋಗಿ ನೋಡಿದಾಗ ಯಾರು ಈ ಕೆಲಸ ಮಾಡಿರಬಹುದು ಎಂದು ಬರುತ್ತಿರುವಾಗ ಮಾತಂಗಿ ಮನೆಯ ಹತ್ತಿರದವರೆಗೂ ಚೆಲ್ಲಿದ್ದನ್ನು ನೋಡಿ ಈಕೆಯೇ ಈ ಕೆಲಸ ಮಾಡಿರೋದು ಎಂದುಕೊಂಡು ಆಕೆಯ ಮೂಗನ್ನು ಕೊಯ್ಯುತ್ತಾನೆ. ನಂತರ ಮಾತಂಗಿಯು ಹುಲಿಗೆಮ್ಮಳ ಹತ್ತಿರ ಬಂದು 'ನೋಡು ನೀನು ಮಾಡಿದ ಕೆಲಸಕ್ಕೆ ನನಗೆ ಈ ಸ್ಥಿತಿಯಾಗಿದೆ. ನೋಡೆಂದಾಗ ಹುಲಿಗೆಮ್ಮ ಇನ್ನು ಮೇಲೆ ನನಗೆ ಬರುವ ಭಕ್ತರೆಲ್ಲಾ ಮೊದಲು ನಿನಗೆ ಬುತ್ತಿ ನೀಡಿ ಆ ಮೇಲೆ ನನಗೆ ನೀಡಲಿ ಎಂದು ವರವನ್ನು ನೀಡಿದಳಂತೆ. ಇಂದಿಗೂ ಹುಲಿಗೆಮ್ಮನಿಗೆ ಬರುವ ಭಕ್ತರೆಲ್ಲಾ ಮೊದಲು ತಂದಿದ್ದ ಬುತ್ತಿಯನ್ನು ಮಾತಂಗಿಗೆ ಅರ್ಪಿಸುವುದನ್ನು ಕಾಣುತ್ತೇವೆ. ಆದ್ದರಿಂದ ಇಂದಿಗೂ ಹುಲಿಗೆಮ್ಮನ ಪವಾಡವನ್ನು ಕಂಡು ಹಿರಿಯರು ಒಂದು ಗಾದೆ ಮಾತಾಡುತ್ತಾರೆ.

ಹುಲಿಗೆಮ್ಮ ಒಲಿದರೆ ಒಲಿಮಾಯಿ

ಇಲ್ಲವಾದರೆ ಯಿಧಿಮಾಯಿ

ಎಂದು ಈಕೆಯ ಬಗೆಗಿರುವ ಗಾದೆಯು ಪ್ರಚಲಿತದಲ್ಲಿರುವುದನ್ನು ಕಾಣಬಹುದು.

೪. ಟಿಪ್ಪು ಸುಲ್ತಾನನು ರಾಜ್ಯವನ್ನಾಳುತ್ತಾ ಬರುತ್ತಿದ್ದಾಗ ಹುಲಿಗಿ ಕ್ಷೇತ್ರದ ಮೇಲೆ ಈತನ ಕಣ್ಣು ಹರಿಯಿತು. ಹುಲಿಗಿ ಕ್ಷೇತ್ರದ ಕೋಟೆಯು ಭದ್ರವಾದ ಕೋಟೆಯಾಗಿತ್ತು. ತನ್ನ ಸೈನಿಕರಿಗೆ ಇದನ್ನು ಮುತ್ತಿಗೆ ಹಾಕಲು ಕಳುಹಿಸಿದಾಗ ಹುಲಿಗೆಮ್ಮ ದೇವಿ ತನ್ನ ಭಂಡಾರ ಉಗ್ಗಿದಳಂತೆ. ಅದರಿಂದ ಸೈನಿಕರ ಕಣ್ಣುಗಳು ಹೋದವಂತೆ. ಇದನ್ನರಿತ ಸುಲ್ತಾನ ತಾನು ಬಂದನಂತೆ. ಮೊದಲು ಸುಲ್ತಾನ ಚಾಮುಂಡಿಯ ಪರಮಭಕ್ತನಾಗಿದ್ದ. ಇಲ್ಲಿಗೆ ಬಂದು ಹುಲಿಗೆಮ್ಮನನ್ನು ಕಂಡಾಗ ಆತನಿಗೆ ಮನಸ್ಸು ಏನೋ ವಿಚಲಿತವಾಯಿತಂತೆ. ಆಗ ದೇವಿಯು ಚಾಮುಂಡಿಯ ಅವತಾರವಾಗಿ ಕಂಡು ಅಲ್ಲಿರುವವಳು ನಾನೇ ಇಲ್ಲಿರುವವಳು ನಾನೇ ಎಂದು ಹೇಳಿದಾಗ ತಪ್ಪಾಯಿತವ್ವ ತಾಯಿ ಎಂದಾಗ ಮತ್ತೆ ತನ್ನ ಭಂಡಾರವನ್ನು ಸೈನಿಕರ ಮೇಲೆ ಎರಚಿದಾಗ ಎಲ್ಲರಿಗೂ ಕಣ್ಣುಗಳು ಬಂದವಂತೆ. ಟಿಪ್ಪು ಸುಲ್ತಾನ ಹೊರಟು ಹೋಗುವಾಗ ನೀನು ಇಲ್ಲಿಗೆ ಬಂದಿರುವೆಯಾದ್ದರಿಂದ ನೀನು ನನಗೆ ಮುತ್ತಿನ ದಂಡೆ ಮಾಡಿಸಿಕೊಡು ಎಂದು ಕೇಳಿದಳಂತೆ. ಆಗ ಟಿಪ್ಪು ಸುಲ್ತಾನ ಮುತ್ತಿನ ದಂಡೆಯನ್ನು ಮಾಡಿಸಿಕೊಟ್ಟನಂತೆ. ಇದು ಕೆಲವರ ಅಭಿಪ್ರಾಯವಾದರೆ ತುಂಗಭದ್ರ ನದಿಯ ಮೇಲೆ ಸೇತುವೆ ಪದೇ ಪದೇ ಬಿದ್ದು ಹೋಗಲಾರದಂತೆ ನಿಲ್ಲಲಿ ತಾಯಿ ನಿನಗೆ ಮುತ್ತಿನ ದಂಡೆ ಮಾಡಿಸಿಕೊಡುತ್ತೇನೆ ಎಂದು ಹುಲಿಗೆಮ್ಮನನ್ನು ಬೇಡಿಕೊಂಡಾಗ ಆತನಿಗೆ ದೇವಿ ಈ ಹಳಿ ಮೇಲೆ ರೈಲು ಹೋಗುವಾಗ ಉಧೋ ಉಧೋ ಎಂದುಕೊಂಡೇ ಹೋಗಬೇಕು ಎಂದು ಹೇಳಿದಳಂತೆ. ಇಂದಿಗೂ ಸೇತುವೆ ಮೇಲೆ ರೈಲು ಹೋಗುವಾಗ ಕೂಗನ್ನು ಹಾಕಿಕೊಂಡು ಹೋಗುತ್ತದೆ ಎಂದು ಇಲ್ಲಿನ ಜನರ ಅಭಿಪ್ರಾಯ.

೫. ಹೊಸಪೇಟೆಯಲ್ಲಿರುವ ಬ್ರಾಹ್ಮಣರ ರಾಧಮ್ಮನ ಮೊಮ್ಮಗ ಮೂರು ವರ್ಷದವನಿದ್ದನಂತೆ. ಇವರ ಮನೆದೇವಿ ಹುಲಿಗೆಮ್ಮ ಗಂಡು ದೇವರು ವೆಂಕಟರಮಣ. ಮೊಮ್ಮಗನಿಗೆ ಇನ್ನು ಜವಳ ತೆಗಿಸಿರಲಿಲ್ಲ. ಹುಡುಗನಿಗೆ ಹುಲಿಗೆಮ್ಮನ ಹತ್ತಿರ ಹೋಗಿ ಜವಳ ತೆಗೆಸಿಕೊಂಡು ಬರುತ್ತೇವೆ ಎಂದುಕೊಂಡಿದ್ದರಂತೆ. ಆದರೆ ದಸರಾ ಸಮಯದಲ್ಲಿ ಬ್ರಹ್ಮೋತ್ಸವಕ್ಕೆಂದು ತಿರುಪತಿಗೆ ಹೋಗಿದ್ದರಂತೆ. ವೆಂಕಟರಮಣನಿಗೆ ಹೋದ ಮೇಲೆ ತಲೆಮಂಡಿ ಕೊಟ್ಟುಬರಲೇಬೇಕು ಎಂದುಕೊಂಡು ಆ ಹುಡುಗನಿಗೆ ಅಲ್ಲೇ ಕೂದಲು ತೆಗೆಸಿದರಂತೆ. ಮನೆಗೆ ಬಂದು ಖಂಡೆಯ ಪೂಜೆಯ ದಿವಸ ಮನೆಯಲ್ಲಿ ಮೊಸರು ಬುತ್ತಿ ಮಾಡಿಕೊಂಡು ಹುಲಿಗೆಮ್ಮಗೆ ಆಟೋದಲ್ಲಿ ಹೊರಡುತ್ತಿರುವಾಗ ಎದುರಿಗೆ ಒಬ್ಬ ಗಾಡಿ ತೆಗೆದುಕೊಂಡು ಬಂದು ಡಿಕ್ಕಿ ಹೊಡೆದಾಗ ಆಟೋ ಉರುಳಿ ಆ ಹುಡುಗನ ತಲೆಗೆ ಪೆಟ್ಟಾಯಿತಂತೆ. ಬೇರೆ ಯಾರಿಗೂ ಯಾವುದೇ ಗಾಯಗಳಾಗಿರಲಿಲ್ಲ. ಕೇವಲ ಆ ಹುಡುಗನ ತಲೆಗಷ್ಟೇ ಪೆಟ್ಟಾಯಿತಂತೆ. ಅಂದರೆ ಆ ದೇವಿಗೆ ಹೋಗಿ ನಮಸ್ಕರಿಸಿ ಅಲ್ಲೇ ಜವಳಿ ತೆಗೆಸಲಿಲ್ಲವಾದ್ದರಿಂದ ಈ ರೀತಿ ಆಯಿತು ಎಂದುಕೊಂಡು ಹುಲಿಗೆಮ್ಮನ ಗುಡಿಗೆ ಹಾಗೆಯೇ ಹೋಗಿ ಆಕೆಯ ಭಂಡಾರ ಆ ಹುಡುಗನ ತಲೆಗೆ ಹಚ್ಚಿ ತಾಯಿ ನಮವ್ವ ನಮ್ಮದು ತಪ್ಪಾಯಿತು, ಈ ಹುಡುಗನಿಗೆ ಹುಷಾರು ಮಾಡು, ಕೂದಲು ಬಂದ ಮೇಲೆ ಮತ್ತೆ ನಿನ್ನಲ್ಲಿಗೆ ಬಂದು ಜವಳ ತೆಗೆಸುತ್ತೇನೆ ಎಂದು ಬೇಡಿಕೊಂಡ ಮೇಲೆ ಆ ಹುಡುಗನು ಒಂದು ತಿಂಗಳಲ್ಲೇ ಸರಿ ಹೋದನಂತೆ.

೬. ಬಳ್ಳಾರಿಯ ಹಳ್ಳಿ ಭೀಮಪ್ಪನ ಮಗಳಾದ ಹಳ್ಳಿ ದ್ಯಾಮವ್ವಳನ್ನು ಅಳಿಯನಾದ ಹನುಮಪ್ಪನಿಗೆ ಕೊಟ್ಟು ಮದುವೆ ಮಾಡುತ್ತಾರೆ. ಹಳ್ಳಿಯ ಭೀಮಪ್ಪ ಹುಲಿಗೆಮ್ಮನ ಭಕ್ತ. ಪ್ರತಿ ಹುಣ್ಣಿಮೆಗೂ ತಪ್ಪದೇ ಹೋಗುತ್ತಿದ್ದನಂತೆ. ಆದರೆ ಮಗಳ ಮದುವೆಯ ಗಲಾಟೆಯಲ್ಲಿ ದೇವಿಗೆ ಹೋಗುವುದನ್ನು ಮರೆತುಬಿಟ್ಟನಂತೆ. ಮಗಳಿಗೆ ಮದುವೆಯಾಗಿ ಸ್ವಲ್ಪ ದಿನದಲ್ಲೇ ನೆಲಕಚ್ಚಿದಳಂತೆ. ಯಾಕೆ ನನ್ನ ಮಗಳಿಗೆ ಹೀಗಾಯಿತೆಂದುಕೊಳ್ಳುತ್ತಿರುವಾಗ ಕನಸಿನಲ್ಲಿ ಹುಲಿಗೆಮ್ಮ ಬಂದು ನೀನು ನನಗೆ ಬರುವುದನ್ನು ನಿಲ್ಲಿಸಿದ್ದೀಯ ಅದಕ್ಕೆ ನಿನ್ನ ಮಗಳಿಗೆ ಹೀಗಾಗಿರುವುದು. ನೀನು ಮತ್ತೆ ನನಗೆ ಬಂದು ನಡೆದುಕೊಂಡರೆ ನಿನ್ನ ಮಗಳು ಸರಿಹೋಗುತ್ತಾಳೆ ಎಂದು ಹೇಳಿದಳಂತೆ. ಆಗ ಹಳ್ಳಿ ಭೀಮಪ್ಪ ದೇವಿಗೆ ಹೋಗಿ ತನ್ನ ಮಗಳನ್ನು ಕರೆದೊಯ್ದು ಇಬ್ಬರೂ ದೇವಿಗೆ ನಮಸ್ಕರಿಸಿದರಂತೆ. ನಂತರ ದ್ಯಾಮವ್ವಳು ಸರಿಹೋದಳಂತೆ. ಹೀಗೆ ಹುಲಿಗೆಮ್ಮ ಪವಾಡಪುರುಷಿಣಿಯಾಗಿ ತೋರಿದ್ದಾಳೆ.

೭. ಹುಲಿಗೆಮ್ಮನಿಗೆ ಪೂಜಾರಿಗಳು ಬ್ರಾಹ್ಮಣರು ಅದರಲ್ಲೂ ಅವರಿಗೆ ದೇಸಾಯಿ ಮನೆತನದವರು ಎಂದು ಕರೆಯುತ್ತಾರೆ. ದೇಸಾಯಿ ಮನೆಯವರಲ್ಲಿ ರಂಗರಾಯರು ಎನ್ನುವವರು ಹುಲಿಗೆಮ್ಮನ ಭಕ್ತರಾಗಿದ್ದರು. ಇವರಿಗೆ ದೇವಿಯ ಮೇಲಿನ ಅಪಾರ ಭಕ್ತಿಯಿಂದ ಆಕೆಯನ್ನು ಪೂಜಿಸುತ್ತಿದ್ದರು. ಆದರೆ ದೇಸಾಯಿ ರಂಗರಾಯರಿಗೆ ಮಕ್ಕಳಿರಲಿಲ್ಲ. ಒಂದು ದಿನ ದೇವಿಯ ಹತ್ತಿರ ಬಂದು ದೇವಿ ನಮಗೆ ಮಕ್ಕಳಿಲ್ಲವ್ವ ಮುಂದೆ ನಿನ್ನ ಪೂಜೆಯನ್ನು ನನ್ನ ನಂತರ ನಿನಗೆ ಮುಂದುವರೆಸಿಕೊಂಡು ಹೋಗುವವರ್ಯಾರು ಎಂದು ಚಿಂತಿಸತೊಡಗಿದಾಗ ಆಲೋಚಿಸಿ ಸಂಗಮೇಶ ಸ್ಥಳೀಯ ಪಾಟೀಲರ ಮಗನಾದ ರಾಘವೇಂದ್ರನನ್ನು ದತ್ತು ತೆಗೆದುಕೊಂಡರಂತೆ. ಆದರೆ ಈ ಆಸ್ತಿಯೆಲ್ಲಾ

ಈ ಹುಡುಗನಿಗೆ ಸೇರುತ್ತದೆಂದು ರಂಗರಾಯರ ಅಣ್ಣತಮ್ಮಂದಿರೆಲ್ಲರೂ ಜಗಳವಾಡಿದರಂತೆ. ನಮ್ಮಲ್ಲೆ ಯಾರಾದರೊಬ್ಬರನ್ನು ದತ್ತು ತೆಗೆದುಕೊಳ್ಳಬಹುದಾಗಿತ್ತು, ಆ ಹುಡುಗನನ್ನು ಯಾಕೆ ತೆಗೆದುಕೊಂಡೆ ಎಂದು ಹೇಳಿದಾಗ, ಆ ಹುಡುಗನನ್ನೇ ದತ್ತಕ ತೆಗೆದುಕೊಳ್ಳಬೇಕೆಂದು ಕಮೀಷನರ್ ಆಫೀಸಿಗೆ ಹೋಗುತ್ತಿರುವಾಗ ಯಾವ ಕೆಲಸವೂ ಕೈಗೂಡಲಿಲ್ಲವಂತೆ. ನಂತರ ದೇವಿಯನ್ನು ನೆನೆದನಂತೆ. ದೇವಿ ಯಾಕೆ ಹೀಗೆ ಮಾಡಿದೆವ್ವ ದಿನಾ ಪೂಜೆ ಮಾಡೋ ನಿನ್ನ ಭಕ್ತನಿಗೆ ದಾರಿ ತೋರಿಸವ್ವ ಎಂದು ಬೇಡಿಕೊಂಡಾಗ ದೇವಿ ಕಮೀಷನ್ನರ ಮನಸ್ಸಿನಲ್ಲಿ ಒಳಹೊಕ್ಕು ರಂಗರಾಯರು ಮಾಡಿದ್ದೇ ಸರಿ ಎಂದು ಹೇಳುವ ಹಾಗೆ ಮಾಡಿದಳಂತೆ. ರಂಗರಾಯರು ಗುಡಿಗೆ ಬಂದು ದೇವಿಯನ್ನು ನಮಸ್ಕರಿಸಿ ಹಾಗೆ ಆಕೆಗೆ ಅಳುತ್ತಾ ಕೈ ಮುಗಿದಾಗ ದೇವಿ ಪ್ರತ್ಯಕ್ಷಳಾದಳಂತೆ. ನೀನು ಚಿಂತೆ ಪಡಬೇಡ, ನಿನ್ನ ಭಕ್ತಿಗೆ ನಾ ಮೆಚ್ಚಿ ಪ್ರತ್ಯಕ್ಷಳಾಗಿದ್ದೇನೆ. ಇನ್ನು ಮುಂದೆ ನನ್ನ ಪೂಜೆಯು ಹೀಗೆ ಮುಂದುವರೆಸು ಎಂದು ಮಾಯವಾದಳಂತೆ. ರಂಗರಾಯರು ದೇವಿಯನ್ನು ನೋಡುತ್ತಾ ಹಾಗೆಯೇ ಮೂರ್ಛೆ ಹೋದರಂತೆ. ಅವರು ಹಾಕಿಕೊಂಡು ಹೋಗಿದ್ದ ಕುದುರೆ ಬಂದು ಎಬ್ಬಿಸಿದ ಮೇಲೆ ಎದ್ದರಂತೆ. ನಂತರ ಮನೆಗೆ ಹೋದ ಮೇಲೆ ಮನೆಗಳಲ್ಲಿರುವವರಿಗೆ ಇದನ್ನು ಹೇಳಿದರಂತೆ. ಆದರೆ ಇದನ್ನು ಯಾರು ನಂಬಲಿಲ್ಲ. ನೀವು ನಂಬಿದರೇನು ಬಿಟ್ಟರೇನು ನಾನು ಆ ದೇವಿಯನ್ನು ಪೂಜಿಸುತ್ತೇನೆ ಎಂದು ಹೊರಟರಂತೆ.

೮. ಹುಲಿಗ ಕ್ಷೇತ್ರದಲ್ಲೇ ನೆಲೆಸಿರುವ ಲಕ್ಷ್ಮಮ್ಮನಿಗೆ ಮಗು ಹುಟ್ಟಿ ೭ ವರ್ಷವಾದರೂ ನಡೀತಾ ಇದ್ದಿಲ್ಲವಂತೆ. ಮಾತಾಡುತ್ತಿದ್ದಿಲ್ಲವಂತೆ. ಕುಂತಲ್ಲೇ ಎಲ್ಲ ಕೆಲಸ ಅವನು ಮಾಡಬೇಕಿತ್ತಂತೆ. ಒಂದು ದಿನ ಲಕ್ಷ್ಮಮ್ಮ ಹುಲಿಗೆಮ್ಮ ದೇವಿಗೆ ಬಂದು ಮಡಿಉಟ್ಟು ಪ್ರದಕ್ಷಿಣೆ ಮಾಡಿ ದೇವಿ ನನ್ನ ಮಗನಿಗೆ ಮಾತು ಬಂದು ನನ್ನ ಮಗನು ನಡೆದಾಡೋ ಹಾಗೆ ಮಾಡಿದರೆ ಬರೀ ನಡೆದಾಡೋದಲ್ಲಿ ಕುದುರೆ ಓಡಿಕೊಂಡು ಬರೋತರ ನನ್ನ ಮಗ ನಿನಗೆ ಓಡಿಕೊಂಡು ಬರೋಹಾಗೆ ಮಾಡಿದರೆ ನಿನಗೆ ಹಿತ್ತಾಳೆ ಕುದುರೆ ಮಾಡಿಸಿಕೊಡುತ್ತೇನೆ ಎಂದು ಬೇಡಿಕೊಂಡಳಂತೆ. ದಿನ ದಿನ ಮಗನಿಗೆ ಮಾತು ಬಂದು ನಡೆದಾಡುತ್ತ ಓಡುತ್ತ ಬಂದನಂತೆ. ಆಗ ಲಕ್ಷ್ಮಮ್ಮ ಹಿತ್ತಾಳೆ ಕುದುರೆಯನ್ನು ಮಾಡಿಸಿಕೊಟ್ಟಳಂತೆ. ಈವತ್ತಿಗೂ ಹಿತ್ತಾಳೆ ಕುದುರೆಯನ್ನು ನಾವು ಹುಲಿಗೆಮ್ಮನ ಗುಡಿಯಲ್ಲಿ ಇರುವುದನ್ನು ಕಾಣಬಹುದು.

೯. ಹುಲಿಗೆಮ್ಮ ದೇವಿಯ ಭಕ್ತಳಾದಂತ ಹೊಸಪೇಟೆಯ ನಾಯಕರ ಜನಾಂಗದ ಲಕ್ಷ್ಮಮ್ಮಳ ಮನೆಯ ದೇವರು ಹುಲಿಗೆಮ್ಮ ಆದರೆ ಒಂದು ದಿನ ಲಕ್ಷ್ಮಮ್ಮಳು ಮೈಲಾರಲಿಂಗನ ಜಾತ್ರೆಗೆಂದು ಹೋಗಿ ಮೈಲಾರಲಿಂಗನ ಪೋಟೋವನ್ನು ತೆಗೆದುಕೊಂಡು ಬಂದು ಜಗಲಿಯ ಮೇಲಿಟ್ಟಳಂತೆ. ಆದರೆ ಮಾರನೆಯ ದಿನದಿಂದಲೇ ಮನೆಯಲ್ಲಿ ಎಲ್ಲರ ಮುಖದ ಮೇಲೆ ಹುಳಗಳು ಓಡಾಡಲಿಕ್ಕೆ ಶುರುವಾದವು. ನಂತರ ಎಚ್ಚೆತ್ತುಕೊಂಡು ತಾಯಿ ತಪ್ಪಾಯಿತು ಎಂದು ಆ ಫೋಟೋವನ್ನು ಅಲ್ಲೆ ಹತ್ತಿರವಿರುವ ಹನುಮಪ್ಪನ ಗುಡಿಯಲ್ಲಿ ಇಟ್ಟುದರಿಂದ ಸ್ವಲ್ಪ ಕ್ಷಣದಲ್ಲೇನೇ ಹುಳಗಳು ಮಾಯವಾದವಂತೆ. ಮತ್ತೆ ಮನೆಯಲ್ಲಿ ಎಲ್ಲರೂ ದೇವಿಗೆ ಹೋಗಿ ಕಾಯಿ ಕರ್ಪೂರ ಮಾಡಿಸಿಕೊಂಡು ಬಂದರು ಎಂದು ಲಕ್ಷ್ಮಮ್ಮ ಅಕ್ಕ ಹೇಳುವರು. ಅಂದರೆ ಹುಲಿಗೆಮ್ಮನ ಮಹಿಮೆ ಎಷ್ಟೆಂದರೆ ಆಕೆ ಇದ್ದಲ್ಲಿ ಇನ್ನೊಂದು ದೇವರು ಅದರಲ್ಲಿ ಆಗಲಾಗದ ದೇವರು ಇರಬಾರದೆನ್ನುವುದು ಇಲ್ಲಿ ನಾವು ಕಾಣುತ್ತೇವೆ.

೧೦. ದೇವಲಾಪುರದ ನಾಗಮ್ಮ ಎನ್ನುವಾಕೆ ದಿನಾಲು ಕಳೆಯ ಕೆಲಸಕ್ಕೆ ಹೋಗಿಬಂದು ಮನೆಯಲ್ಲಿ ಸ್ನಾನ ಮುಗಿಸಿ ಹುಲಿಗೆಮ್ಮನ ಪೂಜೆ ಮಾಡುತ್ತಿದ್ದಳಂತೆ. ಆದರೆ ಮಂಗಳವಾರ ಶುಕ್ರವಾರ ತಲೆ ಸ್ನಾನ ಮಾಡಿ ಅಡ್ಡಿಕಿಗೆ ಪೂಜೆ ಮಾಡಿ ಅವತ್ತು ಸಿಹಿ ಮಾಡಿ ಊಟಮಾಡುವುದು ಈಕೆಯ ದಿನಚರಿಯಾಗಿತ್ತು. ಬರುತ್ತ ಬರುತ್ತ ಈಕೆಗೆ ಹುಲಿಗೆಮ್ಮ ಒಲಿದು ಗೊತ್ತಾಗದ ಹಾಗೇ ಹುಲಿಗೆಮ್ಮನ ಪದಗಳನ್ನು ಹಾಡಲು ಶುರು ಮಾಡಿದಳಂತೆ. ಒಂದು ದಿನ ಹುಲಿಗೆಮ್ಮ ಈಕೆಯ ಮೈಯಲ್ಲಿ ಬಂದು ಪವಾಡ ಮಾಡಿಸಿದಳಂತೆ. ಅಂದಿನಿಂದ ಈಕೆಯನ್ನು ಮಳೆ ಬಾರದಿದ್ದರೆ ಈಕೆ ದೇವರನ್ನು ತಲೆಯ ಮೇಲೆ ಹೊತ್ತುಕೊಂಡು ಊರಲ್ಲಿ ಬಂದರೆ ಮಳೆ ಬರುತ್ತಿತ್ತಂತೆ. ಸುಡುವ ಕೆಂಡವನ್ನು ಕೈಯಲ್ಲಿ ಹಿಡಿದರೆ ಅದು ಬೂದಿಯಾಗಿ ಪರಿಣಮಿಸುತ್ತಿತ್ತಂತೆ. ಒಂದು ಹೂವು ಹಾರವಾಗಿ ಪರಿವರ್ತನೆಯಾಗುವುದು ಹೀಗೆ ಹುಲಿಗೆಮ್ಮ ಈಕೆಯ ಕೈಯಿಂದ ಪವಾಡ ಮಾಡಿಸುತ್ತಿದ್ದಳಂತೆ. ಒಂದು ದಿನ ನಾಗಮ್ಮನ ಗಂಡ ಸುಳ್ಳೆ ಈಕೆಗೆ ಯಾವ ದೇವರು ಬರುವುದಿಲ್ಲ, ಇವಳು ಅಂತವಳು ಇಂತವಳು ಎಂದು ಚಪ್ಪಲಿ ತಗೊಂಡು ಬಡಿಯಲಿಕ್ಕೆ ಹೋದಾಗ ಆತನ ನಾಲಿಗೆ ಬಿದ್ದು ಹೋಗಿ ಕೈಸ್ವಾದೀನ ತಪ್ಪಿ ಆತನ ಮೇಲೆ ಮನೆಯ ಭಾವಣಿ ಬಿತ್ತಂತೆ. ಈ ನಾಗಮ್ಮನನ್ನು ಎಷ್ಟೋ ಜನ ತಮ್ಮ ಶುಭಕಾರ್ಯಗಳಿಗೆ ಕರೆದುಕೊಂಡು ಹೋಗುತ್ತಿದ್ದರಂತೆ. ಆದರೆ ಯಾರೋ ಆಗಲಾರದವರು ಆಕೆಗೆ ಮಾಟ ಮಾಡಿಸಿದರು ಎಂದು ಆಕೆಯ ಮಗಳು ಹುಲಿಗೆಮ್ಮ ಹೇಳುತ್ತಾಳೆ.

### ಹುಲಿಗೆಮ್ಮ ದೇವಿಯ ಪವಾಡಗಳು

ಹೊಸಪೇಟೆಯ ಜಂಬನಳ್ಳಿ ಕೇರಿಯ ಹುಲಿಗೆಮ್ಮ ಎಂಬುವಾಕೆಗೆ ಸ್ವತಃ ಆಗಿರುವ ಪವಾಡಗಳು ಇವು. ಹುಲಿಗೆಮ್ಮ ಎಂಬಾಕೆಯ ಮನೆಯ ದೇವರು ಹುಲಿಗೆಮ್ಮ, ಹುಲಿಗೆಮ್ಮನನ್ನು ತಂದೆ ತಾಯಿಗೆ ನಾನು ಒಬ್ಬಳೇ ಮಗಳಿದ್ದೆನಮ್ಮ. ನನಿಗೆ ದೇವರು ಕಟ್ಟಿಸಾಕ ಬಂದಾಗ ನಾನು ಸಕ್ಕರಿ ಜಿನ್ನ ಹತ್ತಿರ ನಮ್ಮವ್ವನ ಮನಿ ಇತ್ತು, ಅಲ್ಲಿಗೆ ಓಡಿಹೋಗಿಬಿಟ್ಟೆ. ಮತ್ತೆ ನಮ್ಮ ದೊಡವ್ವ ಮಗಳಿಗೆ ದೇವರ ಕಟ್ಟಿದರು. ನಮಪ್ಪ ಯವ್ವ ಹುಲಿಗೆವ್ವ ತಾಯಿ ನಮಗಿರಾಕಿ ಒಬ್ಬಳೇ ಮಗಳು ಬ್ಯಾಡವ್ವ, ಆಕಿಗೆ ಕಾಡಬ್ಯಾಡವ್ವ ಅಂತ ಬೇಡಿಕೊಂಡ ಆ ಮೇಲೆ ನನ್ನ ದೊಡ್ಡ ಮನಿಗೆ ಕೊಟ್ಟರು. ಆದರೂ ಬಿಡಲಿಲ್ಲ ಹುಲಿಗೆವ್ವ. ಸನಸನಿಕ ಮದುವಿ ಆಗಿ ಆರು ತಿಂಗಳಾದರೂ ಬರೀ ಹೊಟ್ಟೆ ಹೋಗಿ ಹೋಗಿ ದಿನ ೮ ಸೀರಿ ಬಿಡುತ್ತಿದ್ದೆ. ಯಾಕೆಂದರೆ ಹೊಟ್ಟೆ ಹೋಗದಕ ರಕ್ತ ನಿಂದುರತಿರಲಿಲ್ಲ. ದೆವ್ವ ಹಿಡದಂಗಗಾಗದು. ಆಕೆ ಎದುರಿಗಿ ಬಂದು ನಿಂತಂಗಾಗದು. ಮನೆಲ್ಲ ಗಲ್ಲುಗಲ್ಲು ಓಡಾಡುದಂಗಾಗದು. ಹಿಂಗಾಗುತ್ತಿತ್ತು. ಮತ್ತೆ ನಮವ್ವನರು ನನಗೆ ದೇವರು ಕಟ್ಟಿಸಿದರು. ಆಗ ನಾನು ಮತ್ತೆ ಬೇಪಾಗಿ ಒಂದು ಮಗಳನ ಹಡೆದೆನವ್ವ. ಹುಲಿಗೆವ್ವ ಬಾಳ ದೊಡ್ಡಕಿ ಆಕಿ ತುಡುಗಿಯರನ ಹೋಗಿ ಗರತಿ ಮಾಡತಾಳ ಗರತೀರನ ಹೋಗಿ ತುಡುಗಿ ಮಾಡತಾಳ.

ಆಗನಿಂದ ನಾನು ಗಂಡನ ಮನೆಗಿದ್ದರು ಭಾರತ ಹಬ್ಬಕ್ಕ ಜೋಗ ಪಂಕ್ತಿ ಅಂದರೆ ಪಡ್ಲಿಕಿ ತುಂಬಿಸ್ತೀನಿ ಒಂದು ೫ ಉಧೋ ಹಾಕಿಸ್ತಿನಿ ಯವ್ವ ಆದರೂ ನನ್ನ ಗಂಡ ಸತ್ತೋಗಿ ಬಿಟ್ಟನವ್ವ. ಎಲ್ಲ ಆಕಿದೆ ಯವ್ವ ನನ್ನ

ಗಂಡನ ಮನಿ ದೇವರು ಜಂಬುನಾಥ ಆದರೂ ನಾನು ಮಾತ್ರ ಆಕಿನ ಬಿಟ್ಟಿಲ್ಲವ್ವ ಆದರೇನು ನನ್ನ ಮಗಳನ ೬೦,೦೦೦ ಕೊಟ್ಟು ಲಾಯರ್‌ಗೆ ಕೊಟ್ಟೇನಿ ಬೇಷದಳವ್ವ ಅಂತ ಹೇಳಿದಳು.

೨. ಹುಲಿಗೆಮ್ಮ ಇನ್ನೊಂದು ಹೇಳಿದಳು. ಇವರ ಮನಿ ಪಕ್ಕಕ ಇವರ ಅಪ್ಪನ ತಂಗಿ ಒಂದು ಮನಿ ಕಟ್ಟಿಸಿದಳಂತೆ. ಅದು ಬೇಷು ಕಟ್ಟಿಸಿ ಇವರಪ್ಪನ ದೇವರ ಮನಿ ನೀಟು ಒಂದು ಪೈಕಾನಿ ಕಟ್ಟಿಸಿಬಿಟ್ಟಳಂತೆ. ಇವರಪ್ಪ ಹೇಳಿದನಂತೆ ಯವ್ವ ತಂಗಿ ದೆವರ ಮನಿ ನೀಟು ಪೈಕಾನಿ ಬ್ಯಾಡ ಒಂದು ಕಟ್ಟಿ ಕಟ್ಟಿಸು ಕುಂದಿರಕಾಕತಿ ಅಂತ ಹೇಳಿದರೆ ಆಕಿ ಕೇಳಿಲಿಲ್ಲಂತೆ. ಮನಿ ಕಟ್ಟಿಸಿ ವರ್ಷ ಆಗಲಿಲ್ಲ. ಆಕಿನ ಮಗಳು ತುಂಬ ದಿಮ್ಮನಷಕಿ ರಕ್ತ ಕಾರಿ ಸತ್ತುಹೋಗಿ ಬಿಟ್ಟಳಂತೆ. ಮತ್ತೆ ಆಗ ಯವ್ವ ಹುಲಿಗೆವ್ವ ತಪ್ಪಾಗತೆವ್ವ ಅಂತ ಬೇಡಿಕೊಂಡು ಮತ್ತೆ ಅದನ್ನು ಕೆಡಿಸಿ ಕಟ್ಟೆ ಕಟ್ಟಿಸಿದಳಂತೆ. ಹುಲಿಗೆಮ್ಮ ಒಲಿದರೆ ಒಲಿಮಾಯಿ ಇಲ್ಲದಿದ್ದರೆ ಯಿದಿಮಾಯಿ ಅಂತ ಹೇಳಿದಳು.

**ಹುಲಿಗೆಮ್ಮನ ಪವಾಡದಲ್ಲಿನ ಹುಣಿಸೆ ಮರ**

ಹುಲಿಗೆಮ್ಮನ ಗಂಡ ಜಮದಗ್ನಿ ಮಗ ಪರಶುರಾಮ ದಿನಾ ಆಕಳ ಹಾಲು ಕುಡಿತಿದರಂತೆ. ಹುಲಿಗೆಮ್ಮ ಅಣ್ಣಾ ಒಂದು ಆ ಕಾಮಧೇನು ಮೊಲಗೆ ಬಿಲ್ಲಿನಿಂದ ಹೊಡಿದು ಬಿಟ್ಟನಂತೆ. ಆ ಕಾಮಧೇನು ಮೇಲೆ ಕೆಳಗೆ ಬಿದ್ದು ಪರಶುರಾಮ ಹಾಲಿಲ್ಲದಂಗೆ ಆಗಿ ಬಿಟ್ಟವಂತೆ. ಆಗ ಹುಲಿಗೆಮ್ಮ ಬಿದ್ದ ಮೊಲೆಗೆ ಭಂಡಾರ ಉಗ್ಗಿದಾಗ ಅವು ಹುಣಿಸೆ ಮರಗಳಾಗಿ ಮರದ ತುಂಬ ಹುಣಿಸೆಕಾಯಿ ಬಿಟ್ಟವಂತೆ. ಮತ್ತೆ ಹುಲಿಗೆಮ್ಮ ಹೇಳಿದಳಂತೆ. ಇನ್ನು ಮೇಲಿಂದ ನನ್ನ ನೆನೆಸಕ್ಕೋಸ್ಕರ ಪ್ರತಿಯೊಂದು ಭಕ್ತರ ಮನೆಲಿ ಹುಂಚೆ ಚಟ್ನಿ ಇರಬೇಕು ಅಥವಾ ಹಾಕಬೇಕು ಅಂತ ಹೇಳಿ ಹೋದಳಂತೆ. ಆದ್ದರಿಂದ ಇವತ್ತಿಗೂ ಹುಣಿಸೆಕಾಯಿ ಚಟ್ನಿ ಅಂತ ಹೇಳಿ ಹೋದಲಂತೆ. ಆದ್ದರಿಂದ ಇವತ್ತಿಗೂ ಹುಣಿಸೆಕಾಯಿ ಚಟ್ನಿ ಹಾಕಿದ ಮೇಲೆ ಆ ಗಡಿಗೆಗೆ ಭಂಡಾರ ಕುಂಕುಮ ಹಚ್ಚಿ ಊದಿನ ಕಡ್ಡಿ ಬೆಳಗಿ ಇಟ್ಟು ಅದನ್ನ ತೆಗೆದು ರುಬ್ಬುವಾಗಲು ಸ್ನಾನ ಮಾಡಿ ಆ ಗಡಿಗೆಗೆ ಭಂಡಾರ ಕುಂಕುಮ ಹಚ್ಚಿ ಕೈಮುಗಿದು ಸ್ವಲ್ಪ ತಗೊಂಡು ರುಬ್ಬಿ ಚಟ್ನಿ ತಿನ್ನುತ್ತಾರೆ.

ಮತ್ತೆ ಮುಟ್ಟು ಚಟ್ಟಾದರೆ ಆ ಗಡಿಗಿನ ಮುಟ್ಟಿಬಿಟ್ಟರೆ ಬೂಜು ಬಂದು ಕೆಟ್ಹೋಗಿ ಬಿಡುತತಿ. ಅದಕೆ ಅದನ್ನು ಹೊರಗಾದರೆ ಮುಟ್ಟಲ್ಲ ಅಂತ ಹೇಳಿದಳು ಆಯಮ್ಮ.

ನೋಡಮ್ಮ ನಮ್ಮದೇನೆ ಕಷ್ಟಬರಲಿ ಆಕಿಗೆ ಪ್ರತಿ ಹುಣ್ಣಿಮೆಗೆ ಹೋಗಿ ನಡಿಕಂಡರೆ ಖಂಡಿತ ಒಳ್ಳೆದಾಗತವ್ವ ಆದರೆ ಆಕಿಗೆ ಕಾಲುಮಡಿದು ಹಂಗೆ ಒಳಗೋಗಬಾರದು. ಕಾಲಿಗೆ ನೀರಾಕಿಕೊಂಡು ಹೋಗಬೇಕು. ಮುಟ್ಟಾದರೆ ೫ ದಿನ ತಲಿಗೆ ನೀರಾಕ್ಕಂಡು ಆಕಿನ ಮುಟ್ಟಬೇಕು.

## ೫.೨ ಜನಪದ ಪುರಾಣಗಳಲ್ಲಿ ಹುಲಿಗೆಮ್ಮ

ಜನಪದ ಪುರಾಣಗಳಲ್ಲಿ ಕಂಡು ಬರುವ ಎಲ್ಲಮ್ಮನ ಕತೆಯು ಕೆಳಗೆ ಕಾಣಿಸಿದ ಹಾಡಿನಲ್ಲಿ ಹ್ರಸ್ವವಾಗಿ ಕೇಂದ್ರೀಕೃತಗೊಂಡಿದೆ.

ಹುಟ್ಟಿಬಂದೆ ಎಲ್ಲಮ್ಮನಾಗಿ
ನಿನ್ನ ಮದಿವಿಯ ಮಾಡಿ
ಕೊಟ್ಟಾರಪ್ಪ ಜಮದಗ್ನಿಗೆ
ರೇಣುಕ ರಾಜ ನಿನ್ನ ತಂದಿ
ಭೋಗಾವತಿ ನಿನ್ನ ತಾಯಿ
ಹುಟ್ಟಿ ಬಂದೆ ಅವರ ಹೊಟ್ಟೇಲಿ
ಹಾಕಿ ತೂಗ್ಯಾನ ತೊಟ್ಟೀ ಮೇಲೆ

ಹಾವಿನ ಸಿಂಬಿ ತಲಿಯ ಮ್ಯಾಲಿ
ಉಸುಗಿನ ಕೊಡ ಅದರ ಮ್ಯಾಲ
ಪತಿ ಸೇವೆ ಮಾಡುತಲಿ
ನೀರು ತರೂದು ನದಿಯಲಿ
ನೀರು ತರೂ ನದಿಯಲಿ
ದೃಷ್ಟಿ ಹೋತ ಅದರ ಮ್ಯಾಲ
ಕೊಡ ಬಿತ್ತ ಅದರ ಮ್ಯಾಲ

ಜಮದಗ್ನಿಗೆ ತಿಳಿದೀತೆಲ್ಲ
ಪತ್ನಿ ಮಾಡಳ ದುಃಖವಲ್ಲಿ
ಶಾಪ ಕೊಟ್ಟ ಆತನಲ್ಲಿ
ಕುಷ್ಟರೋಗ ಬಡೀತ ಮೈಲಿ

ಕಾಡು ಮೇಡು ತಿರುಗತಲಿ
ಎಕ್ಕಯ್ಯ ಜೋಗಯ್ಯ ಬಂದಾನಲಿ
ಜಲ್ಮ ಉದ್ದರಾದೀತಲಿ

ಮತ್ತೆ ಬಂದಾಳಲ್ಲೊ ಮನಿಗೆ

ಸಿಟುಗೊಂಡು ಮನಿಯೇ ಕರೆದ

ಬಾ ರಾಮಾ ಏನ ಬೇಡತಿ ರಾಮ

ತಲೆಯ ಕಡಿಯೇ ಶಿರವಾ ಕಡಿಯೇ

ದಿಡಾ ಬಿತ್ತ ಭೂಮಿಯ ಮ್ಯಾಲೆ

ತುಂಬ ಸಂಕ್ಷಿಪ್ತವಾಗಿರುವ, ಆದರೆ ಬಹಳ ಜನಪ್ರಿಯವಾಗಿರುವ ಹಾಡಿದು. ಇದೇ ಹಾಡಿನ ಜಾಡು ಹಿಡಿದು ಜನರ ಕತೆಯ ಸ್ಥೂಲ ರೂಪ ಇಂತಿದೆ.

ಕಾಶ್ಮೀರ ಪಟ್ಟಣದಲ್ಲಿ ಒಬ್ಬ ರಾಜ ಇದ್ದ. ಅವನ ಹೆಸರು ರೇಣುಕ ರಾಜ. ಮೂರು ಲೋಕಕ್ಕೆ ಆತ ಶ್ರೀಮಂತ, ಭಾರೀ ಅರಮನೆ. ಅವನ ಮೊದಲನೇ ಹೆಂಡತಿಯ ಹೆಸರು ಭೋಗಾವತಿ, ಆಕೆಗೆ ಮಕ್ಕಳಾಗಲಿಲ್ಲ. ಅರಸ ಎರಡನೇ ಮದುವೆ ಆದ. ಏಳು ವರ್ಷ ಆದರೂ ಈಕೆಯಲ್ಲಿ ಮಕ್ಕಳಾಗಲಿಲ್ಲ. ಆಮೇಲೆ ಅರಸ ಮೂರನೇ ಮದುವೆ ಆಗುತ್ತಾನೆ. ಅವಳಿಗೂ ಮಕ್ಕಳಾಗಲಿಲ್ಲ. ಹೀಗೆ ಅರಸ ಒಟ್ಟು ಏಳು ಮದುವೆ ಆಗುತ್ತಾನೆ. ಆದರೂ ಮಕ್ಕಳಾಗುವುದಿಲ್ಲ. ಕೊನೆಗೆ ಅರಸು ತಪಸ್ಸು ಮಾಡುತ್ತಾನೆ. ಶಿವನ ಧ್ಯಾನಿಸುತ್ತಾನೆ. ಪಾರ್ವತೀನ ಬೇಡಿಕೊಳ್ಳುತ್ತಾನೆ. ಪಾರ್ವತಿ ತಾನೇ ಎಲ್ಲವ್ವನಾಗಿ ಹುಟ್ಟುತ್ತೇನೆ ಎನ್ನುತ್ತಾಳೆ. ಹಾಗೆ ಹುಟ್ಟುತ್ತಾಳೆ. ಹುಟ್ಟಿದ ಎಲ್ಲಮ್ಮನಿಗೆ ಹನ್ನೆರೆಡು ಗಾವುದ ದೂರದಲ್ಲಿರುವ ಜಮದಗ್ನಿ ಎಂಬ ಋಷಿಯ ಮೇಲೆ ದೃಷ್ಟಿ ಬೀಳುತ್ತದೆ. ನೆಲದವರೆಗೆ ಗಡ್ಡ ಮುಗಿಲವರೆಗೆ ಜಡೆ ಬೆಳೆಸಿದ ಜಮದಗ್ನಿಯನ್ನು ಮಾತಾಡಿಸುವುದು ಕಷ್ಟ ಆಗುತ್ತದೆ. ಕೊನೆಗೆ ರೇಣುಕ ರಾಜ ಕೈ ಮುಗಿದು ನಿಲ್ಲುತ್ತಾನೆ. ಜಮದಗ್ನಿಗೆ ಸಂತೋಷ ಆಗುತ್ತದೆ. ನಾ ಹೇಳಿದಂಗೆ ಕೇಳಿದರೆ ಮದುವೆ ಆಗುತ್ತೇನೆ ಎಂದು ಜಮದಗ್ನಿ ಹೇಳುತ್ತಾನೆ. ಅರಸ ಒಪ್ಪುತ್ತಾನೆ. ಜಮದಗ್ನಿ ರೇಣುಕೆಯರ ಮದುವೆ ನಡೆಯುತ್ತದೆ.

ಆ ಮದುವೆಯ ಆದ ನಂತರ ರೇಣುಕೆಗೆ ಒಂದು ಕೆಲಸ ಒಪ್ಪಿಸುತ್ತಾನೆ. ಅದೆಂದರೆ ಉಸುಕಿನ ಕೊಡ ಮಾಡಿ ಹಾವಿನ ಸಿಂಬಿ ಮೇಲಿಟ್ಟು ಜಮದಗ್ನಿಯ ಯಜ್ಞದ ಕೆಲಸಕ್ಕೆ ನೀರು ತರುವುದು. ದಿನಾ ಇದೇ ನಡೆಯುತ್ತಿತ್ತು. ಒಂದು ದಿನ ಪಾರ್ವತಿ ಪರಮೇಶ್ವರರು ಹೊಳೆಯಲ್ಲಿ ಈಜಾಡುತ್ತಿದ್ದರು. ರೇಣುಕ ಅದನ್ನು ನೋಡಿದಳು. ನೋಡಿ ಮನಸ್ಸಲ್ಲಿ ಅಂದುಕೊಂಡಳು. "ನಾ ಎಂಥ ಪಾಪಿ ಬೂದಿಬಡುಕನ ಮದುವೆ ಆಗಿ ಬಿಟ್ಟೆ, ರಾಜನ ಮದುವೆ ಆಗಿದ್ರೆ ಸುಖವಾಗಿರುತ್ತಿದ್ದೆ" ಹಾಗಂದದ್ದಷ್ಟೆ ತಡ ಸರ್ಪದ ಸಿಂಬಿ ಹರಿದು ಹೋಯಿತು. ಉಸುಕಿನ ಕೊಡ ನಿಲ್ಲಲೇ ಇಲ್ಲ. ಎಷ್ಟು ಪ್ರಯತ್ನ ಮಾಡಿದರೂ ಸಫಲ ಆಗಲಿಲ್ಲ. ಹಾಗೇ ಆಶ್ರಮಕ್ಕೆ ಬರುತ್ತಾಳೆ. ಜಮದಗ್ನಿ ಉರಿ ಉರಿ ಮುಖ ಮಾಡಿ ಕುಂತಿದ್ದ. 'ಎಲ್ಲಿ ನೀರು ಎಂದು ಕೇಳಿದಾಗ ಆಕೆ ನಡೆದದ್ದು ಹೇಳುತ್ತಾಳೆ. 'ನೀಚ-ಹಾದರಗಿತ್ತಿ ಮೈಮೇಲೆ ಕುಷ್ಟ ಬರಲಿ' ಎಂದು ಆತ ಶಪಿಸುತ್ತಾನೆ. ಆಕೆಯ ಮೈ ತುಂಬ ಕಜ್ಜಿ ಆಗಿ ಎಲ್ಲರೂ ಹೇಸಿಕೊಂಡರು. ಎಲ್ಲಿಗೆ ಹೋಗಲಿ ಎಂದು ಚಿಂತಿಸಿದ ಆಕೆ ತನ್ನ ಅಕ್ಕ ತಂಗಿಯರ ಮನೆಗೆ ಹೋಗುತ್ತಾಳೆ.

ಆದರೆ ಅಕ್ಕ-ತಂಗಿಯರು ರೇಣುಕೆಗೆ ಸ್ಥಳ ಕೊಡುವುದಿಲ್ಲ. ಸಿಟ್ಟಿನಿಂದ ರೇಣುಕೆ ಒಬ್ಬಳ ತಲೆಗೆ ಗುದ್ದಿದಳು. ಆಕೆಯ ನೆತ್ತಿ ಸೋರಲಿಕ್ಕೆ ಶುರುವಾಯಿತು. ಇನ್ನೊಬ್ಬಳು ತಂಗಿ ಬಾದಾಮಿ ಬನಶಂಕರಿ ಹತ್ತಿರ ಬಂದರೆ ಆಕೆಯೂ ನೆಲೆ ನೀಡಲು ನಿರಾಕರಿಸುತ್ತಾಳೆ. ನಿನ್ನ ಪೂಜಾರಿಗಳಿಗೆ ಬಡತನ ಬರಲಿ ಎಂದು ಆಕೆಗೆ ರೇಣುಕೆ ಶಾಪ ನೀಡುತ್ತಾಳೆ. ಅಲ್ಲಿಂದ ಮುಂದೆ ರೇಣುಕೆಯು ಎಕ್ಕಯ್ಯ, ಜೋಗಯ್ಯ, ಉದ್ದಯ್ಯ, ಶರಣಯ್ಯ ಎಂಬ ನಾಲ್ಕು ಜನ ಜೋಗಿಗಳ ಹತ್ತಿರ ಬರುತ್ತಾಳೆ. ಎಕ್ಕಯ್ಯ-ಜೋಗಯ್ಯ ಸ್ನಾನಮಾಡುವಾಗ, ಅವರ ಮೈಲಿಂದ ಬಿದ್ದ ನೀರಿಗೆ ರೇಣುಕೆ ಮೈಗೊಡುತ್ತಾಳೆ. ಆಗ ಆಕೆಗೆ ನೋವು ಕಡಿಮೆ ಆಯಿತು. ಇವರು ಮಹಾಪುರುಷರು ಎಂದುಕೊಂಡು ಆಕೆ ಮುಂದೆ ಆ ನಾಲ್ವರ ಬಳಿ ಇದ್ದು, ದಿನಾ ಕಸ ಹೊಡೆಯುತ್ತಿದ್ದಳು. ಒಂದು ದಿನ ಜೋಗಪ್ಪನಿಗೆ ಈಕೆ ಯಾರೋ ದೊಡ್ಡವರ ಮನೆ ಹೆಣ್ಣು ಅನ್ನಿಸಿತು. ಆತ ಆಕೆಯ ಕೈ ಹಿಡಿದು 'ಯಾಕವಾ ಮಗಳಾ ನೀ ದೊಡ್ಡವರ ಮನೆ ಮಗಳು ಹೌದಲ್ಲೋ' ಎಂದು ಕೇಳುತ್ತಾನೆ. ರೇಣುಕೆ ನಡೆದದ್ದಲ್ಲ ಹೇಳಿ ನಿಮ್ಮ ಪಾದ ಸೇವೆಯಿಂದ ರೋಗ ಕಡಿಮೆ ಆಗುತ್ತಿದೆ ಎನ್ನುತ್ತಾಳೆ. 'ದೊಡ್ಡವರ ಮಗಳು ಹೀಗೆ ಬದುಕಬಾರದು ಬೇರೆ ಕಡೆ ಹೋಗು' ಎನ್ನುತ್ತಾರೆ. ಜೋಗಯ್ಯ ನಾ ಹೋಗಲಾರೆ ನನಗೆ ಬದುಕಲು ದಾರಿ ತೋರಿಸಿ ಎನ್ನುತ್ತಾಳೆ. ಆಗ ಜೋಗಯ್ಯ ತನ್ನ ಪಾದರಕ್ಷೆ ತೆಗೆದು ಆಕೆಗೆ ಕೊಟ್ಟು 'ಹೋಗು ಒಳ್ಳೆಯದಾಗುತ್ತದೆ' ಎನ್ನುತ್ತಾನೆ.

ಅಲ್ಲಿಂದ ಹೊರಟ ರೇಣುಕಳು ಸೀತಿಮನಿಗೆ ಬರುತ್ತಾಳೆ. ಅಪ್ಪಯ್ಯ, ಚಿಕ್ಕಯ್ಯ, ಮರುಳಯ್ಯ ಮತ್ತು ರಾಮ ಎಂಬ ನಾಲ್ಕು ಜನ ಸ್ವಾಮಿಗಳನ್ನು ಭೇಟಿ ಮಾಡುತ್ತಾಳೆ. ಆದರೂ ಆಕೆಗೆ ಇರಲು ಜಾಗ ಕೊಡುವುದಿಲ್ಲ. ಅಲ್ಲಿಂದ ಮುಂದೆ ಕೂಡಲ ಸಂಗಮಕ್ಕೆ ಬಂದು ಸಂಗಪ್ಪಣ್ಣನನ್ನು ಕೇಳುತ್ತಾಳೆ. ಆತನೂ ಜಾಗಕೊಡುವುದಿಲ್ಲ. ಅಲ್ಲಿಂದ ಮುಂದೆ ಗೊಡಚಿ ಈರಣ್ಣನಲ್ಲಿಗೆ ಹೋಗುತ್ತಾಳೆ. ಆತನೂ ಜಾಗಕೊಡದೆ ಅಲ್ಲಿ ಗುಡದಾಗೆ ಇರು ಎನ್ನುತ್ತಾನೆ. ಆ ಪ್ರಕಾರ ಎಲ್ಲವ್ವ ಗುಡ್ಡದಲ್ಲಿ ಬಂದು ನಿಲ್ಲುತ್ತಾಳೆ. ಅಲ್ಲಿ ಮೈಲಾರಲಿಂಗ ಇದ್ದ. ಮೈಲಾರನ ಭಂಡಾರ ಕಂಡು ಆಕೆಗೆ ಆಸೆ ಆಗುತ್ತದೆ. ಐದು ಹಿಡಿ ಭಂಡಾರನ ಉಡಿಯಲ್ಲಿ ಕಟ್ಟಿಕೊಂಡು ಅಲ್ಲಿಂದ ಓಡುತ್ತಾ ನೇರ ಹುಲಿಗಿಗೆ ಬರುತ್ತಾಳೆ. ಹುಲಿಗಿಯಲ್ಲಿ ನದಿ ತುಂಬಿ ಹರಿಯುತ್ತಿತ್ತು. ಅಂಬಿಗರು ದೋಣೀಲಿ ಹೋಗುತ್ತಿದ್ರು. ನನ್ನನ್ನೂ ಆ ಕಡೆ ದಾಟಿಸಿರಿ ಎಂದು ರೇಣುಕೆ ಅಂಬಿಗರನ್ನು ಬೇಡಿಕೊಳ್ಳುತ್ತಾಳೆ. ದೋಣಿ ಮೇಲೇರಿ ಕುಳಿತುಕೊಳ್ಳುತ್ತಾಳೆ. ಹೊಳೆ ನಡುವಿನಲ್ಲಿ, ದೋಣಿಯಲ್ಲಿದ್ದ ಇತರರು ರೇಣುಕೆಯ ಮೇಲೆ ಮನಸ್ಸು ಮಾಡುತ್ತಾರೆ. ಎಕ್ಕಪ್ಪ, ಜೋಗಪ್ಪ, ಉದ್ದಯ್ಯ, ಶರಣಯ್ಯ ಇರುವವರೆಗೆ ನನ್ನ ಪಾತಿವ್ರತ್ಯಕ್ಕೆ ತೊಂದರೆ ಇಲ್ಲ ಎಂದು ಆಕೆ ಹೇಳಿಕೊಳ್ಳುತ್ತಾಳೆ.ಉಧೋ ಎಂದು ಹೇಳಿ ಸೊಂಟದಿಂದ ಭಂಡಾರ ತೆಗೆದು ಅವರ ಮೇಲೆ ಉಗ್ಗುತ್ತಾಳೆ. ನಾಲ್ಕು ಜನ ದೋಣಿಯಲ್ಲಿ ಮಲಗಿ ಬಿಡುತ್ತಾರೆ. ಕೊನೆಗೆ ಆಕೆ ತಾನೇ ದೋಣಿ ನಡೆಸಿಕೊಂಡು ಆಚೆ ದಡ ಸೇರುತ್ತಾಳೆ. ದೋಣಿಯನ್ನು ಮಾಯ ಮಾಡುತ್ತಾಳೆ. ಇನ್ನು ಬೇರೆ ಯಾರಾದರೂ ತೊಂದರೆ ನೀಡುವುದು ಬೇಡ ಎಂದು ಕೊಂಡು ಕೊರವಂಜಿ ವೇಷ ಹಾಕುತ್ತಾಳೆ. ಬಗಲಾಗಿನಲ್ಲಿ ಒಂದು ಕೂಸು ಕಟ್ಟಿಕೊಳ್ಳುತ್ತಾಳೆ. ಆಚೆಗೆ ನಡೆಯುತ್ತಾಳೆ. ಅಷ್ಟರಲ್ಲಿ ಮಲಗಿದ್ದ ಅಂಬಿಗರಿಗೆ ಎಚ್ಚರಿಕೆ ಆಗುತ್ತದೆ. ಗಡಿಬಿಡಿಯಿಂದ ಎದ್ದು ನೋಡುವಾಗ ಕೊರವಂಜಿ ಕಾಣಿಸುತ್ತಾಳೆ. ಆಕೆಯನ್ನೇ ಕೇಳುತ್ತಾರೆ.

ಯವ್ವಾ ನಮ್ಮ ದೋಣಿ ಕಂಡೆಯಾ?

ದೋಣಿಯ ಹಗ್ಗ ಕಂಡೆಯಾ?

ಹಗ್ಗದೊಂದಿಗೆ ಒಬ್ಬ ಹೆಣಮಗಳ ನೋಡಿದೆಯಾ?

ಕೊರವಂಜಿ ಇಲ್ಲವೆಂದು ಹೇಳುತ್ತಾಳೆ. ಅಂಬಿಗರು ಮತ್ತೆ ಕೇಳಿದಾಗ 'ನಿಮ್ಮ ಮಕ್ಕಳ ಕೊಯ್ದು ಅಡುಗೆ ಮಾಡಿ ಬಳಸಿದ್ರೆ ನಾವೆ ಸಿಗುತ್ತದೆ' ಎನ್ನುತ್ತಾಳೆ. ಅವರು ಹಾಗೆ ಮಾಡುತ್ತಾರೆ. ಅವರ ನಿಷ್ಠೆಗೆ ಮೆಚ್ಚಿ ರೇಣುಕ ಸತ್ತ ಮಕ್ಕಳನ್ನು ಮತ್ತೆ ಬದುಕಿಸುತ್ತಾಳೆ. ನಮ್ಮದು ತಪ್ಪಾಯಿತು ಎಂದು ಬೇಡಿಕೊಂಡ ಆ ಅಂಬಿಗರನ್ನು ರೇಣುಕ ಕ್ಷಮಿಸುತ್ತಾಳೆ. ಹುಲಿಗಿಯಲ್ಲಿ ಈ ಘಟನೆ ನಡೆದುದ್ದರಿಂದ ಆಕೆ ಹುಲಿಗೆಮ್ಮ ಎಂಬ ಹೆಸರು ಧರಿಸುತ್ತಾಳೆ.

ಹುಲಿಗೆಮ್ಮ ನೆಲೆ ನಿಂತ ಜಾಗದಲ್ಲಿ ಸರಕಾರದವರು ರೈಲು ಪಟ್ಟಿ ಹಾಕುತ್ತಾರೆ ಎಂಬ ಸುದ್ದಿ ಬಂತು. ಹುಲಿಗೆಮ್ಮ ಪಾತ್ರೆ ಮಾರುವವಳ ವೇಷ ಹಾಕಿ ಇಂಗ್ರಜಿಯವರನ್ನು ಹೆದರಿಸುತ್ತಾಳೆ. ಇಂಗ್ರಜಿ ಸರಕಾರ ಗುಡಿ ಬಿಟ್ಟು ದೂರದಲ್ಲಿ ರೈಲು ಓಡಿಸಲು ವಚನ ನೀಡುತ್ತಾರೆ. ಹಾಗೆ ಮಾಡುತ್ತಾರೆ. ಹುಲಿಗೆಮ್ಮನ ಮಾತಿನಂತೆ ಈಗಲೂ ಹುಲಿಗಿಯಲ್ಲಿ ರೈಲು ಹಾದು ಹೋಗುವಾಗ ಉಧೋ ಉಧೋ ಎನ್ನುತ್ತದೆ.

ಇಷ್ಟರಲ್ಲಿ ಹುಲಿಗೆಮ್ಮ - ಎಲ್ಲಮ್ಮ ಬೇರೆ ಬೇರೆ ಆದ್ರು. ಅವರಿಬ್ಬರ ನಡುವೆ ಸ್ಪರ್ಧೆ ಬಿತ್ತು. ಹುಲಿಗೆಮ್ಮ ಕೆಂಡಹಾದರೆ ಎಲ್ಲಮ್ಮನಿಗೆ ಆಗಲಿಲ್ಲ. ಹುಲಿಗೆಮ್ಮ ಕುದಿಯುವ ಪಾಯಸಕ್ಕೆ ಕೈ ಹಾಕಿದಳು. ಎಲ್ಲಮ್ಮನಿಗೆ ಆಗಲಿಲ್ಲ. ಕೊನೆಗೆ ಹುಲಿಗೆಮ್ಮ ಬಾಳೆದಿಂಡು ಮೇಲೆ ಕುಳಿತು ಸವಾರಿ ಮಾಡಿದಳು. ಅದು ಎಲ್ಲಮ್ಮನಿಗೆ ಆಗಲಿಲ್ಲ. ಗೆದ್ದ ಹುಲಿಗೆಮ್ಮನನ್ನು ಅಲ್ಲಿಯೆ ಬಿಟ್ಟು ಎಲ್ಲವ್ವ ಮುಂದೆ ಹೋದಳು. ಯಮನೂರಪ್ಪನನ್ನು ಭೇಟಿಯಾಗಿ ನೆಲೆಯಾಗಲು ಸ್ಥಳ ಕೇಳಿದಳು. ಇಲ್ಲಿ ಏಳು ಖಂಡುಗ ಬ್ಯಾಟಿ ಬೀಳುತ್ತದೆ. ರಕ್ತ ನೋಡಿ ನೀ ಹೆದರಿಕೊಳ್ತಿ ಎನ್ನುತ್ತಾನೆ ಆತ. ಅಲ್ಲಿಂದ ಎಲ್ಲಮ್ಮ ನೇರವಾಗಿ ಏಳುಕೊಳ್ಳಕ್ಕೆ ಹೋಗುತ್ತಾಳೆ. ಅಲ್ಲಿ ಏಳು ಮಂದಿ ಸಿದ್ಧರಿರುತ್ತಾರೆ. ಅವರಿಗೆ ಪವಾಡದಿಂದ ಅನ್ನ ಮಾಡಿ ಹಾಕುತ್ತಾಳೆ. ಪವಾಡದಿಂದ ಕಲ್ಲಿನಡಿಯಿಂದ ನೀರು ತೆಗೆಯುತ್ತಾಳೆ. ಕೈ ಕಟ್ಟಿ ಭಂಗಿ ತರಿಸುತ್ತಾಳೆ.

ರೇಣುಕ ಪೂರ್ತಿ ಶುದ್ಧಳಾಗಿ ಮತ್ತೆ ಜಮದಗ್ನಿಯ ಬಳಿ ಬರುತ್ತಾಳೆ. ಜಮದಗ್ನಿಯ ಆಶ್ರಮಕ್ಕೆ ಕಾರ್ತಿಕ ರಾಜನಿಗೂ ಯುದ್ಧ ನಡೆದು ಜಮದಗ್ನಿ ಸಾಯುತ್ತಾನೆ. ರೇಣುಕೆ ಮುಂಡೆಯಾಗುತ್ತಾಳೆ. ಆಕೆ ಮುಂದೆ ಪರಮಾತ್ಮನನ್ನು ಧ್ಯಾನಿಸಿ ಪರಶುರಾಮನನ್ನು ಹೆರುತ್ತಾಳೆ. ಪರಶುರಾಮ ತಂದೆಯನ್ನು ಕೇಳುತ್ತಾನೆ. ಆತನಿಗೆ ತಾಯಿಯ ಪಾತಿವ್ರತ್ಯದ ಮೇಲೆ ಸಂಶಯ ಬರುತ್ತದೆ. 'ಕರಿ ಸೀರಿ ಉಟ್ಟು ಉರಿಯಾಗೆ ನಿಲ್ಲು' ಎನ್ನುತ್ತಾನೆ. ಹಾಗೆ ನಿಂತ ರೇಣುಕಾಳು ಬೆಂಕಿಯಲ್ಲಿ ಉರಿದು ಹೋಗುತ್ತಾಳೆ. ಪರಶುರಾಮ ತಂದೆ ತಾಯಿ ಇಬ್ಬರನ್ನು ಕಳಕೊಂಡದ್ದಕ್ಕೆ ಪರಿತಪಿಸುತ್ತಾನೆ. ರುಂಡ ನಿಜ ಹೇಳುತ್ತದೆ. ಪರಶುರಾಮನೇ ಕಾರ್ತಿಕ ರಾಜನ ತಲೆ ತುಂಡರಿಸುತ್ತಾನೆ. ತಲೆಯಿಂದ ಚೌಡಿಕೆ ಮಾಡಿ ಕರುಳು ತೆಗುದು ತಂತಿ ಮಾಡುತ್ತಾನೆ. ಕಾಲುಕಿತ್ತು ಕೋಲು ಮಾಡುತ್ತಾನೆ. ಟಂವ ಟಂವ ತಂತಿ ಅಂತ ಹಾಡುತ್ತ ರೇಣುಕ ತಾಯಿ ಬಳಿ ಬರುತ್ತಾನೆ. ಡಾ. ಪುರುಷೋತ್ತಮ ಬಿಳಿಮಲೆ : ೧೯೯೯ : ೪ ರಿಂದ ೯).

## ೩.೩ ಹುಲಿಗೆಮ್ಮನ ಹಾಡುಗಳು

ಅತ್ತ ಮಡಿಯಾಚೆಗೆ ಹುಲಿಗೆವ್ವ ಒಬ್ಬಾಕೆ ಬರುವಾಗ

ಒಬ್ಬ ಫಕೀರನ್ನ ಹೋಗಿ ಎದುರಾಗಿ ಕೇಳ್ಯಾಲೆ

ಆ ಫಕೀರ ನಾನಿನ್ನ ಮುಂದಲೊಳಗೆ ಹೋಗ ಬೇಕ ತಾಯಿ

ಕರಿಯಾನೆ ಗುಂಗಡಿ ಮೂರಡಿ ಗದ್ದಗಿ ಮಾಡಿ

ಯೀರಪ್ಪ ಬಳೇಗರನ್ನ ಯಿಳವಪ್ಪ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೆ ತಾಯಿ

ನೀಲಕಡ್ಡಿಯ ಬಳಿಯ ನಾಕ ದೊಡ್ಡಿಗೊಂದು

ಬಿನಗ್ಯೆ ತಾನೇ ಆಡತರಾದವು

ನಾನಿನ್ನ ಮುಂದಲಳ್ಳಿಗೆ ಹೋಗಬೇಕೆ ತಾಯಿ

ಒಂದ ಕೈ ಕೊಡಂದ್ರೆ ಹದಿನಾರು ಕೈ ಕೊಟ್ಟಲ್ಲೆ ತಾಯಿ

ಅದರಲೆ ತಾಯಿ ಅಂಜಿನಿ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೆ ತಾಯಿ

ಅದರ ಬೇಡ ಮಗನೆ ಅಂಜಬೇಡೋ ಮಗನೆ

ಅಂಜದೆಲೆ ಐದು ಬಾಳೆಯ ಇಡೊ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೆ ತಾಯಿ

ಒಂದು ಕೈಕೊಡಂದ್ರೆ ಹದಿನಾರು ಕೈ ಕೊಟ್ಟಲ್ಲೆ ತಾಯಿ

ತಾಯಿ ಅಂಜಿನಿ ತಾಯಿ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೋ ತಾಯಿ

ಅದರಬೇಡ ಮಗನೆ ಅಂಜಬೇಡೋ ಮಗನೆ

ಅಂಜದೆಲೆ ಐದು ಬಾಳೆಯ ಇಡೊ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೇ ತಾಯಿ

ರಕ್ಕವ ಕೇಳಿದ್ರೆ ನತ್ರಗೋನ್ನ ಬೀಸುವಳು

ಅದರಿನಿ ತಾಯಿ ಅಂಜಿನಿ ತಾಯಿ

ನಾನಿನ್ನ ಮುಂದಲಳ್ಳಿಗೆ ಹೋಗಬೇಕೇ ತಾಯಿ

ನೀನಿನ್ನ ಮುಂದಲಳ್ಳಿಗೆ ದಯಮಾಡೋ ಮಗನೆ

ನಿನ್ನಿಂದ ಹುಲಿಗೆವ್ವ ಬರುತಾಳಂತ ಸುದ್ದಿಯ ಮಾಡೋ ಮಗನೆ

ಗಂಗಿಗೆ ಹೋಗುತಾಳೆ ಹುಲಿಗೆವ್ವ ಅಲ್ಲಿದ್ದ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ

ತನ್ನ ಸೀರೆ ಮ್ಯಾಲೆ ಬಣ್ಣದ ಗುಡಿಯ ತಣ್ಣೀರಿನ ಗಿಂಡಿ ಬಲಗೈಲಿ

ಗಂಗಿಗೆ ಹೋಗುತಾಳೆ ಈಕೆ ಅಲ್ಲಿದ್ದ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ

ಬಿಸಿನೀರಿನ ಗಿಂಡಿ ಬಲಿಗೈಲಿ ಯಿಡುಕೊಂಡು ಹಸುಮಗಳು ವಂಟಾಳೆ

ಜಳಕಕ್ಕೆ

ಗಂಗಿಗೆ ಹೋಗುತಾಳೆ ಈಕೆ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ

ಗುಡುಗ ಮಿಂಚಿನಾಗೆ ಹಡೆದವ್ವ ಬರತಾಳೆ ಹುಡುಗುಂಡುವುದು

ನೀರಿಗೆ ನಿಲ್ಲದಿರೆ

ಗಂಗೆಗೆ ಹೋಗುತಾಳೆ ಹುಲಿಗೆವ್ವ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ

ಹುಡುಗರ ಎದುರಿಗೆ ನಿಲದಿರೆ ಬಾಳೆಯ ಜೂಜಾಡಿ

ಬರುತಾಳೆ

ಗಂಗಿಗೆ ಹೋಗುತಾಳೆ ಈಕೆ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ,

ಗಾಳ್ಯಾಗ ಹೂಳ್ಯಾಗ ಹಡೆದವ್ವ ಬರುತಾಳೆ ಬಾಲರೆದರಿಗೆ

ನಿಲ್ಲದಿರೆ

ಗಂಗಿಗೆ ಹೋಗುತಾಳೆ ಈಕೆ ಲಿಂಗವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಶೀಲವಂತರ ಮಗಳೆ

ಬಾಲರಾ ಎದುರಿಗೆ ನಿಲದಿರೇ ಹುಲಿಗೆವ್ವ

ಬಾಳೆ  ಜೂಜಾಡಿ ಬರುತ್ತಾಳೆ

ಗಂಗಿಗೇ ಹೋಗುತಾಳೆ ಈಕೆ ಶೀಲವಂತರ ಮಗಳೆ

ಸಾನಕೆ ಹೋಗುತಾಳೆ ಈಕೆ ಲಿಂಗವಂತರ ಮಗಳೆ

ಹಡೆದವ್ವ ಬರುವಾಗ ಅಡಗತಲ್ಲಣಿಸೆ ಕುಡಿ ನೀರ

ಬಾಯಿ ಕಲಿಕ್ಯಾವೆ

ಗಂಗಿಗೇ ಹೋಗುತಾಳೆ ಈಕೆ ಲಿಂಗವಂತರ ಮಗಳೇ

ನಿಲ್ಲವ್ವ ತಾಯಿ ನೀನೆಲ್ಲಿಗೆ ಗಮನ

ಹೆಡದವ್ವ ಬರುವಾಗ ಅಡಗ ತಲ್ಲಣಿಸ್ಯಾವೆ

ಕಂಡನೀರ ಬಾಯಿ ಕಲಿಕ್ಯಾವೆ ನಿಲ್ಲೆ

ನಿಲ್ಲವ್ವ ತಾಯಿ ನೀನೆಲ್ಲಿಗೆ ಗಮನ

ಕುಡಿನೀರ ಬಾಯಿ ಕಲಿಕ್ಯಾವೆ ಹುಲಿಗೆವ್ವ

ಅಡದವ್ವ ನೀ ಬರುವ ರಬಸಾಕೆ ನಿಲ್ಲೆ

ನಿಲ್ಲವ ತಾಯಿ ನೀನೆಲ್ಲಿಗೆ ಗಮನ

ಪಾಲಿಕೆ ಪಾಲಿಕೆ ಸಾಲಿಟ್ಟು ಬರುವಾಗ

ವಾರಿಲೆ ಬಾರೋ ತಳವಾರ ನಿಲ್ಲೆ

ನಿಲ್ಲವ್ವ ತಾಯಿ ನೀನೆಲ್ಲಿಗೆ ಗಮನ

ವಾರಿ ಮೇಲೆ ಬಾರ ತಳವಾರ ಹುಲಿಗೆವ್ವ

ವಾಲೆ ಬಂಗಾರ ಜತನಾವ ನಿಲ್ಲೆ

ನಿಲ್ಲವ್ವ ತಾಯಿ ನೀನೆಲ್ಲಿಎಗ ಗಮನ

ಹೆತ್ತವ್ವನ ನೋಡೇನೆ ಒಳಗ ಪೂಜಾರಿ

ಜತ್ತೆಡ ಹೂವ ಅಗಲ್ಯಾವೆ ನಿಲ್ಲೆ

ನಿಲ್ಲವ್ವ ತಾಯಿ ನೀನೆಲ್ಲಿಗೆ ಗಮನ

ಜತ್ತೆಡ ತಾಯಿ ಎಡಹೂವ ಅಗಲ್ಯಾವೆ

ಪೂಜೆ ಮಾಡಂತ ಮಗಬಂತ ನಿಲ್ಲೆ

ನಿಲ್ಲವ ತಾಯಿ ನೀನೆಲ್ಲಿಗೆ ಗಮನ

ಬಾಲಜೋಗ್ಯಾಕಿ ಹಸದಾರೆ ಉಧೋ

ಎದ್ದಳೆ ಹುಲಿಗೆವ್ವ ಮಧ್ಯಾಹ್ನ ಆಗ್ಯಾವೆ

ಉಗ್ಗಿ ಪೊಡಗಿಕ ಬಿಸಲೇರಿ ಉಧೋ

ಉಗ್ಗಿ ಅನ್ನ ಪೊಡಗಕ ಕರಿ ಉಲಗ

ಸಿದ್ದಜೋಗಿರೇ ಹಸದಾಕಿ ಉಧೋ

ಏಳೇಳೆ ಹುಲಿಗೆವ್ವ ವ್ಯಾಳೇವು ಆದಾವೆ

ಬಾಳೆದಂಡಿಗೆ ಬಿಸಲೇರಿ ಉಧೋ

ಬಾಳೆದಂಡಿಗೆ ಬಿಸಲೇರಿ ಕರಿ ಉಲಗ

ಸಿದ್ಧ ಜೋಗ್ಯಾರೆ ಹಸದಾರೆ ಉಧೋ

ಎಲ್ಲರ ಗುಡಿ ಮುಂದೆ ಕಲ್ಲಿನ ಒಲೆಗುಂಡೆ

ಬಲ್ಲಿದವ್ವ ಹುಲಿಗೆವ್ವನ ಗುಡಿಮುಂದೆ ಉಧೋ

ಬಲ್ಲಿದವ್ವ ಹುಲಿಗೆವ್ವನ ಗುಡಿಮುಂದೆ ಉಡ್ಯಾರೆ

ಮುಂಡಾಸದ ಮೂರೊಲೆ ಗುಂಡೇ ಉಧೋ

ಮುಂಡಾಸದ ಒಲೆ ಗುಂಡೇ ಉಧೋ

ಮುಂಡಾಸದ ಒಲೆಗುಂಡೇ ಕರಿಉಲಗ

ಪಾಸಿ ಪಡಗನ ಏರಿಸ್ಯಾರೇ ಉಧೋ

ಪಾಸಿ ಅನ್ನಪಡಗ ಮ್ಯಾಕಿ ಕರಿಉಲಗ

ಒಕ್ಕಳ ವಕ್ಕಿ ಸುರಿವ್ಯಾರೇ ಉಧೋ

ಒಕ್ಕಳ ದಕ್ಕಿ ಸುರಿವ್ಯಾರೆ ಕರಿಉಲಗ

ಗಂಧದ ಕಟಗಿಲಿ ಉರಿಮಾಡಿ ಕರಿಉಲಗ

ಅಕ್ಕಿಯ ಅನ್ನ ಕುದಿವಾಗೆ ಉಧೋ

ಅಕ್ಕಿಯ ಅನ್ನ ಕುದಿವಾಗೆ ಉಧೋ

ಅಕ್ಕಿಯ ಅನ್ನ ಕುದಿವಾಗೆ ಉಧೋ

ಅಕ್ಕಿಯ ಅನ್ನ ಕುದಿವಾಗೆ ಕರಿಉಲಗ

ಕೈವೊಟ್ಟ ಮಾಡಿ ತಿರಿವ್ಯಾಳೆ ಉಧೋ

ಕೈವೊಟ್ಟ ಮಾಡಿ ತಿರಿವ್ಯಾಳೆ ಕರಿ ಉಲಗ

ಸುತ್ತಲ ಪರಿಷೆಗೆ ತೋರಿಸ್ಯಾಳೆ ಉಧೋ

ಸುತ್ತಲ ಪರಿಷೆಗೆ ತೋರಿಸ್ಯಾಳೆ ಕರಿಉಲಗ

ಕೈಯಳ ಕಂಕಣ ಬಳಿ ಇಲ್ಲ ಉಧೋ

ಅತ್ತಿಯ ಅಣ್ಣ ಹತ್ಯಾಳೆ ಹುಲಿಗೆವ್ವ

ಬಗ್ಗಿಯ ನೋಡ್ಯಾಳೆ ತನ್ನ ಪರಿಷಿ ಉಧೋ

ಉಲಿಗೆವ್ವನ ಜಾತ್ರೆಗೆ ಎಲ್ಲರು ಬಂದಾರೆ

ಮುಲ್ಲೊಬ್ಬನ್ಯಾಕೆ ಬರಲಿಲ್ಲ ಕರಿಉಲಗ

ಯಲ್ಲಗ ಜಗವ ಹೊರಿಸ್ಯಾಳೆ ಉಧೋ

ಆರ ಮಾನದಕ್ಕಿ ಓರಿ ಮ್ಯಾಲಾಕೆಂದೆ

ಆಯ ಒಳ್ಳ ಒತ ಎಳಕಂದೆ ಉಧೋ

ಆಯುವಳ್ಳ ಒತ್ತ ಎಳಕಂಡೆ ಕರಿಉಲಗ

ಮಾಡಿ ಬರದೇನೆ ಮನದರಿಕೆ ಉಧೋ

ಅತ್ತಮಾನದಕ್ಕಿ ಎತ್ತಿನ ಮ್ಯಾಲಿರಿಕೆಂಡೆ

ಒಪ್ಪುಳ್ಳ ಒತ್ತ ಎಡಕಂದೆ ಕರಿಉಲಗ

ಒಪ್ಪಿಸಿ ಬರದೇನೆ ಮನದರಿಕೆ ಉಧೋ

ಸುವ್ವಾ ಸುವ್ವಾಲೆ ಸುವ್ವಾ ಸುವ್ವಾಲೆ

ಬರುತರೆ ಕರಿಉಲಗಗೆ ಬರತಾರೆ ಕರಿಉಲಗಕೆ

ಸೆರಗಿನ ಬಣ್ಣ ತರುತಾರೆ ನೀಬಾರವ್ವ

ಬಿಳಿಯ ಬಿಳಿಯ ದೊರೆ ಬಿಳಿಯ ಮುಂಡಾಸು ದೊರೆ

ಬಳ್ಳಾರಿ ನಡುವೆ ಬರುತಾರೆ ನೀ ಬಾರವ್ವ

ಬಳ್ಳಾರಿ ನಡುವೆ ಬರುತಾರೆ ಕರಿಉಲಗಗೆ

ಬೆಳ್ಳಿಯ ಬಳೆಗಳ ತರುತಾರೆ ನೀ ಬಾರವ್ವ

ಕರಿಯ ಕರಿಯಾ ದೊರೆ ಕರಿಯ ಮುಂಡಾಸು ದೊರೆ

ಈರ್ಕ್ಯಳ್ಳದ ನಡುವೆ ಬರುತಾರೆ ಕರಿಉಲಗೆಗೆ

ಕುಂಕಮದ ಭರಣಿ ತರತಾರೆ ನೀ ಬಾರವ್ವ

ಕೆಂಪ ಕೆಂಪ ದೊರೆ ಕೆಂಪ ಮುಂಡಾಸು ದೊರೆ

ಕಂಪ್ಲಿ ನಡುವೆ ಬರುತಾರೆ ನೀ ಬಾರವ್ವ

ಕಂಪಲಿ ನಡುವೆ ಬರುತಾರೆ ಕರಿಉಲಗೆಗೆ

ಉಡಿಯ ಸಾಮಾನ ತರುತಾರೆ ನೀ ಬಾರವ್ವ

ಪರಿಯ ಪರಿಯ ದೊರೆ ಪರಿಯ ಮುಂಡಾಸು ದೊರೆ

ಪರಿಯಂಗದ ದೊರೆ ಬರುತಾರೆ ಕರಿ ಉಲಗಕೆ

ಮುತ್ತಿನ ದಂಡಿ ತರುತಾರೆ ನೀ ಬಾರವ್ವ

೬

ಗಂಡರಿಲ್ಲದ ಗಯ್ಯಾಳಿ ರಂಡೆ

ಗಂಡರನ ತೊರೆ ಗಯ್ಯಾಳಿ ರಂಡೆ ರಾಮು ರಾಮು

ಪರಶುರಾಮನು ತಾಯಿ ಹುಲಿಗೆಮ್ಮನನ್ನು ತನ್ನ ಅಪ್ಪನನ್ನು

ತೋರಬೇಕೆಂದು ಹಾಡುವ ಪದ

ನೋಡೆಂದಳು ಮಾಯೆ

ಮುಂದಲ ಕೊಡ ಒಡಿದ ಪರಶುರಾಮ ನೋಡೆಂದಳು ಮಾಯೆ

ಚದರಿಯ ಕೊಡಕ ರಾಮ ಬಿಲ್ಲಿಸಿಡದ ನೋಡೆಂದಳು ಮಾಯೆ

ಗಂಡಗುಟದೋನೆ ಪರಶುರಾಮ ಮಿಂಡಗುಟದೋನೆ ನೋಡೆಂದಳು ಮಾಯೆ

ಗಂಡಗುಟ್ಟದೋನೆ ಪರಶುರಾಮ ಮಿಂಡಗುಟದೋನೆ ನೋಡೆಂದಳು ಮಾಯೆ

ಅಕ್ಕನರಿಲ್ಲವನೆ ಪರಶುರಾಮ ತಂಗಿಯರಲ್ಲದವನೆ ನೋಡೆಂದಳು ಮಾಯೆ

ಗಯ್ಯಾಳಿ ತಂದೆ ಪರಶುರಾಮ ಅಂತರಿಲ್ಲಿದೋಗ್ಯಾನೆ ನೋಡೆಂದಳು ಮಾಯೆ

ಅಲ್ಲಿದ್ದ ಪರಶುರಾಮ ಓಡಿಕೊಂಡು ತಾಯಿ ಮನೆಗೆ ಬಂದ ನೋಡೆಂದಳು ಮಾಯೆ

ಯೇ ಯವ್ವ ಯವ್ವ ಅಪ್ಪನ ತೋರವ್ವ ನೋಡೆಂದಳು ಮಾಯೆ

ಇಲ್ಲದಪ್ಪನ ಎಲ್ಲಿಂದ ತೋರಲೋ ನೋಡೆಂದಳು ಮಾಯೆ

ಅಪ್ಪ ಇಲ್ಲದ್ರೆ ಅವ್ವ ಮೂಗಿನ ಮ್ಯಾಲೆ ಮ್ಯೋತಿ ಮೂಗುತ್ಯಾಕೆ ನೋಡೆಂದಳು ಮಾಯೆ

ಅಪ್ಪ ಇಲ್ಲದ್ರೆ ಹುಲಿಗೆವ್ವ ಕೊಳ್ಳೊಳ ತಾಳ್ಯಾಕೆ ನೋಡೆಂದಳು ಮಾಯೆ

ಗುಡ್ಡಕೋಗಿದ್ದೆ ಗುಡ್ಡದಲಿ ಗೊನೆ ಮುಳ್ಳು

ಗುಡ್ಡಕೋಗಿದ್ದೆ ಗುಡ್ಡದಲಿ ಗೊನೆ ಮುಳ್ಳು ತುಳಿದಿದ್ದೆ ನೋಡೆಂದಳು ಮಾಯಿ

ಗುಡ್ಡದ ಮುಳು ಸೋಕೆ ನಿನ್ನ ಹಡಿದೋನೋ ನೋಡೆಂದಳು ಮಾಯಿ

ನನ್ನನ್ನ ಹಡೆದಂಗೆ ಯವ್ವ ತಂಗಿ ನಡಿಯವ್ವ ನೋಡೆಂದಳು ಮಾಯಿ

ತಂಗಿ ನಡೆದರೆ ಎತ್ತಿ ಮುದ್ದನಾಡತೀನಿ ನೋಡೆಂದೆಳು ಮಾಯಿ

ಹಳ್ಳಕ ಹೋಗಿದ್ದೆ ಹಳ್ಳ ಮುಳ್ಳು ತುಳಿದಿದ್ದೆ ನೋಡೆಂದಳು ಮಾಯಿ

ಅದು ಯಂತಳ್ಳವ್ವ ಅದು ಯಂತ ಮುಳ್ಳವ್ವ ನೋಡೆಂದಳು ಮಾಯಿ

ಹಳ್ಳದಾಗ ಬರುವಾಗ ಅಗಸಾನ ತೋರವ್ವ ನೋಡೆಂದಳು ಮಾಯಿ

ಅವನಗಪ್ಪಂದೆ ನಾನು ಕರೆದನೆ ನೋಡೆಂದಳು ಮಾಯಿ

ಗುಡ್ಡಕ ಹೋಗಿದ್ದೆ ಗುಡ್ಡದ ಮುಳ್ಳ ತುಳಿದಿದ್ದೆ ನೋಡೆಂದಳು ಮಾಯಿ

ಅದೆಂತ ಗುಡ್ಡವ್ವ ಅದು ಯಂತ ಮುಳ್ಳವ್ವ ನೋಡೆಂದಳು ಮಾಯಿ

ಗುಡ್ಡದಾಗ ಇರುವ ಒಡ್ಡನ ತೋರವ್ವ ನೋಡೆಂದಳು ಮಾಯಿ

ಒಡ್ಡಗ ಅಪ್ಪೆಂದೆ ನಾನೆ ಕರೆದೇನೆ ನೋಡೆಂದಳು ಮಾಯಿ

ಬಾಳೆಯ ವನದಾಗ ಬಾಳಿಗೋ ಗಿನೋ ನೋಡೆಂದಳು ಮಾಯಿ

ಬಾಳೆಯ ಸೋಕಿ ನಿನ್ನ ಹಡಿದಿನೋ ನೋಡೆಂದಳು ಮಾಯಿ

ನನ್ನ ಹಡೆದಂಗೆ ಇನ್ನೊಂದಡಿಯವ್ವ ನೋಡೆಂದಳು ಮಾಯಿ

ನಿಂಬೆಯ ಗಾಳಿ ಸೋಕಿ ನಿನ್ನ ಹಡಿದಿನಿ ನೋಡೆಂದಳು ಮಾಯಿ

ನನ್ನ ಹಡಿದಾಗ ಇನ್ನೊಂದ ಹಡಿಯವ್ವ ನೋಡೆಂದಳು ಮಾಯಿ

ತಂಗಿನನ ಹಡದೆರೆ ತಾಯಿ ಅಡವಿಗೋಗ್ಯಾಳೆ ನೋಡೆಂದಳು ಮಾಯಿ

ಆಗ ಪರಶುರಾಮ

ಆಸ ಬಿಂಡಿ ಮ್ಯಾಲೆ ಬೀಜ ಬಿತ್ತವ್ವ ನೋಡೆಂದಳು ಮಾಯಿ

ಆಸ ಬಂಡಿ ಮ್ಯಾಲೆ ಬೀಜ ಬಿತ್ತಿದರೆ ಹುಲಿಗೆವ್ವ ಸಿಸಯ

ಬರಬೇಕು ನೋಡೆಂದಳು ಮಾಯಿ

ಸಸಿಯ ಬಂದರೆ ಹಡದವ್ವನೆಂದೆನೆ ನಿನ್ನ ನೋಡೆಂದಳು ಮಾಯಿ

ಆಸಬಂಡಿಮ್ಯಾಲೆ ಬೀಜ ಬಿತ್ತಿದರೆ ಸಸಿಯ ನಾಟ್ಯಾವೆ ನೋಡೆಂದಳು ಮಾಯಿ

ಸಸಿಯ ನಾಟದರೆ ಇನ್ನೊಂದು ಮಾಡಬೇಕು ನೋಡೆಂದಳು ಮಾಯಿ

ಅಂಗೈ ಒಳಮಾಡಿ ಮುಂಗೈ ಒನಕೆ ಮಾಡಿ ನೋಡೆಂದಳು ಮಾಯೆ

ಒಕ್ಕಳವನೊಲ್ಲೆ ಅಕ್ಕಿ ಮಾಡೆ ನೋಡೆಂದಳು ಮಾಯೆ

ಒಕ್ಕಳವ ನೊಲ್ಲೆ ಅಕ್ಕಿ ಮಾಡೆ ನೋಡೆಂದಳು ಮಾಯೆ

ಒಕ್ಕಳದನೊಲ್ಲನ ಹುಲಗೆವ್ವ ಅಕ್ಕಿಯ ಮಾಡ್ಯಾಳೆ

ನೋಡೆಂದಳು ಮಾಯೆ

ಅಕ್ಕಿಯ ಮಾಡಿದ ರಾಮ ಎಲ್ಲೆಲ್ಲಿ ಒಪುವಲ್ಲ ನೋಡೆಂದಳು ಮಾಯೆ

ತಾಯಿ ಮುಂಗೈ ಸೆಳೆದು ರಾಮ ಹಿಡಿದಿಡಿದೆಳೆತಾನೆ ನೋಡೆಂದಳು ಮಾಯೆ

ಅತಗತ ಕರಕಂತ ಹುಲೆಗವ್ವ ಅಡವಿಗೋಗ್ಯಾಗಳೆ

ನೋಡೆಂದಳು ಮಾಯೆ ನೋಡೆಂದಳು ಮಾಯೆ

೭

ಸೋಮಲಿಂಗ ನಾನು ಉಡಕ್ಕಿ ತರತನಕ ನಿನಗೆ ಕಂಕಣ

ಕಟ್ಬಬಾರದು ನೋಡವ್ವ ಅಂತೇಳಿ ವರ್ಷಾತಿ ಹುಲಿಗೆವ್ವನ

ಕಂಕಣ ಕಟ್ಬದರೆನ ಮುಂಚೆ ಸ್ವೋಮಲಿಂಗ ಉಡಕ್ಕಿ ಕಳಿಸತಾನ

ಆತನ ಉಡಕ್ಕಿ ಬಂದಮ್ಯಾಲೆನೆ ಹುಲಿಗೆವ್ವಗ ಕಂಕಣ ಕಟ್ಬದು

ಆಕಿ ಮಾನ್ಯ ಪಡಕಂಡವಳ ಈಕೆ ಪರಿಷಿ ಪಡಕಂಡಳ

ಹುಲಿಗ್ಯಾಗಿರುವ ಹುಲಿಗೆಮ್ಮ ಹೊಳೆದಂಡಿರುವ ಹೊಸೂರಮ್ಮ

ಹುಲಿಗ್ಯಾಗಿರುವ ಹುಲಿಗೆವ್ವ ಹೊಳಿದಂಡಿರುವ ಹೊಸೂರವ್ವ

ಇಬ್ಬರ ನಡುವೆ ಹರಿಯತಾಳೆ ಗಂಗಾಭದ್ರೆ ಗಂಗಮ್ಮ

ಪ್ರೀತಿ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹೊಸೂರಮ್ಮ

ಭಕ್ತಿಗೆ ಬಂದ ಭಕ್ತರನ್ನೆಲ್ಲ ಬಿಡದೆ ತಾಯಿ ಹುಲಿಗೆವ್ವ

ಅಲ್ಲಿಗೆಲ್ಲಿ ಜಗಹೊರಿಸಿ ಮುಲ್ಲಾಗೆಲ್ಲಾ ಸೀರೆ ಉಡಿಸಿ

ಮುಲ್ಲಾಗೆಲ್ಲಾ ಸೀರೆ ಉಡಿಸಿ ದೇಶದ ಮ್ಯಾಲೆ ಮೆರಿಸ್ಯಾಳೆ

ಮುಲ್ಲಗ ಜಗವ ಹೊರಿಸ್ಯಾಳೆ ಕಾಲಿಗೆ ಗೆಜ್ಜೆ ಕಟಿಸ್ಯಾಳೆ

ಕಾಲಿಗೆ ಗೆಜ್ಜಿ ಕಟ್ಟಿಸ್ಯಾಳೆ ತನ್ನ ಮನಸ್ಸಿಗೆ ಬಂದುಗೆ ಕಟಿಸ್ಯಾಳೆ

ಪ್ರೀತಿಗೆ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹುಲಿಗೆಮ್ಮ

ಭಕ್ತಿಗೆ ಬಂದ ಭಕ್ತರನೆಲ್ಲ ಬಿಡನೆ ತಾಯಿ ಹುಲಿಗೆವ್ವ

ಗಾಡಿ

ಗಾಡಿಯ ಹೊಡಿಯ ಮಸ್ತಾನ ಉಧೋ ಉಧೋಂದು ಬರುತಾರೆ

ಉಧೋ ಉಧಂದು ಬರುತಾರೆ ಹುಲಿಗೆವ್ವ ಭಕ್ತರು ಬಂದಾರೆ

ಪ್ರೀತಿಗೆ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹುಲಿಗೆವ್ವ

ಮನಸ್ಸಿಗೆ ಬಂದ ಭಕ್ತರನೆಲ್ಲ ಬಿಡನೆ ತಾಯಿ ಹುಲಿಗೆವ್ವ

ಉಧೋ ಉಧಂದು ಬರುತಾರೆ ಹೊಳಿಯಾಗೆ ಅವರು ಮುಸಿಗ್ಯಾರೆ

ರಾಸಿಲ್ಲದ ಮೀಸೆ ಬಳಿಸ್ಯಾಳ, ತನ್ನ ದೇಶದ ಮ್ಯಾಲೆ ಮೆರಿಸ್ಯಾಳೆ

ರಸ ರಸದ ಮೀಸೆ ಬಳಿಸ್ಯಾಳ ತನ್ನ ದೇಶದ ಮ್ಯಾಲೆ ಮೆರಸ್ಯಾಳೆ

ಪ್ರೀತಿಗೆ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹುಲಿಗೆವ್ವ

ಭಕ್ತಿಗೆ ಬಂದ ಭಕ್ತರನೆಲ್ಲಿ ಬಿಡನೆ ತಾಯಿ ಹುಲಿಗೆವ್ವ

ಗಡ್ಡ ಮೀಸೆ ತೆಗಿಸ್ಯಾಳೆ ರೇಶಿಮೆ ಸೀರೆ ಉಡಿಸ್ಯಾಳೆ

ರೇಶಿಮೆ ಸೀರೆ ಉಡಿಸ್ಯಾಳೆ ದೇಶದ ಮ್ಯಾಲೆ ಮೆರಿಸ್ಯಾಳೆ

ಪ್ರೀತಿಗೆ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹುಲಿಗೆವ್ವ

ಭಕ್ತಿಗೆ ಬಂದ ಭಕ್ತರನ್ನೆಲ್ಲ ಬಿಡನೆ ತಾಯಿ ಬಿಡನೆ ತಾಯಿ ಹುಲಿಗೆವ್ವ

ರೇಶಿಮೆ ಸೀರೆ ಉಡಿಸ್ಯಾಳೆ ರೇಶಿಮೆ ಬಳೇ ತೊಡಿಸ್ಯಾಳೆ

ರೇಶಿಮೆ ಬಳೆಯ ತೊಡಿಸ್ಯಾಳೆ ತನ್ನ ಮನಸ್ಸಿಗೆ ಬಂದಂಗ ಕುಣಿಸ್ಯಾಳೆ

ಪ್ರೀತಿಗೆ ಮಾತಿಗೆ ಸೋಲುವ ತಾಯಿ ಕೇಳೇ ತಾಯಿ ಹುಲಿಗೆವ್ವ

೬

ಜಂಗ ನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಇದ್ದ ಇಲ್ಲನ ಬೇಡ ಕದ್ದ ಮುಚ್ಚಲೆ ಬೇಡ

ಎದ್ದ ಯಿದಿಮಾಯಿ ಯಿದಿಮಾಯಿ

ಜಂಗ ನೋಡ ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಎದ್ದೇ ಎದ್ದೆ ಯಿದಿಮಾಯಿ

ಯಿದ್ದದೆ ಭಕ್ತಿ ಕೆಡಿಸ್ಯಾಳೆ ಹುಲಿಗೆವ್ವ

ಜಂಗ ನೋಡ ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವನೋಡು ಕೆಂಪಿನ ದಾಸಳ

ತುಂಬಿದ ಹೊಳಿಯಾಗೆ ಯೆಂಗ ಬಂದೆವ್ವ ತಾಯಿ

ಯೆಂಗಲ ಪದಮನಣೆಯುವೆ

ಜಂಗನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಯೆಂಗಲ ಪದಮನಣೆಯುವೆ ಕಿರಿಉಲಗ

ಯೆಂಗ ಬಂದವ್ವ ಹೊಳಿಮ್ಯಾಲೆ

ಜಂಗನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಬಂದು ವಡಲಗಿ ದಂಡಿನ್ಯಾಗದಿಯಾಳೆ

ಚಂಡಾಡಿ ಮಠಕೆ ಬರಲಿಲ್ಲೆ

ಜಂಗ ನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಚಂಡಾಡಿ ಮಠಕ್ಕೆ ಬರಲಿಲ್ಲೆ ಹುಲಿಗೆವ್ವ

ಪಂಜರ ಬೆಳಕಿಲ್ಲಿ ಕರತರೆ

ಜಂಗ ನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವ ನೋಡು ಕೆಂಪಿನ ದಾಸಾಳ

ಗುಡಿಯ ಸುತ್ತಮುತ್ತಕನ ಮುವರಗಿ ನಾಕನ

ಎದರಿಕನ ಎಳಿಬೆವೆ

ಜಂಗನೋಡ ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವನೋಡು ಕೆಂಪಿನ ದಾಸಾಳ

ಎದರಿಗೆ ಯಾಕನ ಎಳಿಬ್ಯಾವೆ

ಪದವಿ ಜೂಜಾಡಿ ಬರುತಾವೆ

ಜಂಗ ನೋಡು ಜಂಗಿನ ದನಿಗ್ಯಾಳ

ತಾವಲ್ಲಾಳಿ ಹೂವನೋಡು ಕೆಂಪಿನ ದಾಸ್ಯಾಳ

ಮುತ್ತಿಗೆ ಹೋಗ್ಯಾಳೆ ಜರಮ್ಯಾಲಿ ಸೀಮೆಗೆ

ಬೆತ್ತ ತಿರುವ್ಯಾಳು ಸ್ವಾಮಿ ಗಿರಿಯ ಮ್ಯಾಲೆ

ತಾಯಿ ಅವ್ವನ ಗುಡಿಯ ಹೋಗಿ ನೋಡನು ಬಾಕಿ

ಮಾಡಿದ ಗೊಂಬೆ ನಗತಾವೆ ಮುತ್ತಿಗೆ ಹೋಗಿದ್ದಾಳೆ

ಮುತ್ತಿಗೆ ಹೋಗ್ಯಾಳೆ ಜರಮ್ಯಾಲಿ ಸೀಮೆಗೆ

ಬೆತ್ತ ತಿರುವ್ಯಾಳು ಸ್ವಾಮಿ ಗಿರಿಯ ಮ್ಯಾಲೆ

ಕೆತ್ತಿದ ಗೊಂಬೆ ನಗುತಾವೆ ಬಡಿಗೇರನ್ನ

ಕೆತ್ತದಲೆ ಮುತ್ತಿ ಬೀಗದಾನಿ ಮುತ್ತಿಗೆ ಹೋಗಿದಾಳ

ಮಾಡಿದ ಗೊಂಬ್ಯಾವ ನಗುತಾವೆ ಬಡಿಗೇರನ್ನ

ಮಾಡದಲೆ ಮುತ್ತಿ ಬೀಗದಾನಿ ಮುತ್ತಿಗೆ ಹೋಗಿದ್ದಾಳೆ

ಎತ್ತ ಉಡುವ ಸೀರೆ ಇಪ್ಪತ್ತೊಂದು ಮಳ

ಕತ್ತಿನ ಮ್ಯಾಲೆ ಕೊನೆಸೆರಗೆ ಮುತ್ತಿಗೆ ಹೋಗಿದ್ದಾಳೆ

ಕತ್ತಿನ ಮ್ಯಾಲೆ ಕೊನೆಸರಗ

ಒಬ್ಬನು ಪೂಜಾರಿ ಉಡಿಸ್ಯಾನೆ ಮುತ್ತಿಗೆ ಹೋಗಿದ್ದಾಳೆ

ವಾಲಿಯ ಪೂಜಾರಿ ಉಡಿಸ್ಯಾನೆ ಮುತ್ತಿಗೆ ಹೋಗಿದ್ದಾಳೆ

ಬೇಟೆ ಆಡಲ್ಹೋಗಿ ದಾಟ್ಯಾಳೆ ಅಳ್ಳಾವ

ತೋಟಗ್ಯಾಳಂಗ ಅರಿವ್ಯಾಳೆ ಮುತ್ತಿಗೆ ಹೋಗಿದ್ದಾಳೆ

ತೋಟಗ್ಯಾಳಂಗ ಅರಿವ್ಯಾಳೆ ಹುಲಿಗೆವ್ವ

ಬ್ಯಾಟ್ಯಾಡಳೆ ರಣದಾಗೆ ಮುತ್ತಿಗೆ ಹೋಗಿದ್ದಾಳೆ

ಗುಡುಗು ಮಿಂಚಿನಾಗ ಹಡದವ್ವ ಬರುತಾಳೆ

ಹುಡುಗರೆದುರಿಗೆ ನಿಲ್ಲುತಾಳೆ ಮುತ್ತಿಗೆ ಹೋಗಿದ್ದಾಳೆ.

ಹುಡುಗರೆದುರಿಗೆ ನಿಲ್ಲದಿರಲು ಹುಲಿಗೆಮ್ಮ

ಬಾಳೆಯ ಜೂಜಾಡುತಾಳೇ ಮುತ್ತಿಗೆ ಹೋಗಿದ್ದಾಳೆ

ಅಡ್ಡಗುಡ್ಡಗ ತಳ್ಳಿ ಡಬ್ಬೆಂದು ಬರುವಾಗ

ಹುಲಿಗೆಮ್ಮ ಬರುತಾಳೆ ಮುತ್ತಿಗೆ ಹೋಗಿದ್ದಾಳೆ

ಹುಲಿಗೆವ್ವ ಒಬ್ಬಾಕೆ ಬರುವಾಗ ಗುಡ್ಡದ ಕಬ್ಬಕ್ಕಿ ಕೈ ಮುಗಿದಾವೆ ಮುತ್ತಿಗೆ ಹೋಗಿದ್ದಾಳೆ

ಮುತ್ತಿಗೆ ಹೋಗ್ಯಾಳೆ ಜರಮ್ಯಾಲಿ ಸೀಮ್ಯಾಗೆ

ಬೆತ್ತ ತಿರುವ್ಯಾಳು ಸ್ವಾಮಿ ಗಿರಿಯ ಮ್ಯಾಲೆ

ತಾಯಿ ಅವ್ವನ ಗುಡಿಯ ಹೋಗಿ ನೋಡನು ಬಾರೆ

ಮಾಡಿದ ಗೊಂಬೆ ನಗತಾವೆ ಮುತ್ತಿಗೆ ಹೋಗಿದ್ದಾಳೆ

ಮುತ್ತಿಗೆ ಹೋಗ್ಯಾಳೆ ಜರಮ್ಯಾಲಿ ಸೀಮ್ಯಾಗೆ

ಬೆತ್ತ ತಿರುವ್ಯಾಳು ಸ್ವಾಮಿ ಗಿರಿಯಮ್ಯಾಲೆ

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಹೂವಿನೊಳಗ ಅಡಗಿಯೇನು, ಮಗ್ಗಿಯೊಳಗ ಅಡಿಗಿಯೇನು

ಹೂವಿನಾರ ಮಗ್ಗನಾರ ಹುಡುಕ್ಯಾರ ಬರಲೇನು

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಕಾಯಿಯೊಳಗ ಅಡಗಿಯೇನು, ಕರ್ಪೂರದಾಗ ಅದಿಯೇನು

ಕಾಯಿಯಾಗ ಕರ್ಪೂರದಾಗ ಹುಡುಕ್ಯಾರ ಬರಲೇನು

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಸವದತ್ತಿ ಎಲ್ಲಮ್ಮ, ಗುಡ್ಡಪುರದ ತಾಯಮ್ಮ

ಮೈಸೂರು ಕ್ಷೇತ್ರದ ಚಾಮುಂಡಿ ತಾಯಿ ನೀನು

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ನಾಗಜೋಗಿ ಬಸವಜೋಗಿಗೆ ಪ್ರಾಣ ನೀಡಿದ ತಾಯಿ ನೀನು

ಹೋಗುವ ರೈಲನ್ನು ನಿಲ್ಲಿಸಿದ ಮಾತಾಯಿ

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಶೃಂಗೇರಿ ಶಾರದಾಂಬೆ ಕೊಲ್ಲೂರು ಮೂಕಾಂಬೆ

ಮುದ್ದಮ್ಮ ತಾಯಿಯ ಮುದ್ದಿನ ಮಗಳು ನೀನು

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಐದನೆಯ ಶತಮಾನದಲ್ಲಿ ಧರೆಗಿಳಿದ ದೇವತೆ ನೀನು

ಉಧೋ ಉಧೋ ಎಂದ ಜನರಿಗೆ ಭಂಡಾರ ಧರಿಸಿದ ತಾಯಿ

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ತುಂಗ ಮತ್ತು ಹೊಸಪೇಟೆ ಬೆಳೆದಿರುವ

ಬೆಳೆದಿರುವ ಹುಲಿಗಿಯ ಕ್ಷೇತ್ರ

ಹುಲಿಗಿಯ ಕ್ಷೇತ್ರದ ಹುಲಿಗೆಮ್ಮ ತಾಯಿ ನೀನು

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ತುಂಗಭದ್ರ ನದಿಯಂದು ಜಿಗಿದು ಪಾದ ಹೋಕೆ ತೋರಿದ ತಾಯಿ

ಭಕ್ತರೋದ್ಧಾರಕ್ಕಾಗಿ ಭಕ್ತಳಾಗಿ ನಿಂತ ತಾಯಿ

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಭಕ್ತರ ಮನೆಯೊಳಗ ಹುಲಿಗೆಮ್ಮನ ಆಗಮನ

ಮಮತೆಯ ಮಾತಾಯಿ ಮನೆತನಕ ಬರುವಾಗ

ಎಷ್ಟು ಧ್ಯಾನ ಮಾಡಲಮ್ಮ

ತಾಯಿ ಹುಲಿಗೆಮ್ಮ

ಅಂಗಾಲ ಕಟ್ಟಿಗ್ಗೆ ಹೋಗ್ಯಾನೆ ಮಾದಿಗರ ಹುಡುಗ

ಹುಡಿಗ್ಯಾಗ್ಯೋಗ್ಯಾಳೇ ಹುಲಿಗೆಮ್ಮ ಸುವ್ವೆ

ಹುಡಿಗ್ಯಾಗೋಗ್ಯಾಳೇ ಹುಲಿಗೆಮ್ಮ ಮಾದಿಗರ ಹುಡುಗ

ಬರುತೇನೆಲೆ ಹುಡುಗಿ ನನ್ನಿಂದೇ ಸುವ್ವೆ

ಒಟ್ಟಿಗೆ ದಿನ ನಡಿಸ್ಯಾಳೆ ಮೆಯಿಗೆ ಬಟ್ಟೆನ ನಡಿಸಿ

ಬರುತಿನಲೆ ಹುಡುಗ ನಿನ್ನಿಂದೆ ಸುವ್ವೆ

ಮುಂದೆ ಮುಂದೆ ಮಾದಿಗರ ಹುಡುಗ

ಹಿಂದೆ ಹಿಂದೆ ಹುಲಿಗೆಮ್ಮ ವಂಟ್ಯಾಳ ಮಾದಿಗನ ಅರಮನೆಗೆ ಸುವ್ವೆ

ಅವ್ವವ್ವ ನೀ ಕೇಳೇ ಹಡೆದವ್ವ

ನಿನ್ನ ಸಸಿಗೆ ಕೊಡವ್ವ ಸುವ್ವೆ

ಬಂಗಾರ ಗಿಂಡಿಗೆ ಪನ್ನೀರ ತಗೆಂಡೆ

ಹಿಡಿಯವ್ವ ನನ್ನ ಸಸಿಯೆ ಹಿಡಿಸೀರೆ ಸುವ್ವೆ

ನೀರಗಲ ಯಿಸಕಂಡೆ ಕಲಸಿಕೆ ಕಂಡೆ

ವಂಟಳ ಮಾದಿಗನ ಅರಮನೆಗೆ ಸುವ್ವೆ

ಅವ್ವವ್ವ ನೀಕೇಳೆ ಹಡದವ್ವ ನೀಕೇಳೆ

ಬೇಗದಲಿ ಅಡುಗೆ ಮಾಡವ್ವ ಸುವ್ವೆ

ಆದವಡಗಿಯ ಕೆಂಡವ ಬಿಸಿ ನೀರೆ

ಏಳಪ್ಪ ಮಗನೆ ಊಟಕ್ಕೆ ಸುವ್ವೆ

ಅವ್ವವ್ವ ನೀಕೇಳೆ ಹಡದವ್ವ ನೀ ಕೇಳೆ

ನಿನ ಸೊಸಿಗೆ ಊಟ ನೀಡವ್ವ ಸುವ್ವೆ

ನಿನ್ನೆ ಕುಡಿದ ನೀರೆ ಮನ್ನೆ ಉಂಡ ಬಾನ

ಹಸವಿಲ್ಲ ಅದಕೆ ಉಣವು ಸುವ್ವೆ

ಅಪ್ಪಪ್ಪ ನೀಕೇಳೆ ಮಗನೇ ಕೇಳಪ್ಪ ಮಗನೆ

ಹಸವಿಲ್ಲದಕ್ಕೆ ಉಣವು ಸುವ್ವೆ

ಅಪ್ಪಪ್ಪ ನೀಕೇಳೆ ಮಾಗನೇ ಕೇಳಪ್ಪ ಮಗನೆ

ಅಸವಿಲ್ಲಂತೆಪ್ಪ ಮಡದಿಗೆ ಸುವ್ವೆ

ಅವ್ವವ್ವ ನೀಕೇಳೇ ನೀಕೇಳೆ

ನಿನ್ನ ಸೊಸಿ ತಲಿಯ ಬಾಚಪ್ಪ ಸುವ್ವೆ

ಕಂಚಿನ ಬಟ್ಟಲಿಗೆ ಮಿಂಚನ್ನೆ ತಳೆದವ್ವ

ಬಾರವ್ವ ನನ್ನ ಸೊಸಿಯೆ ತಲಬಾಚೆ ಸುವ್ವೆ

ತಲಿಗಾನ ಬಾಚಿಕಂಡೆ ಕೈಕಾಲು ತಳಕಂಡೆ

ವಂಟಾಳ ಹುಲಿಗೆವ್ವ ನಡಮನಿಗೆ ಸುವ್ವೆ

ವಂಟಾಳ ಹುಲಿಗೆವ್ವ ನಡುಮನಿಗೆ ಮಾದ್ಯಾರ ಹುಡಿಗೆ

ಮಂಚಾದ ಮ್ಯಾಲೆ ಸುಖ ನಿದ್ರೆ

ಮಂಚಾದ ಮ್ಯಾಲೆ ಸುಖ ನಿದ್ರೆ ಮಾಡುವಾಗ

ಯಾವಾಗ ಮುರಿಯಲೆ ಯಮ್ಮದಳಾ ಸುವ್ವೆ

ಒಂದೇನೆ ಬಗಿಗಳೇ ಬಗಿದಾಳೆ ಯಾಕಿನ್ನ

ಒಂದೇ ಬಗಿಗಿನ್ನ ಕಾಳಿಂಗಾ ಸುವ್ವೆ

ಎರಡನೆ ಬಗಿಗಳೆ ಬಗುದಾಳೆ

ಎರಡನೆ ಬಗಿನ್ನ ಕಣ್ಣುಗಳೇ ಸುವ್ವಿ

ಅದಿರಿಯ ನಮ್ಮತ್ತೇ ಬೆದರಿಯ ನಮ್ಮತ್ತೆ

ನೆಲೆಮ್ಯಾಲೆ ಅಚ್ಚಿಯ ತಲೆಬಾಚಿ ಸುವ್ವೆ

ಅವ್ವವ್ವ ನೀಕೇಳೆ ಹಡೆದವ್ವ ನೀ ಕೇಳೆ

ನಿನ್ನ ಕೈಯಾಗೆ ಬಳೆಯ ಯಿಡಿತೀನಿ ಸುವ್ವೆ

ಅಪ್ಪಪ್ಪ ನೀಕೇಳೋ ಮಗನೆ ನೀಕೇಳೋ

ಯಿಂದೇಳು ನಕಾಲ ಬರುತಾವೋ ಸುವ್ವೆ

ಯಿಂದೇಳು ನಕಾಲ ಬರುತಾವೋ ಬಳಿಗೇರನ್ನ

ಮುಂದಲೋಗೆ ದಯ ಮಾಡು ಸುವ್ವೆ

ಮುಂದಲೂರಿಗೆ ದಯಮಾಡೋ

ಒಂದೆಲೆ ಒಂದಡಿಕೆ ಒಂದೇ ಗಂಡಾದ ಬಟ್ಟೆ

ಬಂದಾಳೆ ಗಂಗಮ್ಮ ನಿವಾಸದಾಗೆ

ಬಂದಾಳೆ ಗಂಗಮ್ಮ ನಿವಾಸ ಜೋ... ತಾ ಬಂದೆ

ತುಂಬಿದ ಕೊಡ್ಯೆದ ಕೊಡ ಜೋ....

ಎರಡೆಲೆ ಎರಡಡಿಕೆ ಎರಡೇ ಗಂಡಾದ ಬಟ್ಟೆ

ಬಂದಾಳೆ ಗಂಗಮ್ಮ ನಿವಾಸದಾಗೆ

ಬಂದಾಳೆ ಗಂಗಮ್ಮ ನಿವಾಸ ಜೋ... ತಾ ಬಂದೆ

ತುಂಬಿದ ಕೊಡ್ಯೆದ ಕೊಡ ಜೋ....

ಮೂರೆಲೆ ಎರಡಡಿಗೆ ಮೂರೇ ಗುಂಡಾದ ಬಟ್ಟೆ

ಬಂದಾಳೆ ಗಂಗಮ್ಮ ನಿವಾಸದಾಗೆ

ಬಂದಾಳೆ ಗಂಗಮ್ಮ ನಿವಾಸ ಜೋ...ತಾ ಬಂದೆ

ತುಂಬಿದ ಕೊಡ್ಮೆದ ಕೊಡ ಜೋ.....

ನಾಲ್ಕೆಲೆ ನಾಲ್ಕಡಿಕೆ ನಾಲ್ಕೇ ಗಂಡಾದ ಬಟ್ಟೆ

ಬಂದಾಳೆ ಗಂಗಮ್ಮ ನಿವಾಸದಾಗೆ

ಬಂದಾಳೆ ಗಂಗಮ್ಮ ನಿವಾಸ ಜೋ...ತಾ ಬಂದೆ

ತುಂಬಿದ ಕೊಡ್ಮೆದ ಕೊಡ ಜೋ....

ಐದೆಲೆ ಐದಡಿಕೆ ಐದೇ ಗಂಡಾದ ಬಟ್ಟೆ

ಬಂದಾಳೆ ಗಂಗಮ್ಮ ನಿವಾಸ ಜೋ.... ತಾ ಬಂದೆ

ತುಂಬಿದ ಕೊಡ್ಮೆದ ಕೊಡ ಜೋ....

ಅಕ್ಕ ಗಂಗಮ್ಮಗೆ ಅಕ್ಕಿಯ ಉಡಕ್ಕಿ

ನಿತ್ಯ ಮಲ್ಲಿಗೆ ನನ ದಂಡೆ ಲಿಂಗ ಸುವ್ವಯ್ಯ

ನಿತ್ಯ ಮಲ್ಲಿಗೆನೆ ನನ ದಂಡೆ ಲಿಂಗಯ್ಯ

ಕಳೆವಾರೆ ಸಿಕ್ಕನೆ ಬಂದೆ ದೊರೆಗಳ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ತಾಯಿ ಗಂಗಮ್ಮಗೆ ಕೋಟಿಯ ಉಡಕ್ಕಿ

ತೊಡ ಮಲ್ಲಿಗೆ ನನ ದಂಡೆ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ತೋಡಸಿ ಮಲ್ಲಿಗೆ ನನ ದಂಡೆ ಕಳೆವಾರೆ

ಮೇಲಾಣೆ ಬಂದೆ ಲಿಂಗ ದೊರೆಗಳ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಕೊಪ್ಪೆಯಂದಳೆ ಬಂದೆ ಬತ್ತಿಲಿ ನಿಂತಾಳೆ

ಅಕ್ಕದ ಗಂಗಮ್ಮ ಕರಕಳೇ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಅಕ್ಕನೆ ಗಂಗಮ್ಮ ಕರಕಳೆ ರಾಯರ ಮಗಳೆ

ತುಪ್ಪಿಲ್ಲದೂಟ ಮಾಡ್ಯಾಳ ಸುವ್ವಯ್ಯ

ಸುವ್ವಯ ಲಿಂಗ ಸುವ್ವಯ್ಯ

ಆವಿನಿಂದೆ ಬಂದೆ ವಾಲಿಲಿ ನಿಂತಾಳೆ

ತಾಯಿ ಗಂಗಮ್ಮ ಕರಕಳೆ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ತಾಯೆನೆ ಗಂಗಮ್ಮನ ಕರಕಳಿಸಿ ರಾಯಳೆ

ಹಾಲಿಲ್ಲದೂಟ ಉಣ್ಣಾಲೆಳೆ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಏಳ ತಂದಿಗರನ್ನ ಹಾಲುಬಾನುಂಡ ತಗಿನ

ಉಟ್ಟಯಗಲ ಮೇಲಿಟ್ಟ ಗಂಧ ಲಿಂಗ ಸುಟ್ಟಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಎಗಲ ಮೇಲಿಟ್ಟ ಗಂಧ ತಾಯಿಗಂಗಂಮ್ಮ

ತಾರಿ ಒಡೆದನು ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಮತ್ತೆ ತಂಬಿಗಾರನ ತುಪ್ಪ ಬಾನ ಉಂಡ

ಬಕ್ಕಿನ ಉಟ್ಟ ಯೇಗಲಿಲ್ಲ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಒಕ್ಕಿನ ಉಟ್ಟ ಯಾಗಲ ಅಕ್ಕ

ಗಂಗಮ್ಮನ ತಲಿ ಒಡೆದ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಆರರ ಸೇರಿದ ಕೀಳೆನಾಗರಿಗಂಟೆ

ಜಾಣ ಅಂಬಿಗನ ಅಕ್ಕಿ ಅಳೆದ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಹತ್ತತ್ತ ಸೇರಿನ ಕೊಪ್ಪ ನಾಗರಿ ಗಂಟೆ

ಜಾಣ ಅಂಬಿಗನ ಅಕ್ಕಿ ಅಳೆದ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಅತ್ತತ್ತ ಸೇರಿನ ಕೊಪ್ಪನಾಗರಿಗಂಟೆ

ಅಪ್ಪ ಅಂಬಿಗನ ಕೇಳೆ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಅಪ್ಪನೆ ಅಂಬಿಗನ ಕಿವಿಯಾನ

ಬಂದೆ ಕೆಂಚಗಡಗನ ಅಂದೆ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ಆಲದ ಮರದಡಿಯಲ್ಲಿ ಒಲೆಯಾದೆ

ಅರಿವಾಕಿ ಒಲೆಯಾಕಿ ಸೇರಿ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ವಾಲಿಯಕ್ಕಿಯ ಸಿರಿಯನ್ನದ ಮ್ಯಾಲೆ

ಮಾನರಂಡಾರಾದರ ಲಿಂಗ ಸುವ್ವಯ್ಯ

ಸುವ್ವಯ್ಯ ಲಿಂಗ ಸುವ್ವಯ್ಯ

ನಲ್ಲ ಗದ್ದಗೆ ನೀರ ಚೆಲ್ಲಿದಂಗೈದಾಗ

ಮಲ್ಲಯ್ಯನ ಮಗ ಕರಿವೀರ ತಂದೆ ನಾನು

ಕರಿವೀರ ಈರಣ್ಣ ಚೆಲ್ಲವಯ್ಯ ಮನಕ

ಮಲೆಗಳ ತಂದೆ ನಾನು

ಎನ್ನ ಚಲವಯ್ಯ ಮನಕ ಮತಿಗಳ ತಂದೆ ನಾನು

ಅದ್ದಿವಿಗೆ ನೀರು ತಿಂದಿಗಯ್ದದ ರುದ್ರಯ್ಯನ ಮಗ

ಕರಿವೀರ ತಂದೆ ನಾನು

ಎನ್ನ ರುದ್ರಯ್ಯನ ಮಗ ಕರಿವೀರ ತಂದೆ ನಾನು

ಕರಿವೀರ ಈರಣ್ಣ ತಿದ್ದಯ್ಯ ಮನಕ ಮತಿಗಳ ತಂದೆ ನಾನು

ಎನ್ನ ತಿದ್ದಯ್ಯ ಮನಕೆ ಮಲೆಗಳ ತಂದೆ ನಾನು

ಅಂಗಾಟ್ಟ ನೋಡಿದರೆ ಅಂಗಳ ಕೊಡ್ಡೆಸರೆ

ತಿಂಗಳೊಮ್ಮೆ ಹೊಸ ಮಗನೆ ತಂದೆ ನಾನು

ತಿಂಗಳೊಮ್ಮೆ ಹೊಸ ಮಗನಿ ತಂದೆ ನಾನು

ಹೊಸ ಮಗನಿ ಚಂದ್ರ ಸುರಿದೆನೆ ಬಾಲಗೊಂಡಿ

ತಂದೆ ನಾನು

ಗಾಳಿ ಗಂಧಾದ ಗಾಳಿರೋ

ಗಾಳಿಗಂಧದ ಗಾಳಿರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಗುಡ್ಡಗುಡ್ಡಾಗ ಡಬ್ಬೆಂದು ಬರುವಾಗ

ಹುಲಿಗೆವ್ವ ಒಬ್ಬಾಕೆ ಗಿಡದಾಗೆ ಬರುವಾಗ

ಗಿಡದಾಗ ಕಬ್ಬಕ್ಕಿ ಕೈ ಮುಗಿದಾವೆ

ಗಾಳಿ ಗಂಧಾದ ಗಾಳಿ ರೋ

ಅದಕೆ ಬಾಳಿ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಗುಡುಗು ಮಿಂಚಿನಾಗ

ಹಡೆದವ್ವ ಬರುತಾಳ ಹುಲಿಗೆವ್ವ

ಎದುರಿಗೆ ನಿಲದಿರೆ.

ಗಾಳಿ ಗಂಧಾದ ಗಾಳಿ ರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಹುಡುಗರ ಎದರಿಗೆ ನಿಲದಿರೆ

ಹುಲಿಗೆವ್ವ ಬಾಳೆ ಜೂಜಾಡಿ ಬರುತಾಳೆ

ಗಾಳಿ ಗಂಧಾದ ಗಾಳಿ ರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೂಜು ಮಾಡು

ಗಾಳ್ಯಾಗ ದೂಳ್ಯಾಗ ಗಾಳೆಮ್ಮ

ಬರುತಾಳೆ ಬಾಲರೆದರಿಗೆ ನಿಲದಿರೆ

ಗಾಳಿ ಗಂಧಾದ ಗಾಳಿ ರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ವಾನರ ಎದರಿಗೆ ನಿಲದಿರೆ ಗಾಳೆಮ್ಮ

ಬಾಳಿಯ ಜೂಜಾಡಿ ನಿಲತಾಳೆ

ಗಾಳಿ ಗಂಧ ಗಾಳಿರೋ

ಅದಕೆ ಬಾಳ ಬಂದಾನ ಬೀಗೆ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಅಲ್ಲವಳೆ ನನ್ನವ್ವ ಇಲ್ಲಿವಳೆ ನನ್ನವ್ವ

ಅಲ್ಲಿರಕ ಬರುದ ಒಳಗಿನ

ಗಾಳಿ ಗಂಧಾದ ಗಾಳಿರೋ

ಆದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಬೆಳ್ಳಿನ ದುರಗವ್ವ ದಂಡಿ ತಾರಮ್ಮ

ಬಯಲಾಗೆ

ಗಾಳಿ ಗಂಧಾದ ಗಾಳಿರೋ

ಅದಕ್ಕೆ ಬಾಳೆ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ದಂಡೆನೆ ತಾರಮ್ಮ ಬಯಲಾಗೆ

ಹುಲಿಗೆಮ್ಮ ಗಂಡಗಾರುತಿ ಬೆಳಗ್ಯಾಳ

ಗಾಳಿ ಗಂಧಾದ ಗಾಳಿ ರೋ.

ಅದಕ್ಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಎತ್ತವ್ವ ಇರುವಾಗ ಗೊತ್ತೆನೆ

ಮಾಗ್ಯಾಳೆ ಅತ್ತಿಯ ಮರದ

ನಡಗದ್ದೆ/

ಗಾಳಿ ಗಂಧಾದ ಗಾಳಿ ರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತೆಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಅತ್ತಿಯನ್ನ ಮರದ ನಡಗದ್ದೆ

ಕಡಕೇರಿ ಹೊತ್ತಿ ಜಲದುರ್ಗ ಶಿವಪೂಜೆ

ಗಾಳಿ ಗಂಧಾದ ಗಾಳಿ ರೋ

ಅದಕ್ಕೆ ಬಾಳ ಬಂದಾನ ಬೀಗ

ಕೀಲಿಯು ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಸ್ವಾತಿಯ ಮಳೆಯಾಗ ಏತಿದ್ದೆ

ಹುಲಿಗೆವ್ವ ಟೋಪ ಟೋಪೆಲ್ಲ

ಎಳೆಗಾಯಿ

ಗಾಳಿ ಗಂಧಾದೆ ಗಾಳಿ ರೋ

ಅದಕೆ ಬಾಳ ಬಂದಾನ ಬೀಗ

ಕೀಲಿಯ ತಗಿಯ ಪರದಾಡಿ

ಪೂಜಾರಿ ಗಾಲಿಯ ರೋಜು ಮಾಡು

ಬಾಲರಾಮನ /

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಎಲ್ಲವಗೆ

ಇದ್ದ ನೀರನ್ನ ಕಂಡೆ

ಬಂದೆ ಆಟ ಬ್ಯಾಡ ಮನಿಯಾಗ

ದೊಡ್ನರೆ ಪೂಜ್ಯಾಗೆ ತಡವಾಗೆ

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಗುಡ್ಡದ ಎಲ್ಲಮಗೆ

ಕಾಲ್ ಮ್ಯಾಲಿ ನೀರಾ ಕ್ಯಂಡ ಬೇಗೆ

ಬಾ ಪೂಜಾರಿ ಕಾದಾಟ ಬ್ಯಾಡ

ಮನಿಯಾಗೆ

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಗುಡ್ಡದ ಎಲ್ಲವಗೆ

ಎಳೆ ಮಗಳೆ ಹುಲಿಗೆವ್ವ

ಎಳೆಗಾಳಿ ನೀರಿಕಂಡೆ

ಒಳಗೆ ಹೊಂಬಾಳಿ ಮುಳಕಂಡೆ

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಗುಡ್ಡದ ಎಲ್ಲವಗೆ

ಒಳಗೆನೆ ಹೊಂಬಾಳೆ ಮುಡಕಂಡೆ

ಹುಲಿಗೆವ್ವ ಎಳೆ ಬೇಲಿನ್ನಗೆ

ನೆನೆದಾಳೆ

ಬಾಲರಾಮನ ಜೋಗಳ ಬಾಯಿಗೆ•

ಸವದತ್ತಿ ಗುಡ್ಡದ ಗುಡ್ಡದ ಎಲ್ಲವಗೆ

ಏನ ಮಗಳೆ ಜಲದುರ್ಗ

ಎಳೆಗಾಲಿ ನೀಲಿ ಕಂಡೆ

ಒಳಗೆ ಹೊಂಬಾಳೆ ಮುಡಕಂಡೆ

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಗುಡ್ಡದ ಎಲ್ಲವಗೆ

ಒಳಗೆ ನೀ ಹೊಂಬಾಳೆ ಮುಡಕಂಡೆ

ಜಲದುರ್ಗ ಎಳೆ ಬೀಲಿನಾಗೆ ನೆನೆದಾಳೆ

ಬಾಲರಾಮನ ಜೋಗಳ ಬಾಯಿಗೆ

ಸವದತ್ತಿ ಗುಡ್ಡದ ಗುಡ್ಡದ ಎಲ್ಲವಗೆ

ಕರ್ಪೂರದಾರತಿ ಕರದಲಿ ಇಡಕಂಡು

ದೇವಿಗೆ ಬೆಳಗನು ಬಾ...

ದೇವಿಗೆ ಬೆಳಗನು ಬಾ

ಹುಲಿಗೆಮ್ಮನಿಗೆ ಬೆಳಗನು ಬಾ.... ಕರ್ಪೂರದಾರತಿ

ಉಡಿಗಳ ತುಂಬನು ಬಾ

ಹುಲಿಗೆಮ್ಮನ ಸಡಗರ ನೋಡನು ಬಾ ಕರ್ಪೂರದಾರತಿ

ರಾಸುಳ್ಳ ಮಲ್ಲಿಗೆ ಏಸುಳ್ಳ ಖ್ಯಾದಿಗೆ

ಅಮ್ಮಗೆ ಮುಡಸನು ಬಾ

ಅಮ್ಮಗೆ ಮುಡಸನು ಬಾ

ಹುಲಿಗೆಮ್ಮನ ಜಾತ್ರೆಯ ನೋಡನು ಬಾ... ಕರ್ಪೂರದಾರತಿ

ಹತ್ತು ಮುತ್ತೈದೆಯರು ಕಳಸ ಇಡಲು

ಹುಲಿಗೆಮ್ಮಗೆ ಬೆಳಗನು ಬಾ

ಹುಲಿಗೆಮಗೆ ಬೆಳಗನು ಬಾ

ಹುಲಿಗೆಮ್ಮನ ಫಲನವ ನೋಡನು ಬಾ.... ಕರ್ಪೂರದಾರತಿ

ದೇಶಕ್ಕೆ ದೇಶವೋದ ವಾಸುಳ್ಳ ಹುಲಗಿಯ

ವಾಸವ ಮಾಡನು ಬಾ

ವಾಸವ ಮಾಡನು ಬಾ

ಹುಲಿಗೆಮ್ಮನ ಪಾಯಸ ನೋಡುನು ಬಾ ಕರ್ಪೂರದಾರತಿ

ಕರ್ಪೂರದಾರತಿ ಕರದಲಿ ಇಡಕಂಡು

ದೇವಿಗೆ ಬೆಳಗನು ಬಾ...

ದೇವಿಗೆ ಬೆಳಗನು ಬಾ

ಹುಲಿಗೆಮ್ಮಗೆ ಬೆಳಗನು ಬಾ....

ಪ್ರೀತಿಯ ಮಾತಿಗೆ ಸೋಲು ತಾಯಿ

ನೋಡೆ ತಂಗಿ ಹುಲಿಗೆಮ್ಮ

ಮನಸ್ಸಿಗೆ ಬಂದ ಭಕ್ತರನೆಲ್ಲ

ಬಿಡನೆ ತಾಯಿ ಹುಲಿಗೆಮ್ಮ ಪ್ರೀತಿಯ ಮಾತಿಗೆ

ಹರೆಯದ ಹುಡುಗರ ಕರಿಸ್ಯಾಳೋ

ರೋಷಾದ ಮೀಸೆ ತಗಿಸ್ಯಾಳೋ

ರೋಷಾದ ಮೀಸೆ ತಗಿಸ್ಯಾಳೋ

ತನ್ನ ಮನಸಿಗೆ ಬಂದಂಗೆ ಕುಣಿಸ್ಯಾಳೋ ಪ್ರೀತಿಯ ಮಾತಿಗೆ

ಗಂಡಿಗೆ ಸೀರೆ ಉಡಿಸ್ಯಾಳೋ

ಹೆಣ್ಣಿಗೆ ದೋತರ ತೊಡಿಸ್ಯಾಳೋ

ಹೆಣ್ಣಿಗೆ ದೋತರ ತೊಡಿಸ್ಯಾಳೋ

ತನ್ನ ದೇಶಕ್ಕೆ ರಾನೆ ಕಳಿಸ್ಯಾಳೋ ಪ್ರೀತಿಯ ಮಾತಿಗೆ

ಎಲ್ಲಾರು ಬಂದರು ಜಾತ್ರೆಗೆ

ಮುಲ್ಲನೊಬ್ಬನ್ಯಾಕೆ ಬರಲಿಲ್ಲ

ಮುಲ್ಲನ ಅಲ್ಲಿಗೆ ಕರಿಸ್ಯಾಳೋ

ಗಡ್ಡ ಮೀಸೆ ಬೋಳಿಸ್ಯಾಳೋ ಪ್ರೀತಿ ಮಾತಿಗೆ

ಹುಲಿಗ್ಯಾಗಿರುವ ಹುಲಿಗೆಮ್ಮ

ಹೊಳೆದಂಡೆಲಿರುವ ಹೊಸೂರಮ್ಮ

ಅವರಿಬ್ಬರ ನಡುವೆ ಹರಿತಾಳ ತಾಯಿ

ಸಂತೋಷದಿಂದ ಗಂಗಮ್ಮ ಪ್ರೀತಿಯ ಮಾತಿಗೆ

ಹುಲಿಗೆಮ್ಮನ ಗುಡಿ ಮುಂದೆ ಭಂಡಾರ

ಬರುವ ಭಕ್ತರಿಗೆಲ್ಲ ಬಂಗಾರ

ಬರುವ ಭಕ್ತರಿಗೆಲ್ಲ ಬಂಗಾರ

ಅವರ ಹಣೆ ಮೇಲೆ ಇಕ್ಕಿದರೆ ಶೃಂಗಾರ ಪ್ರೀತಿಯ ಮಾತಿಗೆ

ಉಧೋ ಉಧೋ ಉಲಿಗೆವ್ವಗೆ

ಉಡಿಯೊಳು ಮಲ್ಲಿಗೆ

ತಳವಾರ ಬರುವಾಗ

ಗುಡ್ಡದ ಹೂವ ಏನವಾ ಉಧೋ...

ಅಕ್ಕಡಿಗೆ ಹುಲಿಗೆಮ್ಮ ಇಕ್ಕಡಿಗೆ ಹೊಸೂರಮ್ಮ

ನಟ್ಟ ನಡಲಿರುವ ತುಂಗಭದ್ರ ಉಧೋ...

ನಟ್ಟ ನಡುವಿರುವ ತುಂಗಭದ್ರ ಹೊಳೆಯಲ್ಲಿ

ಬೆಲ್ಲದ ಜಾತ್ರೆ ನಡಿಸ್ಯಾಳೆ ಉಧೋ...

ದೇವಿ ಪವಾಡ ಗೆಲುದಾಳೆ ಉಧೋ

ದೇವಿ ಘಟ್ಟದ ಪವಾಡ ಗೆಲುದಾಳೆ ಉಧೋ...

ಆರುಮಾನದಕ್ಕಿ ಏರಿಮೇಲೇರಿಕೊಂಡು

ಒಪ್ಪುಳ್ಳ ದೂಟ ಇಡಕಂಡು ಉಧೋ

ಒಪ್ಪುಳ್ಳ ದೂಟ ಇಡಕಂಡು ನಿನಗಿರಿಗೆ

ಒಪ್ಪಿಸಿ ಬರುವೇನು ಮನದರಿಕೆ ಉಧೋ...

ದೇವಿ ಒಪ್ಪಿಸಿ ಬರವೇನು ಮನದರಿಕೆ ಉಧೋ

ಮಾಡಿ ಬರಲೇನು ಮನದರಿಕೆ ಉಧೋ...

ಎಲ್ಲ ದೇವರ ಮುಂದೆ ಕಲ್ಲಿನ ಒಲೆಯೂಡಿ

ಬಲ್ಲಿದ ಉಲಿಗೆಮ್ಮನಿಗೆ ವಲ್ಲೆ ನಿಜವಂತೆ ಪೌಳ್ಯಾಗ

ಸೆಲ್ಯವದ ಮೂರು ವಲೆ ಊಡೆ ಉಧೋ...

ಸೆಲ್ಯವದ ಮೂರು ವಲೆ ಮ್ಯಾಲೆ

ಹೊಂಬಾಳ ಹೊಸಪೊಡುಗ ವುಳ್ಳ ಉಧೋ...

ಹೊಂಬಾಳ ಹೊಸಪೊಡುಗವುಳ್ಳ ಮ್ಯಾಲೆ

ಹಾಲುತುಪ್ಪದಲಿ ಎಗರಿದ್ದು ಉಧೋ...

ದೇವಿ ಹಾಲು ತುಪ್ಪದಲಿ ಎಗರಿದ್ದ ಉಲಿಗೆಮ್ಮ

ಗಂಧದ ಚಕ್ಕೆ ತೂಕಮಾಡಿ ಉಧೋ...

ದೇವಿಯ ಅಯ್ದು ಸೇರಿನಕ್ಕೆ ಸುರಿವ್ಯಾಣ ಉಧೋ

ಅಯ್ದು ಸೇರಿನಕ್ಕಿ ಸುರಿವ್ಯಾಣ ಪೂಜಾರಿ

ಕೈಗೆ ಕಂಕಣ ಕಟ್ಟಿದಾನೋ ಉಧೋ...

ದೇವಿ ಮ್ಯಾಲಿ ಮಲ್ಲಿಗೂವ ಸುರಿದಾನೆ ಉಧೋ...

ಜಳ ಜಳ ಕುದಿವಾಗ ಫಳ ಫಳ ಕುದಿವಾಗೆ

ಕೈಯಿಟ್ಟು ಪಾಯಸ ತಿರುವ್ಯಾನ ಉಧೋ...

ದೇವಿ ಕೈಯಿಟ್ಟು ಜನರಿಗೆ ತೋರಿಸ್ಯಾನೆ ಉಧೋ

ಕೈಯಿಟ್ಟು ತೋರಿಸ್ಯಾನೆ ಜನರಿಗೆ ಪೂಜಾರಿ

ಕಟ್ಟಿದ ಕಂಕಣ ಬಾಡಲಿಲ್ಲ ಉಧೋ

ದೇವಿ ಸುತ್ತಿದ ಮಲ್ಲಿಗೂವ ಬಾಡಲಿಲ್ಲ ಉಧೋ...

ಆಕ್ಕಾರ ಕೆಂಡಗ ಆಕ್ಕಾರ ಕೋಳಿನ ಅದರಲ್ಲಿ

ಪೂಜಾರಿ ಎಗರ್‍ಯಾನ ಉಧೋ...

ಅದರಲ್ಲಿ ಪೂಜಾರಿ ಎಗರಿದ ಹೆಜ್ಜೆಗಳು

ಹೋಗಿ ನೋಡಿದ ಜನರೆಲ್ಲ ಉಧೋ...

ಬಾರವ್ವ ಬಾರವ್ವ ಭಾಗ್ಯದ ಹುಲಿಗೆಮ್ಮ

ಬಾಳ ದಂಡೇರಿ ಶರಣಾಗಿ ಉಧೋ...

ಮ್ಯಾಲೆ ಸುರಿದಾಳೋ ಎಲ್ಲಮ್ಮ

ಕೊಳದೆಲ್ಲಮ್ಮ

ನಿನ್ನ ಚರಣ ಎತ್ತಿದ ಎಲ್ಲಮ್ಮ

ಮಂಗಳವಾರ ಮಾಯಿಕಾರತಿ

ನಿತ್ಯ ನೇಮ ಪೂಜೆ ಮಾಡಿ ಲಿಂಗ ಪೂಜೆ ಮಾಡಿ

ಲಿಗಂ ಪೂಜೆ ಮಾಡಿದಳೆಲ್ಲಮ್ಮ

ಕೊಳದೆಲ್ಲಮ್ಮ ಶಿವನ ಪೂಜೆ ಮಾಡಿದಳೆಲ್ಲಮ್ಮ

ಕೆಂಪು ಸೀರಿಯ ಉಟ್ಟು

ಹಸುರು ಕುಪ್ಪಸ ತೊಟ್ಟು

ವಜ್ರದುಳ್ಳ ಮಾಣಿಕ್ಯ ಧರಿಸಿದಳು

ಕೊಳದೆಲ್ಲಮ್ಮ ವಜ್ಜದುಳ್ಳ ಮಾಣಿಕ್ಯ ಧರಿಸಿದಳು

ಎಂಟು ಕೈಗಳೆಲ್ಲಮ್ಮ

ಭಂಡಳಾಗಿ ಇರುವೆ ತಾಯಿ

ಕೆಂಪು ಚಕ್ರ ಬೀಸುವ ಜಡೆದಿಹಳು

ಕೊಳದೆಲ್ಲಮ್ಮ ಜಪಮಾಡಿ ಕರದೋಳು ಸೆಳೆದಿಹಳು

ಬೇವಿನ ಉಟ್ಟಿಗೆ ತೊಟ್ಟು

ಗಂಧದ ಬೊಟ್ಟು ಇಟ್ಟು

ಗಂಧದ ಬೊಟ್ಟು ಇಟ್ಟು

ಜಪಮಾಡಿ ಕೈಯಲಿ ಧರಿಸಿದಳು

ಕೊಳದೆಲ್ಲಮ್ಮ ಜಪಮಾಡಿ ಕೈಯಲಿ ಧರಿಸಿದಳು

ಬಾಗಲಕೋಟೆ ಬಂಕಾಪುರದ

ಪರಿಷೆ ಬರಲಿಲ್ಲ ಎಂದು

ಗುಡ್ಡನೇರಿ ನೋಡಿದಳೆಲ್ಲಮ್ಮ

ಕೊಳದೆಲ್ಲಮ್ಮ ಕೊಳ್ಳನೇರಿ ನೋಡಿದಳೆಲ್ಲಮ್ಮ

ಬಾಗಲಕೋಟಿ ಮಲ್ಲನಗೌಡ

ಜಕ್ಕಡಿ ಬಂಡಿ ಹೊಡಸುತ ಬಂದು

ಜೋಗಳ ಬಾಯಿ ಸತ್ಯವನ ಗುಡಿಮುಂದೆ

ಕೊಳದೆಲ್ಲಮ್ಮ ಉಧೋ ಎಂದು ಶಬ್ದವ ಮಾಡಿದಳು

ದಿಕ್ಕಿನೊಳು ಶಿಸುನಾಳ ಅಣ್ಣ

ಮುಕ್ಕಣ್ಣನ ಹೊಲದಿ

ಶಿಸುನಾಳು ಗರತಿಗೆ ಒಲಿದೆಮ್ಮ

ಕೊಳದೆಲ್ಲಮ್ಮ ಶಿಸುನಾಳು ಗರತಿಗೆ ಒಲಿದೆಮ್ಮ

ಮರ್ತ್ಯ ಲೋಕದಗ ಮಾರಿ ಹುಟ್ಯಾಳ

ಕೇಳಿರಿ ಜನರೆಲ್ಲ ಕುಂತು ಕೇಳರಿ ಜನರೆಲ್ಲ

ತೆರಗ ಮುರಗ ಪಾತಾಳ ಹುಡುಕಿದರೆ

ದೇವಿ ಸಿಗಲಿಲ್ಲ ದೇವಿ ಮಾಯಿ ಸಿಗಲಿಲ್ಲ

ತೆರಗ ಮುರಗ ಪಾತಾಳ ಹುಡುಕಿದರೆ

ದೇವಿ ಹುಲಿಗೆಮ್ಮ ಸಿಗಲಿಲ್ಲ ಮರ್ತ್ಯ

ಕಾಶಿದಾರದ ಬೈತಾಳ ತೆಗೆದು

ಆದಾಳ ಕೈಯ್ಯಾಳ

ಎಲ್ಲಮ್ಮದಾಳ ಕೈಯಾರ

ಹುಲಿಗೆಮ್ಮದಾಳ ಕೈಯಾರ

ವಿಷ್ಣು ಬ್ರಹ್ಮನ ಖ್ಯಾದಿಗೆ ಮಾಡಿ

ತುರುಬಿಗೆ ಮುಡಿದಾರ

ಸೂರ್ಯಚಂದ್ರನ ವಾಲೆ ಕುದುರೆ ಮಾಡಿ

ಕಿವಿಯೊಳಗಾಕ್ಯಾಳ

ಬಸವಣ್ಣನ ಬಸಮ ಮಾಡಿ

ಹಣೆ ಮೇಲೆ ಧರಿಸಿದಳು

ಹುಲಿಗೆಮ್ಮ ಹಣೆ ಮೇಲೆ ಧರಿಸಿದಳು ಮರ್ತ್ಯ

ಹಾದ್ಯಾಗ ಹೋಗ ಹಾವನು ಹಿಡಿದು

ಜನಿವಾರ ಮಾಡಿದವಳು

ತನ್ನ ಕೊರಳೊಳ ಹಾಕಿದಳು

ಹುಲಿಗೆಮ್ಮ ತನ್ನ ಕೊರಳೊಳ ಹಾಕಿದಳು ಮರ್ತ್ಯ

ಚೋಳನು ಹಿಡಿದು

ನತ್ತವ ಮಾಡಿ

ಮೂಗಿನೊಳು ಹಾಕಿದಳು

ಉಲಿಗೆಮ್ಮ ಮೂಗಿನೋಳು ಹಾಕಿದಳು ಮರ್ತ್ಯ

ತುಂಬ ತುಂಬವ

ತೋಡೆವ ಮಾಡಿ

ಕಾಲೊಳು ಹಾಕಿದಳು

ತಾಯಿ ಹುಲಿಗೆಮ್ಮ ಕಾಲೊಳು ಹಾಕಿದಳು

ಜಗತ್ತಿನೆಲ್ಲ ಪಾದಾಕೆ ಮಾಡಿ

ಕಾಲಾಗೆ ಮೆಟ್ಯಾಳ

ಹುಲಿಗೆಮ್ಮ ಕಾಲಾಗೆ ಮೆಟ್ಯಾಳ

ಮರ್ತ್ಯ ಲೋಕದಗೆ

ಮಾರಿ ಹುಟ್ಯಾಳ

ಕೇಳರಿ ಜನರೆಲ್ಲ ಕುಂತು

ಕೇಳಿರಿ ಜನರೆಲ್ಲ

ತೆರಗ ಮುರಗ ಪಾತಾಳ

ಹುಡುಕಿದರೆ ದೇವಿ ಸಿಗಲಿಲ್ಲ

ದೇವಿ ಹುಲಿಗೆವ್ವ ಸಿಗಲಿಲ್ಲ

## ಅಧ್ಯಾಯ ಆರು

# ಹುಲಿಗೆಮ್ಮ ಇತರ ದೈವಗಳ ಸಂಬಂಧ

ಹುಲಿಗಿಯ ಆರಾಧ್ಯ ದೈವವಾದ ಹುಲಿಗೆಮ್ಮ ತನ್ನ ಕ್ಷೇತ್ರದಲ್ಲಿ ಇರುವ ಇತರ ದೈವಗಳೊಂದಿಗೆ ಸಂಬಂಧಗಳನ್ನು ಹೊಂದಿರುವುದನ್ನು ನಾವು ಕಾಣಬಹುದಾಗಿದೆ. ಹುಲಿಗೆಮ್ಮ ಅಲ್ಲಿರುವ ದೈವಗಳಾದ ಅಜ್ಜಯ್ಯ, ಮಾತಂಗಿ, ಪರಶುರಾಮ, ಮುದ್ದಮ್ಮ, ನಾಗಜೋಗಿ ಮತ್ತು ಬಸವ ಜೋಗಿ, ಮೈಲಾರ ಲಿಂಗನ ಪಾದ, ಹೊಸೂರಮ್ಮ, ಕೊರವಂಜಿ ಕಲ್ಲು ಮುಂತಾದವುಗಳ ಜೊತೆಗೆ ತನ್ನದೇ ಆದ ಸಂಬಂಧಗಳನ್ನಿಟ್ಟುಕೊಂಡಿರುವುದನ್ನು ಕಾಣಬಹುದು. ಈ ಸಂಬಂಧಗಳು ಕೆಲವು ಭಾವನಾತ್ಮಕವಾಗಿದ್ದು ಕೆಲವು ರಕ್ತ ಸಂಬಂಧಗಳನ್ನು ಹೊಂದಿರುವುದನ್ನು ಕಾಣಬಹುದು. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ಸಮುದಾಯಗಳು ಒಂದಾಗಿ ಬದುಕುವಂತೆ ಇಲ್ಲಿ ದೈವಗಳು ಸಹ ಒಂದಕ್ಕೊಂದು ಸಬಂಧಗಳನ್ನು ಕಲ್ಪಿಸಿಕೊಂಡು ಸಾಮಾಜಿಕ ವಾತಾವರಣವನ್ನು ಮೂಡಿಸಿಕೊಂಡು ನೆಲೆಸಿರುವುದನ್ನು ಕಾಣುತ್ತೇವೆ. ಈ ಸಂಬಂಧಗಳು ಕೇವಲ ಸಂಬಂಧಗಳಾಗಿರದೆ ಆಯಾ ದೈವಗಳು ಪ್ರತಿನಿಧಿಸುತ್ತಿರುವ ಸಮುದಾಯಗಳ ಒಗ್ಗಟ್ಟಿನ ವಿಷಯದಲ್ಲಿ ಇವು ಕೆಲವೊಂದು ಬಾರಿ ಕ್ರೀಯಾಶೀಲಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಈ ಕ್ರಿಯಾಶೀಲತೆ ನಿರ್ದಿಷ್ಟವಾಗಿರದೆ ಕೆಲವೊಂದು ಬಾರಿ ಎಲ್ಲಾ ಸಂದರ್ಭಗಳಲ್ಲಿಯೂ ಮುಂದುವರೆದಿರುವುದನ್ನು ಕಾಣಬಹುದು. ಈ ಮುಂದುವರಿಕೆಯು ಹುಲಿಗೆಮ್ಮ ಮತ್ತು ಇತರ ದೈವಗಳ ಆಚರಣೆ, ಜಾತ್ರೆ ಮತ್ತು ಇತರ ಪ್ರಮುಖ ಸಂದರ್ಭಗಳಲ್ಲಿ ವಿವಿಧ ಸಮುದಾಯಗಳು ಪಾಲ್ಗೊಳ್ಳುವ ಮೂಲಕ ತೋರಿಸುತ್ತವೆ. ಆ ಮುಖಾಂತರ ಜಾತ್ರೆ, ಆಚರಣೆ ಮತ್ತು ಇತರ ಪ್ರಮುಖ ಸಂದರ್ಭಗಳ ಕಾರ್ಯಕ್ರಮಗಳು ಸುಗಮವಾಗಿ ಹಾಗೂ ವೈಭವಪೂರಿತವಾಗಿ ನಡೆದು ಹೋಗುವುದನ್ನು ಕಾಣುತ್ತೇವೆ.

ಈ ದೇವಗಳ ಸಂಬಂಧಗಳು ಕೆಲವೊಮ್ಮೆ ಕುಟುಂಬದ ಒಳಗಡೆ ಇರುವ ಸಂಬಂಧಗಳಂತೆ ತಂದೆ, ತಾಯಿ, ಅಣ್ಣ, ತಂಗಿ, ಅಕ್ಕ ಈ ರೀತಿಯಾಗಿರುವುದನ್ನು ಸಹ ನಾವು ಕಾಣುತ್ತೇವೆ. ಹೀಗೆ ಕಾಣಲು ಬಹಳ ಪ್ರಮುಖವಾದ ಕಾರಣವೆಂದರೆ ನಮ್ಮ ಸಂಸ್ಕೃತಿಯಲ್ಲಿರುವ ಮನೋಭಾವನೆಯಾಗಿರುತ್ತದೆ. ಈ ಸಂಸ್ಕೃತಿಯು ಎಷ್ಟೋ ಸಂದರ್ಭದಲ್ಲಿ ತಮ್ಮದಲ್ಲದವರನ್ನು ಸಹ ತಮ್ಮ ಮಕ್ಕಳು ತಮ್ಮ ಅಣ್ಣ ತಂಗಿಯರಂತೆ ಕಾಣುವುದನ್ನು ಕಾಣುತ್ತೇವೆ. ಇದೇ ಪದ್ಧತಿಯನ್ನು ತಾವು ಆರಾಧಿಸುವ ದೈವಗಳಿಗೂ ಸಹ ಆರೋಪಿಸುವ ಮೂಲಕ ಒಂದು ರೀತಿಯ ಮಾನಸಿಕ ತೃಪ್ತಿಯನ್ನು ಕಂಡುಕೊಳ್ಳುವರು.

ಪ್ರಸ್ತುತ ಹುಲಿಗೆಮ್ಮನ ದೇವಸ್ಥಾನದಲ್ಲಿರುವ ಇತರ ದೈವಗಳು ಮತ್ತು ಹುಲಿಗೆಮ್ಮನ ಸಬಂಧಗಳನ್ನು ನೋಡುತ್ತಾ ಹೋದರೆ ನಮಗೆ ಬುಡಕಟ್ಟು ಸಂಸ್ಕೃತಿಯಲ್ಲಿದ್ದ ಮಾತೃಪ್ರಧಾನ ವ್ಯವಸ್ಥೆಯಲ್ಲಿದ್ದ ಕುಟುಂಬದ ರೀತಿಯಲ್ಲಿ ಕಾಣುವುದನ್ನು ನಾವು ನೋಡುತ್ತೇವೆ. ಈ ಮಾತೃಪ್ರಧಾನ ವ್ಯವಸ್ಥೆ ಹುಲಿಗೆಮ್ಮನ ಕ್ಷೇತ್ರದಲ್ಲಿ ಇನ್ನೂ ಜೀವಂತವಾಗಿದೆಯೇನೋ ಅನ್ನಿಸುವಂತೆ ಕಾಣುತ್ತದೆ. ಏಕೆಂದರೆ ಕ್ಷೇತ್ರದಲ್ಲಿರುವ ಹುಲಿಗೆಮ್ಮನನ್ನು

ಹೊರತು ಪಡಿಸಿ ಉಳಿದ ದೈವಗಳನ್ನು ನೋಡಿದಾಗ ಈ ಎಲ್ಲಾ ದೈವಗಳು ತಾಯಿ ಅಕ್ಕ ತಂಗಿ ಮಗ ಮಕ್ಕಳಾಗಿ ಇರುವುದಲ್ಲದೆ ಕ್ಷೇತ್ರಕ್ಕೆ ಬರುವ ಭಕ್ತರು ಮಕ್ಕಳಾಗಿ ಕ್ಷೇತ್ರದಲ್ಲಿ ವಿಜೃಂಭಿಸಿರುವುದನ್ನು ನಾವ ಕಾಣುತ್ತೇವೆ. ಇದೊಂದು ರೀತಿಯಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಮುಂದುವರಿಕೆಯಂತಿರುವ ಕ್ಷೇತ್ರವಾಗಿದೆ.

ಕ್ಷೇತ್ರದಲ್ಲಿರುವ ಹುಲಿಗೆಮ್ಮ ಮತ್ತು ಇತರ ದೈವಗಳ ಸಂಬಂಧವು ಈ ರೀತಿಯಾಗಿದೆ.

೧. ಹುಲಿಗೆಮ್ಮಳು ಇಲ್ಲಿ ಈ ಕ್ಷೇತ್ರದಲ್ಲಿ ಬಂದು ನೆಲಸುವುದಕ್ಕೆ ಮೊದಲು ಮಾತಂಗಿಯೇ ಕಾರಣಳೆಂದು ಹೇಳುತ್ತಾರೆ. ಒಂದು ದಿನ ಹುಲಿಗೆಮ್ಮ ಗರ್ಭಿಣಿ ಇದ್ದಾಗ ಉಳ್ಳಾಗಡ್ಡಿ, ಬದನಿಕಾಯಿ ತಿನ್ನೊ ಆಸೆಯಿಂದ ಈಕೆ ಗೌಡನ ತೋಟಕ್ಕೆ ನುಗ್ಗಿ ತೋಟದಾಗೆ ಇರುವ ಎಲ್ಲ ಕಾಯಿಗಳನ್ನು ತಗೊಂಡು ಚೆಲ್ಲಾ ಪಿಲ್ಲಿ ಮಾಡಿ ಹೋಗಿ ಮಾತಂಗಿಯ ಹಿಂದೆ ಅಡಗಿ ಕೂತಿರುತ್ತಾಳೆ. ಮಾತಂಗಿಯು ಈಕೆಯನ್ನು ಯಾರಿಗೆ ಗೊತ್ತಾಗದಂತೆ ಬಚ್ಚಿಟ್ಟು ಹುಲಿಗೆಮ್ಮನನ್ನು ಪಾರು ಮಾಡಿರುತ್ತಾಳೆ. ಆದ್ದರಿಂದ ಹುಲಿಗೆಮ್ಮ ನನ್ನನ್ನು ನೀನು ಪಾರುಮಾಡಿದ್ದೀಯ ಇವತ್ತಿನಿಂದ ಮುಂದೆ ನನಗೆ ಬರುವ ಭಕ್ತರೆಲ್ಲರೂ ಮೊದಲು ನಿನಗೆ ನಮಸ್ಕರಿಸಿ ನಂತರ ನನಗೆ ನಮಸ್ಕಾರ ಮಾಡ್ಲಿ ಅಂತ ಹೇಳಿರುವುದರಿಂದ ಈವತ್ತಿಗೂ ಅದೇ ಆಚರಣೆಯನ್ನು ನಾವು ಇಲ್ಲಿ ಈ ಕ್ಷೇತ್ರದಲ್ಲಿ ಕಾಣುತ್ತೇವೆ.

೨. ಮೊದಲು ಇಲ್ಲಿ ಈ ಕ್ಷೇತ್ರಕ್ಕೆ ವ್ಯಾಘ್ರಪುರಿ ಅಂತ ಹೆಸರಿತ್ತಂತೆ ವ್ಯಾಘ್ರ ಅಂದರೆ ಹುಲಿ ಮೊದಲು ಇಲ್ಲೆಲ್ಲಾ ಹುಲಿಗಳು ಹೆಚ್ಚಾಗಿದ್ದವು. ದೇವಿ ಇಲ್ಲಿ ಬಂದು ನೆಲೆಸಿದ ಮೇಲೆ ಹುಲಿಗಳ ಅಮ್ಮ ಹುಲಿಗೆಮ್ಮ ಎಂದು ಅಂದಿನಿಂದ ಈ ಕ್ಷೇತ್ರವನ್ನು ಹುಲಿಗಿ ಎಂದು ಕರೆಯುತ್ತಾರೆ.

೩. ಇಲ್ಲಿ ಮೊದಲು ಸೋಮಲಿಂಗನ ಗುಡಿ ಇತ್ತಂತೆ. ಆಗ ಹುಲಿಗೆಮ್ಮಳು ಒಂದು ಮುದುಕಿ ಅವತಾರದಲ್ಲಿ ಜೋಗಮ್ಮಳಾಗಿ ಬಂದು ನನಗೆ ಸ್ವಲ್ಪ ಜಾಗ ಕೊಡು ಎಂದು ಕೇಳಿದರೆ ಆತ ಕೊಡಲಿಲ್ಲ. ಆಗ ಹುಲಿಗೆಮ್ಮ ಸುತ್ತಾ ಹಸಿ ಮಾಂಸವನ್ನು ಎಲುಬುಗಳನ್ನು ಹಾಕಿದಾಗ ಆ ಹೊಲಸನ್ನು ನೋಡಲಾರದೆ ಸೋಮಲಿಂಗ ಕೇಳುತ್ತಾನೆ. ನಾ ಎಲ್ಲಿ ಹೋಗಲವ್ವ ನೀ ಹಿಂಗೆ ಮಾಡಿದರೆ ಎಂದಾಗ ಹುಲಿಗೆಮ್ಮ ನಿಂಬೆಹಣ್ಣು ಒಗಿಯುತ್ತಾಳೆ. ಆ ನಿಂಬೆಹಣ್ಣು ಕಂಪ್ಲಿಯ ಹತ್ತಿರ ಹೋಗಿ ಬೀಳುತ್ತದೆ. ಆಗ ಸೋಮಲಿಂಗ ಬೆನ್ನು ಗೋಡೆ ಮೂಲಕ ಹೋಗುತ್ತಾನೆ. ಆಗ ಇಲ್ಲಿ ಹುಲಿಗೆಮ್ಮ ನೆಲೆಸಿ ದೊಡ್ಡ ದೇವತೆಯೆನಿಸುತ್ತಾಳೆ ಎಂದು ಹೇಳುತ್ತಾರೆ. ಮುದ್ದಮ್ಮನ ಮಗಳಾದ ಹುಲಿಗೆಮ್ಮ ತನ್ನ ತಂಗಿಯಾದ ಹೊಸೂರಮ್ಮನ ಹತ್ತಿರ ಜಗಳವಾಡಿಕೊಂಡು ಬರುತ್ತಿರುವಾಗ ಹುಲಿಗಿ ಕ್ಷೇತ್ರದಲ್ಲಿ ಜೋರಾಗಿ ಮಳೆ ಬರುತ್ತಿತ್ತು. ಹುಲಿಗಿ ಕ್ಷೇತ್ರದಲ್ಲಿ ಸೋಮಲಿಂಗನ ಗುಡಿ ಇತ್ತಂತೆ. ಸೋಮಲಿಂಗನನ್ನು 'ಅಣ್ಣಾ ಜೋರಾಗಿ ಮಳೆ ಬರುತ್ತಾ ಇದೆ. ನನಗೆ ಇಲ್ಲಿರಲು ಸ್ವಲ್ಪ ಜಾಗ ಕೊಡು' ಎಂದು ಬೇಡಿದಳಂತೆ. ಹುಲಿಗೆಮ್ಮಳು ಇಲ್ಲಿಗೆ ಬರುವಾಗ ಪಡ್ಲಿಕಿ ಹಿಡಿದುಕೊಂಡು ಬಂದಿದ್ದಳು. ಅದರಲ್ಲಿ ಮಾಂಸ ಮೂಳೆ ಇದ್ದುದನ್ನು ಕಂಡು ಸೋಲಿಂಗನು ಛೀ ರಂಡೆ ನೀನು ಮಾಂಸ ತಿನ್ನುವವಳು ನಡಿ ಆಚೆ ಎಂದು ಗದರಿಸುತ್ತಾನೆ. ಆದರೂ ಹುಲಿಗೆಮ್ಮ ಬಿಡುವುದಿಲ್ಲ. ಕೊನೆಗೆ ಉಪಾಯ ಮಾಡಿ ತನ್ನ ಭಂಡಾರದಿಂದ ರಣದಮ್ಮನನ್ನು ಸೃಷ್ಟಿ ಮಾಡುತ್ತಾಳೆ. ಆಕೆಗೆ 'ನಿನ್ನಿಂದ ಒಂದು ಸಹಾಯ ಆಗಬೇಕು, ನೀನು ಎಲುಬು, ಕೈ, ಕಾಲು ಅಂದರೆ ಕುರಿಯ ಕೈಕಾಲುಗಳನ್ನು ತೆಗೆದುಕೊಂಡು ಅದರದೇ ಹಂದ್ರವನ್ನು ತಂದು ಈ ಸೋಮಲಿಂಗ ಗುಡಿಯ ಮುಂದೆ ಹಾಕು. ನೀನು ಈ ಸಹಾಯ ಮಾಡಿದರೆ ನಾನು ಇಲ್ಲಿ

ಉಳಿದುಕೊಳ್ಳಬಹುದು' ಎಂದು ಹುಲಿಗೆಮ್ಮ ಹೇಳುತ್ತಾರೆ. ನಾನು ನಿನಗೆ ಸಹಾಯ ಮಾಡಿದರೆ ನನಗೇನು ಕೊಡುತ್ತಿ ಎಂದು ರಣದಮ್ಮ ಕೇಳಿದಾಗ, ನನ್ನ ಭಕ್ತರು ಬಂದು ಕುರಿ ಬೇಟೆ ಮಾಡಿದ್ದೆಲ್ಲಾ ಮೊದಲು ನಿನಗೆ ಅರ್ಪಿತವಾಗಲಿ ಎಂದು ಆಶೀರ್ವದಿಸುತ್ತಾಳೆ.

ರಣದಮ್ಮಳು ಎಲುಬು, ಕಾಲುಗಳಿಂದ ಮಾಡಿದ ಹಂದಿರ (ಹಂದ್ರ)ವನ್ನು ತಂದು ಸೋಮಲಿಂಗನ ಗುಡಿ ಮುಂದೆ ಕಟ್ಟುತ್ತಾಳೆ. ಆಗ ನೊಣಗಳೆಲ್ಲಾ ಮುಕ್ಕರಿಸುತ್ತವೆ. ಇದನ್ನು ಕಂಡು ಸೋಮಲಿಂಗ ಅಸಹ್ಯಗೊಂಡು ಬೆನ್ನು ಗೋಡೆ ಮುರಿದು ಹಾಗೇನೆ ಹೊರಟು ಹೋಗುತ್ತಾನೆ. ಹೊರಟು ಹೋಗಿ ಕಂಪ್ಲಿಯಲ್ಲಿ ನೆಲೆಸುತ್ತಾನೆ. ಕಂಪ್ಲಿಯಲ್ಲಿ ಸೋಮಲಿಂಗ ದೇವಸ್ಥಾನವನ್ನು ಇಂದಿಗೂ ಕಾಣಬಹುದಾಗಿದೆ. ತದನಂತರ ಆತನನ್ನು ಓಡಿಸಿ ಹುಲಿಗೆಮ್ಮಳು ಅಲ್ಲಿ ನೆಲೆಸಿ ತನ್ನ ಭಕ್ತರನ್ನು ಒಲಿಸಿಕೊಳ್ಳಲು ಹಲವು ಪವಾಡಗಳನ್ನು ಮಾಡಿ ಪವಾಡ ಪುರುಷಿಣಿ ಆಗುತ್ತಾಳೆ. ಇದು ಒಬ್ಬರ ಅಭಿಪ್ರಾಯದಲ್ಲಾದರೆ, ಇನ್ನೊಬ್ಬರ ಅಭಿಪ್ರಾಯದಲ್ಲಿ ಈಕೆ ಮೊದಲೇ ಈ ಕ್ಷೇತ್ರಕ್ಕೆ ಬರುವಾಗ ಪಡ್ಲಿಕಿಯಲ್ಲಿ ಅಕ್ಕಿ ಜೋಳ ತುಂಬಿಕೊಂಡು ಬಂದು ಸೋಮಲಿಂಗನನ್ನು ಜಾಗ ಕೇಳಿದಾಗ ನಾನೇ ಇಲ್ಲಿ ನೆಲೆಸಿರುವಾಗ ನಿನಗೆ ಜಾಗ ಕೊಡಲು ಸಾಧ್ಯವಿಲ್ಲವೆನ್ನುತ್ತಾನೆ. ಆಗ ಹುಲಿಗೆಮ್ಮಳೇ ಕುರಿಯ ಕೈ, ಕಾಲು, ತಲೆಯನ್ನು ಆತನ ಸ್ಥಳದಲ್ಲೇ ಬೆಂಕಿ ಹಾಕಿ ಸುಡುತ್ತಿರುವಾಗ ಅದರ ಹೊಗೆಯ ವಾಸನೆ ತಾಳದೇ ಸೋಮಲಿಂಗನು ಅಲ್ಲಿಂದ ಬೆನ್ನುಗೋಡೆ ಹಾಯ್ದು ಹೋಗಿ ಕಂಪ್ಲಿಯಲ್ಲಿ ನೆಲೆಸುತ್ತಾನೆ. ಆಗ ಇಲ್ಲಿ ಬಂದು ಹುಲಿಗೆಮ್ಮ ನೆಲೆಸುತ್ತಾಳೆ ಎಂದು ಕೆಲವರು ಹೇಳುತ್ತಾರೆ.

ಇನ್ನೊಬ್ಬರ ಅಭಿಪ್ರಾಯದಲ್ಲಿ ಹುಲಿಗೆಮ್ಮ ದೇವಿ ಹೊಸೂರಮ್ಮನ ಹತ್ತಿರ ಜಗಳ ಆಡಿಕೊಂಡು ಬರುತ್ತಿರುವಾಗ ೩ ಹೆಜ್ಜೆಯಲ್ಲಿ ಈ ಕ್ಷೇತ್ರಕ್ಕೆ ತಲುಪುತ್ತಾಳೆ. ಒಂದು ಹೊಸೂರಿನಲ್ಲಿ ಇಟ್ಟ ಹೆಜ್ಜೆ, ಇನ್ನೊಂದು ಹೊಳೆಯ ದಂಡೆಯ ಮೇಲೆ ಇಟ್ಟ ಹೆಜ್ಜೆ, ಮೂರನೇ ಹೆಜ್ಜೆಯೇ ಹುಲಿಗಿಯ ಕ್ಷೇತ್ರ ಎಂದು ಹೇಳುವರು. ಆಕೆ ಹೊಳೆಯ ದಂಡೆಯ ಹತ್ತಿರ ಬರಬೇಕಾದರೆ ದಾರಿ ಇಲ್ಲದೆ ಪರಿತಪಿಸುತ್ತಿರುವಾಗ ಸೋಮಲಿಂಗನು ಈಕೆಯನ್ನು ಅಲ್ಲೇ ನೋಡಿ ಈಕೆ ಹೊಲಸು ಮಾಂಸ ತಿನ್ನುವವಳೆಂದು ತಿಳಿದು ಈಕೆ ಬರುವ ದಾರಿಗೆ ಅಡ್ಡಲಾಗಿ ದಾರಿತಪ್ಪಿಸುತ್ತಾನೆ. ಆಗ ಈಕೆ ತನ್ನ ಭಂಡಾರದ ಮೂಲಕ ಬಾಳೆ ಎಲೆ ಮೇಲೆ ಬಂದು ನದಿ ದಾಟುತ್ತಾಳೆ. ನದಿಯ ಹತ್ತಿರ ಹೆಜ್ಜೆ ಇಟ್ಟಾಗ ಅಲ್ಲಿ ಏರ್ಪಟ್ಟ ಪಾದಗಟ್ಟೆಯನ್ನು ಇಂದಿಗೂ ಜನ ತೋರಿಸುತ್ತಾರೆ. ಇಂದಿಗೂ ಅಲ್ಲೇ ಜನರು ದೇವಿಗೆ ಕುರಿಯನ್ನು ಬಲಿ ನೀಡುವಾಗ ಅಲ್ಲಿಯೇ ಚೂರಿ ಹಾಕುತ್ತಾರೆ. ಬಾಳೆಯದೆಲೆ ಮೇಲೆ ಬಂದು ಈ ಕ್ಷೇತ್ರಕ್ಕೆ ನೆಲೆಸಿದಳೆಂದು ಈ ಕಥನವು ವಿವರಿಸುತ್ತದೆ.

ಇನ್ನು ಹುಲಿಗಿ ಕ್ಷೇತ್ರಕ್ಕೆ ಹುಲಿಗಿ ಅಂತ ಹೆಸರು ಬಂದು ಹುಲಿಗೆಮ್ಮಳಾದಳು ಎಂದು ಹೇಳುವಾಗ, ಮೊದಲು ರಾಮಾಯಣದಲ್ಲಿ ರಾವಣನು ಹೇಗೆ ಸೀತೆಯನ್ನು ಕಂಡೊಡನೆ ಮೋಹಿಸಿ ಆಕೆ ಕಾಟ ಕೊಡುತ್ತಿದ್ದನೋ ಹಾಗೇನೆ ಈಕೆಗೂ ಒಬ್ಬ ರಾಕ್ಷಸ ಈಕೆಯನ್ನು ಕಂಡೊಡನೆ ಈಕೆಯ ರೂಪಕ್ಕೆ ಮರುಳಾಗಿ ಈಕೆಯನ್ನು ಅಪಹರಿಸಲು ಯಾವುದಾದರೊಂದು ಕಾಟಕೊಡುತ್ತಲೇ ಇದ್ದನಂತೆ. ಅದನ್ನು ಸಹಿಸಲಾಗದೇ ಒಂದು ದಿನ ರೌದ್ರಾವತಾರ ತಾಳಿ ಆತನನ್ನು ತನ್ನ ಕಾಲಡಿಯಲ್ಲಿ ಹಾಕಿಕೊಂಡು ತ್ರಿಶೂಲದಿಂದ ಅವನನ್ನು ಕೊಲ್ಲುವಾಗ ಅವನ ಕಣ್ಣಿಗೆ ಆಕೆಯ

ಮುಖ 'ಹುಲಿ' ರೂಪವಾಗಿ ತಾಳಿ ಆಕೆಯ ಮುಖದ ಮೀಸೆ ಆಗ ಬರುತ್ತದೆ. ಆದ್ದರಿಂದ ಈಕೆ ದೊಡ್ಡದೇವತೆಯಾಗಿ ಹುಲಿಗೆಮ್ಮಳಾಗುತ್ತಾಳೆ ಎಂಬುದು ಜನರ ಅಭಿಪ್ರಾಯದ ಮೇರೆಗೆ ಹೇಳಲಾಗಿದೆ.

ಹುಲಿಗೆವ್ವ ಹೊಸೂರವ್ವ ಅಕ್ಕತಂಗೇರು ಅವರು ಒಂದು ದಿನ ಬರುತಿರಬೇಕಾದರೆ ಈ ಹೊಳೆದಾಟಬೇಕಾಗಿತ್ತಂತೆ. ಯಾಕೆಂದರೆ ಹುಲಿಗೆವ್ವಗ ಈ ಜಾಗದಲ್ಲಿ ಬಂದು ನೆಲೆಸಬೇಕಂತ ಇಷ್ಟ ಆಗಿತ್ತಂತೆ. ಆಗ ಹುಲಿಗೆವ್ವ ಯಕ್ಕಾ ಯೆಂಗ ಮಾಡನಾ ಯೆಕ್ಕ ಎಂದು ಹೊಸೂರವ್ವನ ಕೇಳಿದಾಗ ಹೊಸೂರವ್ವ ನೋಡವ್ವಾ ನನ್ನ ಕೈಯಲ್ಲಿ ಈ ಹೊಳೆದಾಟಕ ಆಗಲ್ಲ. ನೀನೆ ದಾಟು ಎಂದು ಹೇಳಿದಳಂತೆ. ಆಗ ಹುಲಿಗೆಮ್ಮ ೩ ಹೆಜ್ಜೆಯಲ್ಲಿ ಈ ಹೊಳೆದಾಟಿ ಬಂದಳು. ಬಂದು ಸೋಮಲಿಂಗನ ಓಡಿಸಿದಳು ಎಂದು ಹೇಳುತ್ತಾರೆ. ಆಗ ಅಕ್ಕಗ ಭಿಕ್ಷೆ ಮಾಡಿದಳಂತೆ. ನೀನು ಮ್ಯಾನ್ಯೇವು ಪಡಿ ನಾನು ಪರಿಷೆ ಪಡಿತಿನಿ ಅಂತ ಭಾಷೆ ತಗಂಡು ಒಂದು ಬೆಳ್ಳನೆ ಸೀರೆ ಉಟ್ಕಂಡು ಹಣ್ಣಣ್ಣು ಮುದುಕಿ ಆಗಿ ಬಂದಳಂತೆ. ಜೋರು ಗಾಳಿ ಮಳೆ ಬರಕತ್ತಿತ್ತು. ಸೋಮಲಿಂಗ ದೇವರ ಪೂಜೆ ಮಾಡುತ್ತಿದ್ದನಂತೆ. ಈಕೆ ಬಂದು ಸೋಮಲಿಂಗನ ಹೆಂಡ್ತಿನ ಕೇಳಿದಳಂತೆ. 'ಯವ್ವ ತಟಗ ಜಗ್ಯವ ಕೊಡವ್ವ' ಅಂತ. ಆಕಿ ಇಲ್ಲ ಎಂದಳಂತೆ. ಜೋರಾಗಿ ಮಳೆ ಬುರತ್ತಿದ್ದರಿಂದ ಹುಲಿಗೆವ್ವ ಒಂದು ಮೂಲ್ಯಾಗ ಹೋಗಿ ಕುತಕಂಡ್ಲಂತೆ. ಸೋಮಲಿಂಗ ಹೆಂಡ್ತಿನ ಬೆಳತನಕ ಬಡಿದು ಬಿಟ್ಟನಂತೆ. ನೀನ್ಯಾಕ ಕೊಟ್ಟೆ ಆಕಿಗೆ ಜಾಗ ಅಂತ. ಬೆಳಕಹರಿತಿದ್ದಂತೆ ಹೆಂಡ್ತಿನ ಕರಕಂಡು ಬೆನ್ನಗೋಡಿ ಒಡೆದು ಕಂಪ್ಲಿಗೆ ಹೋದನಂತೆ.

ನಾಗಜೋಗಿ-ಬಸವಜೋಗಿಯರು ಪ್ರತಿ ಹುಣ್ಣಿಮೆಗೆ ಕಾಲುನಡಿಗೆಯ ಮೂಲಕ ಎಲ್ಲಮ್ಮನ ದರ್ಶನ ಮಾಡಿಕೊಂಡು ಬರುತ್ತಿದ್ದರಂತೆ. ಒಂದು ದಿನ ಇದ್ದಕ್ಕಿದ್ದ ಹಾಗೆ ಘಟಪ್ರಭಾ ನದಿಯು ಮಳೆಯಿಂದ ಪ್ರವಾಹ ಉಕ್ಕಿ ಹರಿದು ಬರುತ್ತಿದೆ. ಇವರಿಬ್ಬರಿಗೆ ಹೋಗಬೇಕೆಂದರೆ ಮಳೆಯೇ ಕಡಿಮೆಯಾಗುತ್ತಿಲ್ಲ. ಇವರು ಮನಸ್ಸಿನಲ್ಲಿ ಎಲ್ಲಮ್ಮನನ್ನು ನೆನೆಯುತ್ತಾ ತಾಯಿ ನಮ್ಮನ್ನು ಯಾಕೆ ಹೀಗೆ ಮಾಡಿದೆ ಎಂದು ಮನಸ್ಸಿನಲ್ಲಿ ನೊಂದುಕೊಂಡು ಅಲ್ಲೇ ಮಲಗಿದಾಗ ಕನಸಿನಲ್ಲಿ ಎಲ್ಲಮ್ಮಳು ನೀವು ಯಾಕೆ ನೊಂದು ಕೊಳ್ಳುತ್ತೀರಿ, ನಾನು ಹುಲಿಗಿಯಲ್ಲೇ ನೆಲೆಸಿದ್ದೇನೆ. ಅಲ್ಲಿಯೇ ಕೈ ಮುಗಿಯಿರಿ, ನಾನು ನೆಲದಲ್ಲಿ ಅವುತುಕೊಂಡಿದ್ದನೆ. ಅಲ್ಲಿಂದ ನನ್ನನ್ನು ತೆಗೆದು ಪೂಜಿಸಿರಿ. ನಿಮಗೆ ಒಳ್ಳೆಯದಾಗುತ್ತದೆ ಎಂದು ಹೇಳಿದಾಗ ನಾಗಜೋಗಿ ಬಸವಜೋಗಿಯರು ನೆಲದಲ್ಲಿದ್ದ ಆಕೆಯನ್ನು ತೆಗೆದು ಆಕೆಯನ್ನು ಪೂಜಿಸತೊಡಗಿದರಂತೆ ಎಂದು ಕೆಲವರು ಹೇಳುವರು. ಹುಲಿಗೆಮ್ಮಳು ಉದ್ಭವ ಮೂರ್ತಿ ಎಂದು ಹೇಳುತ್ತಾರೆ.

ಹುಲಿಗೆಮ್ಮಳು ಪರಮೇಶ್ವರನ ಹೆಂಡತಿ ಪಾರ್ವತಿಯೇ ಇಷ್ಟೆಲ್ಲಾ ಅವತಾರವಾಗಿ ತಾಳಿದ್ದಾಳೆ ಎಂದು ಹೇಳುತ್ತಾರೆ. ಈಕೆ ಕ್ಷುದ್ರದೇವತೆ. ಒಂದು ರಕ್ತದ ಹನಿಯಿಂದ ಹಲವಾರು ದೇವತೆಗಳು ಉದ್ಭವಿಸಿದವು. ನಂತರ ದೇವತೆಗಳಾಗಿ ಪವಾಡ ಪುರುಷರಾದರು ಎಂದು ಹೇಳುವಾಗ ಹುಲಿಗೆಮ್ಮ ದೇವಿ, ಎಲ್ಲಮ್ಮ ದೇವಿಯ ಕಥೆಯು ಒಂದೇ ಆದರೆ ಹುಲಿಗೆಮ್ಮನಿಗೆ ಗಂಡನಿಲ್ಲ ಎಂದು ಹೇಳಿದರೆ ಇನ್ನು ಕೆಲವರು ಜಮದಗ್ನಿಯೇ ಹುಲಿಗೆಮ್ಮಳ ಗಂಡ ಎಂದು ಹೆಳುತ್ತಾರೆ.

### ೬.೧ ನಾಗಜೋಗಿ ಬಸವ ಜೋಗಿಯರು

ನಾಗಜೋಗಿ ಬಸವ ಜೋಗಿಯರು ಪ್ರತಿ ಹುಣ್ಣಿಮೆಗೆ ಎಲ್ಲಮ್ಮನ ಗುಡ್ಡಕ್ಕೆ ಹೋಗಿ ಬರುತ್ತಿದ್ದರು. ಒಮ್ಮೆ ಜಾಸ್ತಿ ಮಳೆಯಾಗಿ ನದಿ ದಾಟದ ಕಾರಣ ಕನಸ್ಸಿನಲ್ಲಿ ಎಲ್ಲಮ್ಮ ದೇವಿ ಬಂದು ಇನ್ನು ಮೇಲೆ ನಾನು ಹುಲಿಗೆಮ್ಮಳಾಗಿ ಇಲ್ಲಿ ನೆಲೆಸುತ್ತೇನೆ. ನೀವು ನನ್ನನ್ನು ಇಲ್ಲೇ ಪೂಜಿಸಿರಿ ಎಂದಾಗ ನಾಗಜೋಗಿ-ಬಸವಜೋಗಿಯರಿಂದಲೇ ಈ ಹುಲಿಗೆಮ್ಮನ ಕ್ಷೇತ್ರ ಉದ್ಧಾರವಾಗಲಿ ಎಂದು ಹೇಳಿ ಹೋದಳಂತೆ. ಮತ್ತು ಅವರು ಅಂದಿನಿಂದ ಹಲಿಗೆಮ್ಮನ ಪೂಜಾರಿಗಳಾಗಿ ಆಕೆಯನ್ನು ಪೂಜಿಸುತ್ತಿದ್ದರ ಸಲುವಾಗಿ ಅದರ ನೆನಪಾಗಿ ನಾಗಜೋಗಿಯರನ್ನು ಗರ್ಭಗುಡಿಯಲ್ಲಿ ಅವರ ಮೂರ್ತಿಗಳನ್ನು ಕೆತ್ತಿಸಲಾಗಿದೆ. ಇಂದಿಗೂ ಆ ಗಂಗಾಮತಸ್ಥರಾದ ನಾಗಜೋಗಿ-ಬಸವಜೋಗಿಯರ ಮನೆತನದವರಿಂದಲೇ ಪವಾಡಗಳು ನೆರವೇರುತ್ತವೆ.

### ೬.೨ ಮಾತಂಗಿ ದೇವಿ

ಹುಲಿಗೆಮ್ಮನ ದೇವಸ್ಥಾನದಲ್ಲಿ ಬರುವ ಭಕ್ತರೆಲ್ಲರೂ ಮೊದಲು ಮಾತಂಗಿಗೆ ಕೈಮುಗಿದು ನಂತರ ತಂದ ಬುತ್ತಿಯನ್ನು ಆಕೆಗೆ ಅರ್ಪಿಸಿ ನಂತರ ಹುಲಿಗೆಮ್ಮ ದೇವಿಗೆ ಹೋಗಿ ನಮಸ್ಕರಿಸಿ ಬರುವುದನ್ನು ಕಂಡಾಗ ಏನಿರಬಹುದು ಇದರ ಹಿಂದಿನ ಮೂಲ ಎಂದು ಕೇಳಲು ಹೋದಾಗ ಮಾತಂಗಿ ಎಂದರೆ ಮಾದಿಗ ಜನಾಂಗದವರಿಗೆ ಮಾತಂಗಿಯರು ಎಂದು ಕರೆಯುತ್ತಾರೆ. ಮಾದಿಗ ಜನಾಂಗದ ಮಗಳನ್ನು ಹುಲಿಗೆಮ್ಮ ದೇವಿ ತನ್ನ ಆಪ್ತ ಗೆಳತಿಯನ್ನಾಗಿ ಮಾಡಿಕೊಂಡಿದ್ದಾಳೆ.

ಒಂದು ದಿನ ಹುಲಿಗೆಮ್ಮ ಪರಶುರಾಮನ ಬಸುರಿ ಇದ್ದಾಗ ಈಕೆಗೆ ಮೂಲಂಗಿ ತಿನ್ನಲು ಆಸೆಯಾಗಿರುತ್ತದೆ. ಹೊನ್ನಶೆಟ್ಟಿ ಮತ್ತು ನಾಗಶೆಟ್ಟಿಯರ ಹೊಲಕ್ಕೆ ಹೋಗುತ್ತಾಳೆ. ಹೊಲದ ಕಾವಲುಗಾರ ಮಾದಿಗ ಜನಾಂಗದ ಹರಳಯ್ಯನಾಗಿರುತ್ತಾನೆ. ಈತನ ಮನೆ ಚರ್ಮದ ತೊಗಲಿನಿಂದ ಕೂಡಿದ್ದು ಅದಕ್ಕೆ ಸ್ತಂಭವಾಗಿ ಯಲುಬಿನ ಗೂಟವಿರುತ್ತದೆ. ಒಂದು ಚಿಕ್ಕ ಮನೆಯಲ್ಲಿ ಹರಳಯ್ಯ ಈತನ ಹೆಂಡತಿ ಕಲ್ಯಾಣಮ್ಮ ಮಗಳು ಮಾತಂಗಿ ವಾಸವಾಗಿರುತ್ತಾರೆ. ಬೆಳಿಗ್ಗೆ ಎಲ್ಲಾ ಚರ್ಮ ಹದ ಮಾಡುವ ಕೆಲಸ ಮಾಡಿ ರಾತ್ರಿ ಹೊತ್ತು ಹೊಲ ಕಾಯುತ್ತಿರುತ್ತಾನೆ. ಹೀಗೆ ಹೊಲ ಕಾಯುತ್ತಿರುವಾಗ ಜೋಗತಿ ಅವತಾರದಲ್ಲಿ ಬಂದು ಏನಣ್ಣ ನನಗೆ ಮೂಲಂಗಿ ತಿನ್ನಲು ಆಸೆಯಾಗಿದೆ, ಎರಡು ಮುಲ್ಲಂಗಿ ಕಿತ್ತುಕೊಡುತ್ತೀಯಾ ಎಂದು ಕೇಳಿದಾಗ ಹರಳಯ್ಯ ನೋಡಮ್ಮ ಇದು ನನ್ನದಲ್ಲ, ತೋಟ ನಮ್ಮ ಗೌಡನದು ಅವರು ಬೈತಾರೆ ಎಂದು ಹೇಳುತ್ತಾನೆ. ಆ ಸಮಯದಲ್ಲಿ ಕತ್ತಲಾಗಿದ್ದರಿಂದ ಅಲ್ಲೇ ಸ್ವಲ್ಪ ಹೊತ್ತು ಮಲಗಿಕೊಳ್ಳುತ್ತಾಳೆ. ಹರಳಯ್ಯನು ಮಲಗಿ ಕೊಂಡಿರುತ್ತಾನೆ. ಆಗ ಆ ಜೋಗುತಿ ಎದ್ದು ತೋಟದೊಳಗೆ ನುಗ್ಗಿ ಮುಲ್ಲಂಗಿ ಅಲ್ಲದೆ ಬದನಿಕಾಯಿ, ಗೆಜ್ಜರಿಯನ್ನು ಕೇಳಿ ಓಡೋಡಿ ಬರುವಾಗ ದಾರಿಯುದ್ದಕ್ಕೂ ಒಂದೊಂದೇ ಚೆಲ್ಲಿ ಹೋಗಿರುತ್ತವೆ. ಭಯಕ್ಕೆ ಹುಲಿಗೆಮ್ಮ ದೇವಿ ಆ ಹರಳಯ್ಯನ ಮನೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಾಳೆ. ಬೆಳಿಗ್ಗೆ ಹೊನ್ನಶೆಟ್ಟಿ ಮತ್ತು ನಾಗಶೆಟ್ಟಿಯರು ಬಂದು ತೋಟವನ್ನು ನೋಡಿದಾಗ ತೋಟವೆಲ್ಲಾ ಚೆಲ್ಲಾಪಿಲ್ಲಿಯಾಗಿ ದಾರಿಯುದ್ದಕ್ಕೂ ತರಕಾರಿಗಳು ಹರಡಿಕೊಂಡಿರುತ್ತವೆ. ಅದು ಸೀದಾ ಹರಳಯ್ಯನ ಮನೆಯ ಹತ್ತಿರದವರೆಗೂ ಚೆಲ್ಲಿದ್ದನ್ನು ನೋಡಿ ಗೌಡರು ಹರಳಯ್ಯನೇ ಇದಕ್ಕೆ ಕಾರಣವೆಂದು ಅನುಮಾನ ಪಟ್ಟು ಅವನನ್ನು ಬಡಿಯುತ್ತಾರೆ.

ಬಡಿದ ಸ್ವಲ್ಪ ಕ್ಷಣದಲ್ಲೆ ಅವರ ಕೈಗೆ ಕುಷ್ಠ ಬರುತ್ತದೆ. ಕೈಕಾಲೆಲ್ಲ ಮೇಲೆ ಪಳದ ಹಾಗೆ ಊನ ಉಂಟಾಗುತ್ತದೆ. ಜನರೆಲ್ಲಾ ಗೌಡರನ್ನು ನೋಡಿಕೊಂಡು ಬರುತ್ತಾರೆ. ಇದೆಲ್ಲಾ ಊರು ತುಂಬ ಸುದ್ದಿ ಯಾಗುತ್ತದೆ. ಆಗ ಹುಲಿಗೆಮ್ಮ ಮತ್ತೆ ಮುದುಕಿ ವೇಷದಲ್ಲಿ ಬಂದು ನೋಡಿದಾಗ ಏನಿಲ್ಲವ್ವ ಹರಳಯ್ಯನನ್ನು ಬಡಿದಿದ್ದರಿಂದ ಹೀಗಾಯಿತು ಎಂದು ಹೇಳಿದಾಗ ಆ ಮುದುಕಿ ಅಂದರೆ ಹುಲಿಗೆಮ್ಮ ನೋಡಪ್ಪ ನಾನು ನಿಮಗೆ ಒಂದು ಪ್ರಸಾದ ಕೊಡ್ತೀನಿ ಅದನ್ನು ನೀವು ತೊಗೋಬೇಕು ಎಂದಾಗ ಅಂಗೆ ಆಗ್ಲವ್ವ ನಮಗೆಲ್ಲನ ಈ ಜಡ್ಡು ಕಡಿಮೆಯಾದರೆ ಸಾಕು ಎಂದು ಹೇಳುತ್ತಾರೆ. ಆ ಮುದುಕಿ ಯೆಂಡ ಮತ್ತು ಖಂಡ (ಮಾಂಸ) ಕೊಡುತ್ತಾಳೆ. ಯೆಂಡವನ್ನು ಕುಡಿಯುತ್ತಾರೆ. ಮಾಂಸವನ್ನು ತಿನ್ನುತ್ತಾರೆ. ಆಗ ಕುಷ್ಠ, ಊನ ಮಾಯವಾಗುತ್ತದೆ. ಆಗ ಮುದುಕಿ ಹೇಳುತ್ತಾಳೆ ನೋಡ್ರಪ್ಪ ತೋಟದಲ್ಲಿ ತರಕಾರಿ ಕೇಳಿದವಳು ನಾನು ಹರಳಯ್ಯನದೇನು ತಪ್ಪಿಲ್ಲ ಎಂದು ಹೇಳಿ ಹೋಗುತ್ತಾಳೆ.

ಮುಂದೆ ಹರಳಯ್ಯನ ಮನೆಗೆ ಬಂದು ನೋಡು ಹರಳಯ್ಯನನ್ನ ತಪ್ಪನ್ನು ನಿಮ್ಮ ಮೇಲೆ ಹಾಕಿಕೊಂಡು ನನ್ನನ್ನು ಉಳಿಸಿದ್ದೀರಾ. ಅದಕ್ಕೆ ಇಂದಿನಿಂದ ನಿಮ್ಮ ಮಗಳು ಮಾತಂಗಿ ನನ್ನ ಗೆಳತಿ ಅಂದ ಮೇಲೆ ಇನ್ನು ಮುಂದೆ ಆಕೆಯಿಂದ ನನ್ನ ಪ್ರಚಾರ ಆಗಬೇಕು. ಮೊದಲು ಪೂಜೆ ಆಕೆಗೆ ನಡೆಯಬೇಕು ನಂತರ ನನ್ನ ಪೂಜೆ ನಡೆಯಲಿ ಎಂದು ವರ ಕೊಡುತ್ತಾಳೆ. ಆಗ ಮಾತಂಗಿಗೆ ಹರುಷದಿಂದ (ಅರಸ್ವದ) ಎಂದು ಕಟ್ಟುತ್ತಾಳೆ. ಇಂದಿನಿಂದ ನೀನು ನನ್ನ ಭಕ್ತೆ, ನನ್ನ ಪೂಜೆಗೆ ಬರುವ ನೈವೇದ್ಯವೆಲ್ಲಾ ನಿನಗೆ ಮೊದಲು ಅರ್ಪಿತವಾಗಲಿ. ನನಗೆ ಉಟಿಗೆ ಮಾಡವವರಿಗೆಲ್ಲಾ ನೀನೇ ಕಟ್ಟಬೇಕು. ಇನ್ನು ಮುಂದೆ ನಿಮ್ಮ ಜನಾಂಗದವರೇ ನನ್ನ ಯಾವುದೇ ಪೂಜೆಗೆ ಮೊದಲಿರಬೇಕು.

ಆದ್ದರಿಂದ ಇಂದಿಗೂ ಮೊದಲು ಮಾತಂಗಿ ಪೂಜೆ ಮತ್ತು ಈವತ್ತಿಗೂ ಉಟಗಿ ಕಟ್ಟಬೇಕಾದರೆ ಅದು ಮಾತಂಗಿಯರೇ ಕಟ್ಟುತ್ತಾರೆ. ಅವರಿಲ್ಲದೆ ಯಾವ ಪೂಜೆ ನೆರವೇರುವುದಿಲ್ಲ. ಅಲ್ಲದೆ ಮಾತಂಗಿ ಸರಸ್ವತಿ ರೂಪವಾಗಿ ಹುಲಿಗೆಮ್ಮನ ದೇವಸ್ಥಾನದ ಆವರಣದಲ್ಲಿ ನೆಲೆಸಿದ್ದಾಳೆ.

**೬.೩ ಮೈಲಾರಲಿಂಗನ ಪಾದ**

ಹುಲಿಗೆ ಕ್ಷೇತ್ರದಲ್ಲಿ ಮಾತಂಗಿಯ ಮುಂದೆ ಒಂದು ಚಿಕ್ಕದಾದ ಕಲ್ಲಿನ ಕಂಬ ಇದೆ. ಅಲ್ಲಿ ಆ ಕಂಬದ ಕೆಳಗೆ ಕುದುರೆ ಮೇಲೆ ಒಬ್ಬಾತ ಕುಂತಿರುವ ಚಿತ್ರಣವನ್ನು ಕಾಣುತ್ತೇವೆ. ಮತ್ತು ಮುಂದೆ ಎರಡು ಜೋಡು ಪಾದ ಇದೆ.

ಕ್ಷೇತ್ರಕಾರ್ಯಕ್ಕೆ ಹೋದಾಗ ಅದು ಮೈಲಾರಲಿಂಗನ ಪಾದ ಎಂದು ತಿಳಿದುಬಂದಿತು. ಇದು ಯಾಕೆ ಇಲ್ಲಿ ಮೈಲಾರಲಿಂಗನ ಪಾದ ಮತ್ತು ಆ ಚಿತ್ರಣ ಎಂದು ಕೇಳಿದಾಗ, ಒಂದು ಕಥೆಯನ್ನು ಹೇಳುತ್ತಾರೆ.

ಹುಲಿಗೆಮ್ಮ ಮೈಲಾರಲಿಂಗ ಅಣ್ಣತಂಗಿಯರು. ಅಲ್ಲದೆ ಹುಲಿಗೆಮ್ಮ, ಹುಚ್ಚಂಗೆಮ್ಮ, ಹೊಸೂರಮ್ಮ, ಎಲ್ಲಮ್ಮ ಹೀಗೆ ಇವರುಗಳು ಮೈಲಾರಲಿಂಗನ ತಂಗಿಯರು. ಇವರೆಲ್ಲರೂ ಸೇರಿ ಮೈಲಾರಲಿಂಗಗೆ ಮದುವೆ ಮಾಡಲು ಯೋಚಿಸಿರುತ್ತಾರೆ. ಅಣ್ಣ ನಿನಗೊಂದು ಹೆಣ್ಣು ನೋಡಿವಿ ಮದುವೆ ಮಾಡಿಕೊ ಎಂದಾಗ ಆಗಲರೆವ್ವ ಅದು ಎಂತ ಹೆಣ್ಣು ನೋಡ್ತಿರಿ ನೋಡ್ರೀ ಎಂದು ಹೇಳುತ್ತಾನೆ ನಮ್ಮ ಮೈಲಾರಲಿಂಗ. ಇನ್ನೇನು ಮದುವೆನೂ

ಆಗುತ್ತೆ. ಮದುವೆಗೆ ಎಲ್ಲ ಅಕ್ಕತಂಗಿಯರಿಗೆ ಉಡಕ್ಕಿ ಹಾಕುತ್ತಾನೆ. ಯಾರು ಯಾರಿಗೆ ಏನೇನು ಬೇಕೋ ಅದನ್ನು ಕೊಟ್ಟು ಅವರವರ ಗಂಡನ ಮನೆಗೆ ಕಳಿಸುತ್ತಾನೆ.

ಇನ್ನೇನು ಹುಲಿಗೆಮ್ಮಗ ಉಡಕ್ಕಿ ಹಾಕಿ ಕಳಿಸಬೇಕು, ಏನವ್ವ ಹುಲಿಗೆವ್ವ ಎಲ್ಲರಿಗೂ ಉಡಕ್ಕಿ ಹಾಕಿ ಕಳಿಸಿದೆ. ಅವರು ಕೇಳಿದ್ದನ್ನು ಕೊಟ್ಟೆ, ಇನ್ನು ನಿನಗೇನು ಬೇಕವ್ವ ಕೇಳು ಎಂದಾಗ ಅಣ್ಣಾ ನನಗ ನಿನ ಭಂಡಾರದಾಗ ಅಧರ ಭಂಡಾರ ಕೊಡು, ಯಾಕೆಂದರ ಈ ಭಂಡಾರದಿಂದ ತಾನೇ ನೀನು ಅಷ್ಟು ಜನರನ್ನು ನಿನ್ನ ಜಾತ್ರೆಗೆ ಪಡಿದಿರುವುದು ಎಂದು ಹೇಳಿದಾಗ ಮೈಲಾರಲಿಂಗ ಕೊಡಲು ನಿರಾಕರಿಸುತ್ತಾನೆ. ಮತ್ತು ಯೋಚನೆ ಮಾಡುತ್ತಾನೆ.

ಆಗ ಮೈಲಾರಲಿಂಗ ಸ್ನಾನಕ ಹೋಗಬೇಕಾಗಿರುತ್ತೆ, ಅದಕ ಒಬ್ಬ ಕಾವಲುಗಾರನ ನೇಮಿಸಿ ಆತನಿಗೆ ಕಿವಿಯಲ್ಲಿ ಇಲ್ಲಿ ಯಾರು ಬಂದರೂ ಬಿಡಬೇಡ ಎಂದು ಹೇಳಿ ಸ್ನಾನಕ್ಕ ನಮ್ಮ ಮೈಲಾರಲಿಂಗ ಹೋಗುತ್ತಾನೆ. ಅಷ್ಟರಗ ಹುಲಿಗೆಮ್ಮ ಉಪಾಯ ಮಾಡಿಕೊಂಡು ಬರ್‍ತಾಳ. ಅಯ್ಯೋ ನಮ್ಮಣ್ಣನ ಕೋಣಿ ನೋಡು ಎಂಗ ಗಲೀಜ್ಯಾಗದ ಯಲಿಯಪ್ಪ ಸ್ವಲ್ಪ ನಮಣ್ಣನ ಕ್ವಾಣಿನ ಕಸಗುಡಿಸಿ ನೀಟು ಮಾಡ್ತಿನಿ ಎಂದು ಆ ಕ್ವಾಣಿ ಒಳಗ ಹುಲಿಗೆವ್ವ ಹೋಗುತ್ತಾಳೆ. ಆಗ ಅಲ್ಲಿ ರಾಶಿಯಷ್ಟು ಭಂಡಾರದಗ ಒಂದಿಷ್ಟು ತಗೊಂಡು ಬಿಡ್ತಾಳೆ. ಹಿಂದೆಲೆ ತನ್ನ ಕ್ಷೇತ್ರಕ್ಕೆ ಬಂದು ನೆಲೆಸಿಬಿಡುತ್ತಾಳೆ.

ಮೈಲಾರಲಿಂಗ ಸ್ನಾನ ಮುಗಿಸಿ ಬಂದು ಭಂಡಾರ ನೋಡುತ್ತಾನೆ. ಆಕಿ ತಕ್ಕೊಂಡಿದ್ದು ಗುರುತು ಬಿದ್ದಿರುತ್ತದೆ. ಆಗ ಹುಲಿಗೆವ್ವಗೆ ಬಂಗಾರ ಗಿಂಡಿ ತಗೊಂಡು ಕುದುರೆಯೇರಿ ಮೈಲಾರ ಲಿಂಗ ಹುಲಿಗಿ ಕ್ಷೇತ್ರಕ್ಕೆ ಬರುತ್ತಾನೆ. ಬಂದು ಇಲ್ಲೆ ನಿಂತ ಎಂದು ವಕ್ತೃ ಒಬ್ಬರು ವಿವರಿಸುತ್ತಾರೆ. ಆದರೆ ಮುಂದೇನಾಯಿತೆನ್ನುವುದರ ಬಗ್ಗೆ ಹೇಳಲಿಲ್ಲ. ಅಷ್ಟೇ ಬಂದ, ನಿಂತದ್ದರಿಂದ ಅದು ಮೈಲಾರಲಿಂಗನ ಪಾದ ಎಂದು ಇದನ್ನು ಹೇಳುತ್ತಾರೆ ಎಂದಷ್ಟೆ ವಿವರಿಸುತ್ತಾರೆ.

ಆದರೆ ಮೈಲಾರಲಿಂಗನ ಭಕ್ತರಾದ ಕುರುಬರು ಕಳ್ಳು ಒಕ್ಕಲಿಗರು ಆದ್ದರಿಂದ ಹುಲಿಗೆಮ್ಮನ ಜಾತ್ರೆಗ ಎಬರುವ ಹಾಗಿಲ್ಲ ಮತ್ತು ಹುಲಿಗೆವ್ವ ಶಾಪವಾಗಿ ತನ್ನ ಅಣ್ಣಗೆ ನಿನ್ನ ಪರಿಷೆಗೆ ಬಂದರು ನನ್ನ ಪರಿಷೆಗೆ ಬರಬಾರದು, ನನ್ನ ಪರಿಷೆಗೆ ಬಂದರು ನಿನ್ನ ಪರಿಷೆಗೆ ಬರಬಾರದು ಎನ್ನುವ ಶಾಪ ಕೊಟ್ಟಿದ್ದಾಳೆ ಎಂದು ಹೇಳಲಾಗುತ್ತದೆ. ಒಂದು ಉದಾಹರಣೆಯ ಮೂಲಕ ಹೇಳುವುದಾದರೆ, ಹೊಸಪೇಟೆಯಲ್ಲಿ ಒಬ್ಬ ಬೇಡ ಜನಾಂಗದ ಮಹಿಳೆಯೊಬ್ಬಳು ನೀಡುವ ವಿವರಣೆಯನ್ನು ನೋಡಬಹುದು. "ಹಿಂಗ ಊರು ನೋಡಕೋದಾಗ ಮೈಲಾರಲಿಂಗನ ನೋಡಕ ಹೋಗಿದ್ದಳಂತೆ. ಬರುತ ಮೈಲಾರಲಿಂಗನ ಪೋಟೋ ತಗಂಡು ಬಂದು ಮನೆಯಲ್ಲಿ ಹುಲಿಗೆಮ್ಮನ ಪಡ್ಲಿಕಿ ಜೊತೆ ಆ ಪೋಟೋ ಇಟ್ಲಂತೆ. ಇಟ್ಟು ಸ್ವಲ್ಪ ಹೊತ್ತು ಆಗಲಿಲ್ಲ ಮಕ (ಮುಖ) ಎಲ್ಲಾ ಹುಳುಗಳು ಆಡಲಿಕ್ಕೆ ಶುರುವಾದವಂತೆ. ಮತ್ತು ಮನೆಯಲ್ಲಿ ಎಲ್ಲರಿಗೂ ಕಜ್ಜಿಗಳಾಗಿ ಉರಿಕಾಣಲು ಆರಂಭವಾಯಿತಂತೆ. ಮತ್ತೆ ಆಗ ಹುಲಿಗೆವ್ವಗ ಯವ್ವ ತೆಪ್ಪಾಯಿತವ್ವ ನಿನ್ನ ಗುಡಿಗೆ ಬಂದು ತಪ್ಪು ಕಾಣಿಕೆ ಸಲ್ಲಿಸುತ್ತೀವಿ ಎಂದು ಬೇಡಿಕೊಂಡರಂತೆ. ಆಗ ಅಲ್ಲಿದ್ದ ಮೈಲಾರಲಿಂಗನ ಪೋಟೋವನ್ನು ಹತ್ತಿರ ಇರುವ ಹನುಮಪ್ಪ ಗುಡಿಯಲ್ಲಿ ಇಟ್ಟು ಬಂದರಂತೆ. ಆಗ ಇದ್ದಕ್ಕಿದ್ದಂತೆ ಹುಳುಗಳೆಲ್ಲ ಮಾಯವಾದವಂತೆ.

ಆಗ ಎಲ್ಲರೂ ಹುಲಿಗೆಮ್ಮನ ಕ್ಷೇತ್ರಕ್ಕೆ ಹೋಗಿ ಹೊಳೆಯಲ್ಲಿ ಸ್ನಾನಮಾಡಿ ಗುಡಿಸುತ್ತ ಐದು ಪ್ರದಕ್ಷಿಣೆ ಹಾಕಿ ಯವ್ವ ತೆಪ್ಪಾಯಿತವ್ವ ನಮ್ಮನ್ನ ಕ್ಷಮಿಸಿ ಬಿಡು ಅಂತ ಬೇಡಿಕೊಂಡು ಕಾಣಿಕೆ ಸಲ್ಲಿಸಿ ಕಾಯಿ ಒಡೆಸಿಕೊಂಡು ಬಂದರಂತೆ". ಅಂದರೆ ಈ ಉದಾಹರಣೆಯ ಪ್ರಕಾರ ಒಟ್ಟಾರೆ ಹುಲಿಗೆಮ್ಮಗೆ ಮೈಲಾರಲಿಂಗಗೆ ಆಗಿ ಬರಲಿಲ್ಲ ಎನ್ನುವುದು ಗೊತ್ತಾದರೂ ಪ್ರಶ್ನಾರ್ಥಕವಾಗಿ ಇಲ್ಲಿ ಯಾಕೆ ಮೈಲಾರಲಿಂಗ ನಿಂತ ಎನ್ನುವುದು ಪ್ರಶ್ನೆಯಾಗಿಯೇ ಉಳಿದಿದೆ.

**೬.೪ ಕೊರವಂಜಿ ಕಲ್ಲು**

ಹುಲಿಗೆಮ್ಮ ದೇವಿಯ ಗುಡಿಯಲ್ಲಿ ಪರಶುರಾಮನ ಎದುರಿಗೆ ಒಂದು ಕಲ್ಲಿದೆ. ಅದಕ್ಕೆ ಕೊರವಂಜಿ ಕಲ್ಲು ಎಂದು ಕರೆಯುತ್ತಾರೆ. ಈ ಕಲ್ಲಿಗೆ ಒಂದು ಐತಿಹ್ಯವಿದೆ. ಹುಲಿಗೆಮ್ಮಗೆ ಪರಶುರಾಮನು ತುಂಬಾ ತೊಂದರೆಯನ್ನು ಕೊಟ್ಟಿರುತ್ತಾನೆ. ಯಾಕೆಂದರೆ ಪರಶುರಾಮ ಒಮ್ಮೆ ಬೀದಿ ಹುಡುಗರ ಜೊತೆ ಆಟವಾಡಲು ಹೋದಾಗ ಹುಡುಗರೆಲ್ಲರು ಪರಶುರಾಮನಿಗೆ ನಿನ್ನ ತಂದೆ ಯಾರು? ಎಂದು ಕೇಳಿರುತ್ತಾರೆ. ಇದನ್ನು ತಡಿಯಲಾಗದ ಪರಶುರಾಮ ತನ್ನ ತಾಯಿಯಾದ ಹುಲಿಗೆಮ್ಮನಿಗೆ ತನ್ನ ತಂದೆಯ ಹೆಸರು ಕೇಳಲು ಹೋಗಿ ಅನ್ನಬಾರದ ಮಾತನ್ನು ಅಂದು ಮನಃ ನೋಯಿಸಿರುತ್ತಾನೆ. ಆಗ ಹುಲಿಗೆಮ್ಮ ಇನ್ನು ಮೇಲೆ ನೀನು ನನ್ನಿಂದ ದೂರ ಇರು ಎಂದು ಹೇಳಿದಾಗ ಪರಶುರಾಮ ಹುಲಿಗೆಮ್ಮನ ಗುಡಿಯಿಂದ ದೂರ ಇರುತ್ತಾನೆ.

ಈವತ್ತಿಗೂ ಹುಲಿಗೆಮ್ಮನ ಗಂಟೆ ಪರಶುರಾಮನಿಗೆ ಕೇಳಿಸುವುದಿಲ್ಲ. ಅಲ್ಲದೆ ಪರಶುರಾಮನ ಗಂಟೆ ಹುಲಿಗೆಮ್ಮನಿಗೆ ಕೇಳಿಸುವುದಿಲ್ಲ ಎಂಬುದು ಜನರ ಅಭಿಪ್ರಾಯವಾಗಿದೆ. ಹೀಗೆ ಪರಶುರಾಮ ದೂರ ಇರುವಾಗ ಒಂದು ತನ್ನ ಗೆಳತಿಯಾದ ಮಾತಂಗಿ ಹತ್ತಿರ ಹುಲಿಗೆಮ್ಮ ಹೋಗಿ ನೋಡೆ ಮಾತಂಗಿ ಯಾಕೋ ನನ್ನ ಮಗನ್ನ ನೋಡೋ ಆಶೆಯಾಗಿದೆ. ಹೆಂಗ ಮಾಡ್ಲವ್ವ ಆತನ ಬೇರೆ ಬೈದು ಬಿಟ್ಟೀಗಿ. ನೀನೇ ಹೇಳು ಮಾತಂಗಿ ಏನು ಮಾಡ್ಲಿ ಅಂದಾಗ ಆಗ ಮಾತಂಗಿ ನೀನು ಕೊರವಂಜಿ ಅವತಾರವಾಗಿ ಹೋಗಿ ಮಾತಾಡಿಸು ಎಂದು ಹೇಳುತ್ತಾಳೆ. ಆಗ ಹುಲಿಗೆಮ್ಮ ಕೊರವಂಜಿ ಅವತಾರದಲ್ಲಿ ಹೋಗಿ 'ಏ' ರಾಮ ಎಂದು ಕೂಗುತ್ತಾಳೆ. ಆಗ ರಾಮ ಹೊರಗಡೆ ಬರುವ ಹೊತ್ತಿಗೆ ಪರಶುರಾಮನನ್ನು ಹುಲಿಗೆಮ್ಮ ಕಂಡು ತಕ್ಷಣ ಕಲ್ಲಿನ ರೂಪವಾಗಿ ಹೋಗುತ್ತಾಳೆ. ಆ ಸ್ಥಳದಲ್ಲೇ ನೆಲೆಸಿದ್ದರಿಂದ ಆ ಸ್ಥಳಕ್ಕೆ ಕೊರವಂಜಿ ಕಲ್ಲು ಎಂದು ಹೇಳುತ್ತಾರೆ. ಯಾಕೆಂದರೆ ಆ ಕಲ್ಲಿನ ಅವತಾರವೇ ಹಾಗಿದೆ, ಒಂದು ಉದ್ದನೆಯ ಕಲ್ಲಿನ ಮೇಲೆ ಬುಟ್ಟಿಯಾಕಾರದ ಕಲ್ಲಿದೆ. ಆ ಕಲ್ಲನ್ನು ತಿರುಗಿಸಿದರೆ ಮತ್ತು ಅದು ಗರ ಗರ ತಿರುಗಿದರೆ ಮನದ ಬೇಡಿಕೆ ಪೂರೈಸುತ್ತದೆ ಎಂದು ಕೆಲವರ ಅಭಿಪ್ರಾಯವಾಗಿದೆ. ಕೊರವಂಜಿ ಹೇಳಿದರೆ ಅದು ನಿಜವಾಗುತ್ತದೆ ಎಂದು ಅದನ್ನು ತಿರುಗಿಸಿ ಮನೋಕಾಮನೆ ಎಷ್ಟೋ ಈಡೇರಿವೆ ಎಂದು ಹೇಳುತ್ತಾರೆ. ಇಂದಿಗೂ ಮಂಗಳವಾರ, ಶುಕ್ರವಾರ, ಹುಣ್ಣಿಮೆಗೆಂದು ಬಂದಿರುವ ಜನರು ಇದನ್ನು ತಿರುಗಿಸಿ ನಮಸ್ಕರಿಸಿ ಹೋಗುವುದನ್ನು ಕಾಣುತ್ತೇವೆ.

## ೬.೫ ಪರಶುರಾಮ

ಎಲ್ಲಿ ತಾಯಿ ಇರಬೇಕು ಅಲ್ಲಿ ಮಗನಿರಬೇಕು ಎನ್ನುವ ಸಲುವಾಗಿ ಇಲ್ಲಿ ಹುಲಿಗೆಮ್ಮನ ದೇವಸ್ಥಾನದಲ್ಲಿ ಮಗನನ್ನು ಇರಿಸಲಾಗಿದೆ. ಆದರೆ ಹುಲಿಗೆಮ್ಮನಿಗೆ ಭಾರಿಸಿದ ಘಂಟೆಯು ಪರಶುರಾಮನಿಗೆ ಕೇಳಿಸುವುದಿಲ್ಲ. ಪರಶುರಾಮನಿಗೆ ಬಾರಿಸಿದ ಘಂಟೆಯು ಹುಲಿಗೆಮ್ಮನಿಗೆ ಕೇಳಿಸಬಾರದೆಂಬ ಉದ್ದೇಶವಿದ್ದರೂ ದೇವಸ್ಥಾನದ ಆವರಣದಲ್ಲಿಯೇ ಸ್ವಲ್ಪ ದೂರದಲ್ಲಿಯೇ ಪರಶುರಾಮನನ್ನು ಪ್ರತಿಷ್ಠಾಪಿಲಾಗಿದೆ. ಯಾಕೆಂದರೆ ತಂದೆ ಯಾರೆಂದು ಕೇಳಿದ ಗೆಳೆಯರ ಬಳಗ ಪರಶುರಾಮನು ತಾಯಿಯಾದ ಹುಲಿಗೆಮ್ಮನಿಗೆ ಬಹಳ ಕಷ್ಟವನ್ನು ಕೊಟ್ಟಿರುತ್ತಾನೆ. ಆದರೂ ಹುಲಿಗೆಮ್ಮ ತನ್ನ ಶಕ್ತಿಯನ್ನು ಪ್ರದರ್ಶಿಸಿ ಅಸಾಧ್ಯವಾಗಲಾರದನ್ನು ಸಾಧ್ಯವಾಗಿರಿಸುತ್ತಾಳೆ. ಇಷ್ಟೆಲ್ಲಾ ಆದರೂ ತಾಯಿಯನ್ನು ಅನುಮಾನಿಸಿರುವುದರಿಂದ ಸ್ವಲ್ಪ ದೂರ ದೂರ ಆಗಿ ಇಲ್ಲಿ ಈ ಕ್ಷೇತ್ರದಲ್ಲಿ ನೆಲೆಸಿದ್ದಾರೆ.

## ೬.೬ ಅಜ್ಜಯ್ಯ

ಅಜ್ಜಯ್ಯ ಎನ್ನುವಾತ ಹುಲಿಗೆಮ್ಮ ಗುಡಿಯ ಕಾವಲುಗಾರ ಎಂದು ಕೆಲವರ ಹೇಳಿಕೆ. ಇನ್ನು ಕೆಲವರು ಇದಿಷ್ಟು ಅಂದರೆ ಹುಲಿಗಿ ಕ್ಷೇತ್ರ ಎಲ್ಲ ಅಜ್ಜಯ್ಯನ ಹೊಲ ಎಂದು ಹೇಳುವರು. ಈ ಕ್ಷೇತ್ರದಲ್ಲಿ ಹುಲಿಗೆಮ್ಮ ಬಂದು ಪಡ್ಲಿಕಿ ಜೊತೆಗೆ ಸೋಮಲಿಂಗನ ಹತ್ತಿರ ಬಂದು ಜಾಗ ಕೇಳಿದಳು ಎಂದು ಹೇಳುತ್ತಾರೆ. ಅಲ್ಲದೆ ಅಜ್ಜಯ್ಯ ಈ ದೇವಸ್ಥಾನದ ಕಾವಲುಗಾರನಾಗಿದ್ದ ಮೊದಲು ಹುಲಿಗಿ ಕ್ಷೇತ್ರದಲ್ಲಿ ದೇವಸ್ಥಾನವನ್ನು ಕಾಯುತ್ತಿದ್ದ. ಮೊದಲು ಈತನನ್ನು ದ್ವಾರಬಾಗಿಲ ಹತ್ತಿರ ನಿಲ್ಲಿಸುತ್ತಿದ್ದರು. ಆದರೆ ಈಗ ಆ ಕಡೆ ನಿಲ್ಲಿಸಿದ್ದಾರೆ. ಈ ಧಾರ್ಮಿಕ ಕ್ಷೇತ್ರದ ಮೆಂಬರ್ ಆಗಿರುವ ಬಾರಿಕೇರ್ ಮಹಿಳೆಯೋರ್ವಳ ಪ್ರಕಾರ "ನಾವೇ ನಮ್ಮ ಮನೆಯಿಂದಲೇ ಪವಾಡ ಹೊರಡುವುದು. ನಮ್ಮ ಪೂರ್ವಿಕರೇ ಪವಾಡ ಮಾಡುತ್ತಿದ್ದರು. ಆದರೆ ಇತ್ತೀಚಿನ ದೇಸಾಯಿ ದತ್ತಣ್ಣನವರು ತಮ್ಮ ಮನಃ ಬಂದಂತೆ ಮೂರ್ತಿಗಳನ್ನು ಎಲ್ಲಿ ಬೇಕಲ್ಲಿ ಸ್ಥಾಪಿಸಿರುತ್ತಾರೆ. ದ್ವಾರಪಾಲಕ ಅಜ್ಜಯ್ಯ ದ್ವಾರಬಾಗಿಲ ಮುಂದೆ ಇರಬೇಕೆ ವಿನಃ ಆಫೀಸಿನ ಹತ್ತಿರ ಹೋಗಿ ಇಡುವಂತಹದಲ್ಲ" ಎನ್ನವುದು ಅವರ ವ್ಯಂಗ್ಯದ ಮಾತುಗಳಾಗಿವೆ. ಬ್ರಾಹ್ಮಣ ಪೂಜಾರಿಗಳಿಂದ ಹುಲಿಗಿಯ ಆಚರಣಾತ್ಮಕವಾದಂತಹ ಮೂಲ ಸ್ವರೂಪಕ್ಕೆ ಧಕ್ಕೆ ಬಂದಿರುವುದು ಇದರಿಂದ ಸ್ಪಷ್ಟವಾಗುತ್ತದೆ.

## ೬.೭ ಸೋಮನಾಥ ದೇವಾಲಯ

ಹುಲಿಗಿ ಕ್ಷೇತ್ರದಲ್ಲಿ ತುಂಗಭದ್ರಾ ನದಿಯು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದೇ ನದಿ ದಂಡೆಯಲ್ಲಿ ಹುಲಿಗಿ ದೇವಸ್ಥಾನಕ್ಕೆ ತಾಗಿಕೊಂಡಂತೆ ಸೋಮೇಶ್ವರ ದೇವಸ್ಥಾನವೊಂದಿದ್ದು ಅದು ಆಕರ್ಷಕವಾಗಿದೆ. ಹುಲಿಗಿ ಕ್ಷೇತ್ರವು ಒಟ್ಟಾರೆಯಾಗಿ ಸಮತಟ್ಟಾದ ಪ್ರದೇಶವಾಗಿದ್ದು ತುಂಗಭದ್ರಾ ನದಿಯ ದಂಡೆಯಲ್ಲಿದೆ. ಸು. ಕ್ರಿ.ಶ. ೧೨ನೆಯ ಶತಮಾನದಲ್ಲಿಯೇ ಹುಲಿಗಿ ಕ್ಷೇತ್ರದಲ್ಲಿ ಬೇಸಾಯ ಚೆನ್ನಾಗಿ ನಡೆಯುತ್ತಿತ್ತೆಂಬುದಕ್ಕೆ ಹುಲಿಗಿಯಲ್ಲಿರುವ ಸೋಮೇಶ್ವರ ದೇವಸ್ಥಾನದಲ್ಲಿರುವ ಶಾಸನವೇ ಸಾಕ್ಷಿಯಾಗಿದೆ. ಈ ಶಾಸನದ ಪ್ರಕಾರ ಚೌಡಿಭಟ್ಟನೆಂಬುವನು ತುಂಗಭದ್ರೆಯಿಂದ ಕೃಷಿ ಭೂಮಿಗೆ ಬೇಕಾದಷ್ಟು ನೀರು ಒದಗಿಸುವ ಕೆಲಸ ಮಾಡುತ್ತಿದ್ದನು ಎಂದು ಹೇಳಲಾಗಿದೆ.

ಜನರ ಪ್ರಕಾರ ಸೋಮನಾಥ ದೇವಾಲಯದಲ್ಲಿ ನಾಗಜೋಗಿ ಬಸವ ಜೋಗಿಯರು ಗುರುಗಳ ಹತ್ತಿರ ಪಾಠ ಹೇಳಿಸಿ ಕೊಡಲು ಬರುತ್ತಿದ್ದರು ಎನ್ನುವ ಮೌಖಿಕ ವಿವರಣೆ ನೀಡುತ್ತಾರೆ. ಇಂದಿಗೂ ಈ ಸೋಮನಾಥ ದೇವಾಲಯದಲ್ಲಿ ಯಾವುದೇ ಪೂಜೆ ಇರದಿದ್ದರೂ ಹುಲಿಗೆಮ್ಮನಿಗೆ ಬಂದ ಭಕ್ತರು ಇಲ್ಲಿಯೂ ಅಡುಗೆ ಮಾಡಿ ಊಟ ಮಾಡಿಕೊಂಡು ವಿಶ್ರಾಂತಿ ತೆಗೆದುಕೊಂಡು ಹೋಗುವುದನ್ನು ಕಾಣುತ್ತೇವೆ.

**೬.೮ ಹುಲಿಗೆಮ್ಮನ ಕ್ಷೇತ್ರದಲ್ಲಿ ಬನ್ನಿ ಮರ**

ಕ್ಷೇತ್ರದ ಜನಗಳಿಗೆ ದಸರಾ ಹಬ್ಬದಲ್ಲಿ ಹುಲಿಗೆಮ್ಮನಿಗೂ ನಮಸ್ಕರಿಸಿ ಹಾಗೆ ಈ ಬನ್ನಿ ಮರವನ್ನು ನಮಸ್ಕರಿಸಿ ಬೇಡಿಕೊಳ್ಳುತ್ತಾರೆ. ಕ್ಷೇತ್ರದ ಜನರೆಲ್ಲರೂ ಇಲ್ಲಿ ಬಂದು ಬನ್ನಿ ಮರವನ್ನು ಪೂಜಿಸುತ್ತಾರೆ. ಅಲ್ಲಿದ ವಿವಿಧ ಪ್ರದೇಶಗಳಿಂದ ಬಂದ ಭಕ್ತರು ಹುಲಿಗೆಮ್ಮನಿಗೂ ನಮಸ್ಕರಿಸಿ ಈ ಬನ್ನಿ ಮರಕ್ಕೂ ಪೂಜೆ ಸಲ್ಲಿಸುತ್ತಾರೆ.

**೬.೯ ಹುಲಿಗೆಮ್ಮ ಪಾದ**

ಒಮ್ಮೆ ಹುಲಿಗೆಮ್ಮ ಹೊಸೂರಮ್ಮ ಇಬ್ಬರು ವಿಹಾರಕ್ಕೆಂದು ಬರುತ್ತಿದ್ದಾಗ ಹುಲಿಗೆಮ್ಮನಿಗೆ ಹುಲಿಗಿ ಕ್ಷೆತ್ರದ ಜಾಗ ಇಷ್ಟವಾಗಿ ಹೊಸೂರಮ್ಮನಿಗೆ ಹೇಳಿದಳಂತೆ. "ಹೊಸೂರಮ್ಮ ನನಗೆ ಈ ಜಾಗ ಇಷ್ಟವಾಗಿದೆ. ನಾನು ಅಲ್ಲೇ ಹೋಗಿ ನೆಲೆಸುತ್ತೇನೆಂದು ಹೇಳಿದಾಗ ಹೊಸೂರಮ್ಮ ಬೇಡ ಅದು ನದಿ ಪ್ರದೇಶ ಸ್ವಲ್ಪ ಜಾಸ್ತಿ ನೀರು ಬಂದಾಗ ನಿನ್ನ ಪ್ರದೇಶವು ಮುಳುಗಡೆಯಾಗಬಹುದು ಅಲ್ಲದೆ ಅದು ಹುಲಿಗಳ ನಾಡು, ನೀನು ಯಾಕೆ ಅಲ್ಲಿ ನೆಲೆಸುತ್ತೀಯ ಎಂದು ಹೇಳಿದಾಗ ಇಲ್ಲಿ ಹೊಸೂರಮ್ಮ ನನಗೆ ಆ ಜಾಗ ತುಂಬ ಇಷ್ಟವಾಗಿದೆ. ಆದ್ದರಿಂದ ನಾನು ಅಲ್ಲೇ ನೆಲೆಸಬೇಕೆಂದು ಹಟ ತೊಟ್ಟು ಎರಡೆ ಹೆಜ್ಜೆಯಿಟ್ಟು ಹುಲಿಗಿ ಕ್ಷೇತ್ರದಲ್ಲಿ ಬಂದು ನೆಲೆಸಿದಳು. ಒಂದು ನದಿಯ ಹತ್ತಿರ ಇರುವ ಪಾದ ಇನ್ನೊಂದು ನದಿಯಿಂದ ದೇವಸ್ಥಾನಕ್ಕೆ ಬಂದ ಪಾದ. ಆದ್ದರಿಂದ ನದಿಯ ಹತ್ತಿರ ಹುಲಿಗೆಮ್ಮನ ಪಾದವು ಇರುವುದರಿಂದ ಇಂದಿಗೂ ಆ ಪಾದಕ್ಕೆ ಭಕ್ತರೆಲ್ಲರೂ ಬೇವು ಲಕ್ಕಿ ಪತ್ರಿಗಳನ್ನು ಇಟ್ಟು ಕುಂಕುಮ ಭಂಡಾರ ಹಚ್ಚಿ ಪೂಜಿಸುತ್ತಾರೆ.

ಇನ್ನೊಬ್ಬರ ಪ್ರಕಾರ ಹುಲಿಗೆಮ್ಮ ಹೊಸೂರಮ್ಮ ಆ ಸ್ಥಳದಲ್ಲಿ ನಿಂತಿದ್ದರಿಂದ ಅದನ್ನು ಹುಲಿಗೆಮ್ಮನ ಪಾದ, ಹೊಸೂರಮ್ಮನ ಪಾದ ಎಂದು ಹೇಳುವರು.

**೬.೧೦ ಹುಲಿಗೆಮ್ಮನ ಪವಾಡದ ಸ್ಥಳದಲ್ಲಿ ನೆಲೆಸಿರುವ ದೇವರುಗಳು**

ಹಿಂದಿನ ಕಾಲದಲ್ಲಿ ಹುಲಿಗೆಮ್ಮ ಶಕ್ತಿ ಪುರುಷಿಣಿ ಎಂದು ತೋರಿಸಲು ಜಾತ್ರೆಯ ಸಮಯದಲ್ಲಿ ಮನುಷ್ಯರ ರುಂಡವನ್ನು ಕಡಿಯುತ್ತಿದ್ದರು. ಮತ್ತೆ ಭಂಡಾರ ಉಗ್ಗುವುದರ ಮೂಲಕ ಆ ರುಂಡವು ಒಂದಾಗಿ ಮತ್ತೆ ಮನುಷ್ಯ ಎದ್ದೇಳುತ್ತಿದ್ದ. ಅದನ್ನು ಈ ಸ್ಥಳದಲ್ಲಿಯೇ ಮಾಡಲಾಗುತ್ತಿತ್ತು ಎಂದು ಕಬ್ಬೇರು ಜನಾಂಗದ ವಕ್ತೃ ಹೇಳುವರು. ಆದರೂ ಇಂದಿಗೂ ಈ ಸ್ಥಳದಲ್ಲಿ ಮನುಷ್ಯರ ಬದಲು ಕುಂಬಳ ಕಾಯಿಯನ್ನು ಹೊಡೆಯಲಾಗುತ್ತದೆ. ಮತ್ತೆ ಅದು ಯಥಾಪ್ರಕಾರ ಕುಂಬಳ ಕಾಯಿಯಾಗಿ ಪರಿವರ್ತಿತವಾಗುತ್ತದೆ. ಆದ್ದರಿಂದ ಈ ಸ್ಥಳ ಇಂದಿಗೂ ಪೂಜಿಸುವ ಸ್ಥಳವಾಗಿದೆ.

### ೬.೧೧ ಹೊಸೂರಮ್ಮ

ತುಂಗಾಭದ್ರಾನದಿಯ ಒಂದು ಬಂಡೆಯಲ್ಲಿ ಹುಲಿಗಿ ಕ್ಷೇತ್ರವಿದ್ದರೆ, ಅದರ ಇನ್ನೊಂದು ದಂಡೆಯಲ್ಲಿ ಹೊಸೂರಮ್ಮನ ಗುಡಿಯಿದೆ. ಜನರು ಹೊಸೂರಮ್ಮನನ್ನು ಹುಲಿಗೆಮ್ಮನನ್ನು ಎಲ್ಲಮ್ಮ ಎಂದೇ ಭಾವಿಸುತ್ತಾರೆ. ಎರಡೂ ದೈವಗಳ ಜಾತ್ರೆ ಒಂದೇ ರೀತಿಯಲ್ಲಿ ನಡೆಯುತ್ತದೆ. ಹೊಸೂರಮ್ಮ ಹುಲಿಗೆಮ್ಮ ಈ ಪ್ರದೇಶದ ಪ್ರಧಾನ ದೈವಗಳು. ಕೃಷಿಕರು ಈ ದೈವಗಳ ಮುಖ್ಯ ಭಕ್ತರಾಗಿದ್ದಾರೆ. ಇವರು ಮುದ್ದಮ್ಮನ ಮಕ್ಕಳಾಗಿದ್ದು ಅಕ್ಕತಂಗಿಯರೆಂಬ ಭಾವನೆ ಜನಪದರಲ್ಲಿರುವುದನ್ನು ಕಾಣುತ್ತೇವೆ.

# ಅಧ್ಯಾಯ ಏಳು

# ಹುಲಿಗೆಮ್ಮ : ಕೆಲವು ಆಲೋಚನೆಗಳು

## ೭.೧ ಹುಲಿಗೆಮ್ಮ ಶಿಷ್ಟ ಸಂಸ್ಕೃತಿಯ ವಿರುದ್ಧ ನಡೆಸಿದ ಅನುಸಂಧಾನ

ಶಿಷ್ಟದೇವತಾರಾಧನೆಯ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವುದಾದರೆ ಹುಲಿಗೆಮ್ಮ ಬ್ರಾಹ್ಮಣರ ಮನೆದೇವತೆ ಮತ್ತು ಕುಲದೇವತೆಯಾಗಿರುವುದನ್ನು ಕಂಡುಕೊಳ್ಳುತ್ತೇವೆ. ಶಿಷ್ಟರ ಆರಾಧನೆಯಲ್ಲಿ ಹುಲಿಗೆಮ್ಮನನ್ನು ರೌದ್ರಸ್ವರೂಪಿಣಿಯಾಗಿ ನೋಡುವುದಿಲ್ಲ. ಅವರು ಹುಲಿಗೆಮ್ಮನನ್ನು ಪಾರ್ವತಿಯೆಂದೇ ಪೂಜಿಸುತ್ತಾರೆ. ಯಾಕೆಂದರೆ ಅವರ ಸೇವಾ ವಿಧಿವಿಧಾನಗಳಲ್ಲಿ, ಆಚರೆಗಳಲ್ಲಿ, ಆಹಾರಪದ್ಧತಿಗಳಲ್ಲಿ, ಸಂಪ್ರದಾಯಗಳಲ್ಲಿ ಇವೆಲ್ಲದರಲ್ಲಿ ಅವಳನ್ನು ಶಿಷ್ಟರೀತಿಯಲ್ಲಿಯೇ ನೋಡುತ್ತಾರೆ. ಬ್ರಾಹ್ಮಣರು ವೇದ, ಪುರಾಣಗಳ ಕಾಲದಿಂದಲೂ ಅವಳನ್ನು ಪಾರಾಯಣ ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ಇದರ ಪ್ರತಿರೂಪ ಎನ್ನುವುದಕ್ಕಿಂತ ಸಾಂಕೇತಿಕವಾಗಿ ಹುಲಿಗೆಮ್ಮ ಕ್ಷೇತ್ರದಲ್ಲಿ ಶಿಷ್ಟ ಮತ್ತು ಪರಿಶಿಷ್ಟ ರೀತಿಯಲ್ಲಿ ಆರಾಧನೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಒಂದು ರೀತಿಯಲ್ಲಿ ಡಾಮಿನೇಟಿಂಗ್ ಸಿಸ್ಟಮ್‌ಅನ್ನು ಕಾಣುತ್ತೇವೆ.

ಪರಿಶಿಷ್ಟ ಎನ್ನುವುದೇ ಜನಪದ ಎಂದರೂ ಶಿಷ್ಟಕ್ಕೆ ಬಂದಾಗ ಅಲ್ಲಿ ನಾಗರೀಕತೆಯ ಪ್ರಭಾವದ ಜೊತೆಗೆ ಧಾರ್ಮಿಕ ಸಾಂಸ್ಥೀಕರಣದ ಸ್ವರೂಪವನ್ನು ಕಾಣಬಹುದು. ಮಾತೃಮೂಲೀಯ ಆಶಯದ ದೇವತೆಯನ್ನು ಪುರುಷಪ್ರಾಧಾನ್ಯತೆ ವ್ಯವಸ್ಥೆಯ ವೈದ್ದಿಕ ಪೌರೋಹಿತ್ಯಶಾಹಿಯು ತನ್ನ ಮನುಷ್ಯ ವಿರೋಧಿ ನಿಲುವುಗಳಿಗೆ ತಕ್ಕಂತೆ ಬದಲಾಯಿಸುವ ಹುನ್ನಾರು ನಡೆಸಿರುವುದನ್ನು ಹುಲಿಗೆಮ್ಮ ಪಂಥದ ಆಚರಣಾತ್ಮಕ ವಿವರಗಳಿಂದ ತಿಳಿಯಬಹುದಾಗಿದೆ. ನಿದರ್ಶನಕ್ಕೆ ಹುಲಿಗೆಮ್ಮ ಮಾತೃಮೂಲೀಯ ಸಂಸ್ಕೃತಿಯನ್ನು ಪ್ರತಿನಿಧೀಕರಿಸುವ ಸಂಕೇತ ಎನ್ನುವುದಕ್ಕೆ ಪ್ರಸ್ತುತ ಬ್ರಾಹ್ಮಣರ ಮನೆಯಲ್ಲಿ ಹುಲಿಗೆಮ್ಮ ದೇವಿಯ ಆಚರಣೆಗಳಲ್ಲು ಸಹ ಹೆಚ್ಚಾಗಿ ಮಹಿಳೆಯ ಪಾತ್ರವೇ ಅಧಿಕವಾಗಿರುವುದನ್ನು ನೋಡಬಹುದು.ಹೊಸೂರಮ್ಮ ಹುಲಿಗೆಮ್ಮ ದೇವಿ ನಿನ್ನಾಲ್ಕುಧೋ... ಉಧೋ... ಎಂದರೂ ಅವರ ಮನಸ್ಸಿನಲ್ಲಿ ಇರುವುದು ಒಂದು ಗೌರಿಯ ಆರಾಧನೆ ಅಂದರೆ ಒಂದು ಪಾರ್ವತಿಯ ಆರಾಧನೆ. ಆದಕಾರಣ ಅವರ ಹೇಳಿಕೆಯ ಪ್ರಕಾರ ಪಾರ್ವತಿಯ ಇನ್ನೊಂದು ರೂಪವೇ ಹುಲಿಗೆಮ್ಮ ಎಂದು ಹೇಳುವುದಾಗಿದೆ.

ಇವರ ಮನೆಯ ದೇವಿಯ ಆಚರಣೆಯನ್ನು ಕಂಡಾಗ ಪಡ್ಲಿಗಿ ಆಚರಣೆಯನ್ನು ಒಂದು ಶುಭ ಸಂದರ್ಭದಲ್ಲಿಯೇ ಅದರಲ್ಲೂ ಮದುವೆಯ ಸಂದರ್ಭದಲ್ಲಿ ಅಥವಾ ಭರತ ಹುಣ್ಣಿಮೆಯ ಸಂದರ್ಭದಲ್ಲಿ ಅಥವಾ ಉಟಗಿಯ ಸಂದರ್ಭದಲ್ಲಿಯೇ ಕಂಡರೂ ಅವುಗಳಲ್ಲಿ ಶಿಷ್ಟರೀತಿಯನ್ನು ಕಾಣುತ್ತೇವೆ.

ಉಟಗಿಯು ಉಡಬೇಕಾದಾಗಲು ಮನೆಯಲ್ಲಿಯೇ ಹಂದರವನ್ನು ಹಾಕಿ ಅಂದರೆ ಒಳಗಿನಿಂದ ತಲಬಾಗಿಲವರೆಗೆ ನಡೆದುಕೊಂಡು ಬರುವುದು, ಎಲ್ಲೂ ಹೊರಗಡೆ ಈ ಉಟಗಿ ಉಟ್ಟಿಲ ಹೋಗದಿರುವುದು ಒಂದು ರೀತಿ ನಾಗರೀಕ ಸಂಸ್ಕೃತಿಯನ್ನು ಎತ್ತಿತೋರಿಸುತ್ತದೆ. ಯಾಕೆಂದರೆ ಅವರು ಎಷ್ಟೇ ಜ್ಞಾನವಂತರಾಗಿದ್ದು ಒಂದು ಅಗೋಚರ ಶಕ್ತಿಗೆ ಮಣಿದು ತಮಗೆ ಏನೋ ಕಷ್ಟಬಂದ ರೀತಿಯಲ್ಲಿ ದೇವಿಗೆ ಅಂದುಕೊಂಡು ಈ ಉಟಿಗೆ ಉಟ್ಟಿರಬಹುದು ಮತ್ತು ಅದರಿಂದ ಅವರಿಗೆ ಕಷ್ಟಪರಿಹಾರವಾಗಿ ತೊಂದರೆಗಳಿಲ್ಲದೆ ಒಳ್ಳೆಯದಾಗಿರಬಹುದು ಎನ್ನುವ ಕಾರಣಕ್ಕೆ ಈ ತೊಡುಗೆ ತೊಟ್ಟಿರಬಹುದು. ಮತ್ತು ಅಂದನಿಂದ ಹುಲಿಗೆಮ್ಮನ ಸಂಕೇತವಾಗಿ ಇದನ್ನು ಆಚರಿಸಿರಬಹುದು.

ಆದರೆ ಇತ್ತೀಚಿಗೆ ನಾಗರೀಕತೆಯ ಪ್ರಭಾವ ಹೆಚ್ಚಿದಂತೆಲ್ಲಾ ಇವರು ಬೇವಿನ ಎಲೆಯನ್ನು ಚಾಪೆರೀತಿಯಲ್ಲಿ ಮಾಡಿ ಅದನ್ನಿಟ್ಟು ಉಟಿಗೆಯ ಸಾಂಕೇತಿಕವಾಗಿ ಒಂದು ಮಣಿಯ ಅಕ್ಕಿ ಅರಿಶಿಣ ಕುಂಕುಮ ಹಾಕಿ ಈ ಉಟಗಿಯನ್ನಿಟ್ಟು ಪೂಜಿಸುವುದನ್ನು ನಾವು ಕಾಣುತ್ತೇವೆ. ಉಟಗಿಯ ಕಾರ್ಯಕ್ರಮ ಮುಗಿಯುವ ತನಕ ಉಪವಾಸವಿದ್ದು ಕೊನೆಗೆ ಅರಿಶಿಣ ಕುಂಕುಮವನ್ನು ಹಚ್ಚಿಕೊಂಡು ಕೈಯಲ್ಲಿ ದೀವಟಿಗೆಯನ್ನು ಹಿಡಿದು ತಲೆಗೆ ದಂಡೆಯನ್ನು ಹಾಕಿಕೊಂಡು ಕೈಯಲ್ಲಿ ದೀವಟಿಗೆಯನ್ನು ಹಿಡಿದು ತಲೆಗೆ ದಂಡೆಯನ್ನು ಹಾಕಿಕೊಂಡು ಬರುತ್ತಾರೆ. ಮನೆಯ ಹಂದರ ತನಕ ಬಂದು ಮತ್ತೆ ಒಳಗೆ ಹೋಗುವುದಾಗಿದೆ. ಅಂದರೆ ಇಲ್ಲಿ ಯಾವುದೇ (ಹೆಂಡ ಮತ್ತು ಖಂಡಗಳಿರುವುದಿಲ್ಲ) ಬದಲಾಗಿ ಕೋಸಂಬರಿ, ಪಾನಕವನ್ನು ತಯಾರು ಮಾಡಿರುತ್ತಾರೆ. ಅಂದರೆ ಈ ಪಾನಕವು ಹಸಿದ ಹೊಟ್ಟೆಗೆ ತಂಪು ಮಾಡುತ್ತದೆ. ಮತ್ತು ಹೆಸರು ಬೇಳೆಯು ತಂಪಿನ ಪದಾರ್ಥವೆಂದು ಇದನ್ನು ಎಲ್ಲರಿಗೆ ಪ್ರಸಾದವೆಂದು ಕೊಡುತ್ತಾರೆ.

ಪಡ್ಲಿಗಿ ತುಂಬಿಸುವಾಗಲೂ ಕೂಡ ಕೆಲವು ವಸ್ತುಗಳು ಇವರಲ್ಲಿ ನಿಷೇಧಿಸಲ್ಪಟ್ಟಿವೆ. ಪಡ್ಲಿಗಿ ತುಂಬಿಸುವಾಗ ಹೋಳಿಗೆ, ಕಡುಬು, ಅನ್ನ, ತಿಳಿಸಾರು, ತುಪ್ಪ, ಅಕ್ಕಿ, ಮತ್ತು ಜೋಳದೊಂದಿಗೆ ಪಡ್ಲಿಗಿಯನ್ನು ತುಂಬಿಸುತ್ತಾರೆ. ಬದನೆಕಾಯಿ, ಈರುಳ್ಳಿ, ಹಸಿಮೆಣಸಿನಕಾಯಿ ಬ್ರಾಹ್ಮಣರಲ್ಲಿ ನಿಷೇಧಿಸಲ್ಪಟ್ಟ ವಸ್ತುಗಳಾಗಿವೆ. ಆಹಾರ ಪದಾರ್ಥಗಳಲ್ಲಿ ರಜತ, ತಾಮಸ, ಸಾತ್ವಿಕ ಗುಣಗಳುಳ್ಳ ಪದಾರ್ಥಗಳನ್ನು ಇಲ್ಲಿ ಪಡ್ಲಿಗಿಗೆ ತುಂಬಿಸಿ ಆಚರಿಸುವ ಪದ್ಧತಿ ಇದೆ. ಇನ್ನು ಸೇವೆಗಳಲ್ಲಿ ಹುಲಿಗೆಮ್ಮನಿಗೆ ಶಿಷ್ಟರಲ್ಲಿ ಕಂಡಾಗ, ಹೆಜ್ಜೆ ನಮಸ್ಕಾರ ಮಾಡುವುದು ಅಥವಾ ನಿಂತಲ್ಲಿಯೇ ಐದು ಪ್ರದಕ್ಷಿಣೆ ಹಾಕುವುದು, ದೇವಿಪಾರಾಯಣ ಮಾಡುವುದು, ಶ್ಲೋಕವನ್ನು ಹೇಳಿಕೊಳ್ಳುವುದು, ಮಂತ್ರಗಳನ್ನು ಜಪಿಸುವುದು ಈ ರೀತಿಯಲ್ಲಿಯೂ ಹುಲಿಗೆಮ್ಮನಿಗೆ ತಮ್ಮ ಸೇವೆಯನ್ನು ಸಲ್ಲಿಸುವುದಾಗಿದೆ.

ಹುಲಿಗೆಮ್ಮನಿಗೆ ಮರದಲ್ಲಿ ಉಡಿ ಅಕ್ಕಿ ಸಾಮಾನುಗಳನ್ನು ತುಂಬಿ ಮುತ್ತೈದೆಯರೆಲ್ಲಾ ಸೇರಿ ಮುತ್ತೈದೆಯಾಗಿರುವ ಹುಲಿಗೆಮ್ಮನಿಗೆ ಬಾಗಿನ ಕೊಡುವುದು ಈ ರೀತಿಯಲ್ಲಿ ಕಾಣುತ್ತೇವೆ. ದೇವಿಗೆ ತುಪ್ಪದ ದೀಪ ಹಚ್ಚುವುದು, ಕರ್ಪೂರ ಬೆಳಗುವುದು ವಿನಃ ಯಾವುದೇ ರೀತಿಯ ಬಲಿಯ ಆಚರಣೆಯನ್ನು ಮಾಡುವುದಿಲ್ಲ. ಸಾಂಕೇತಿಕವಾಗಿ ಕಾಯಿಯನ್ನು ಹೊಡೆಸುತ್ತಾರೆ.

ಇನ್ನು ಭಂಡಾರವನ್ನು ಮನೆಯಲ್ಲಿ ಉಪಯೋಗಿಸುತ್ತಾರೆಂದರೆ ಭಂಡಾರದಲ್ಲಿ ವೈದ್ಯಕೀಯ ಗುಣವಿರುವುದರಿಂದ ಅದನ್ನು ಹುಲಿಗೆಮ್ಮನ ಹೆಸರೇಳಿ ಹಚ್ಚುವುದಾಗಿದೆ. ಇದೆಲ್ಲ ಶಿಷ್ಟ ಸಂಸ್ಕೃತಿಯಲ್ಲಿ ಕಂಡುಕೊಂಡಾಗ ಇನ್ನು ಪರಿಶಿಷ್ಟ ಸಂಸ್ಕೃತಿಯಲ್ಲಿ ಇದಕ್ಕೆ ವಿರುದ್ಧವಾದುದನ್ನು ನಾವು ಕಾಣುತ್ತೇವೆ. ಯಾಕೆಂದರೆ ಕೆಳವರ್ಗದ ಸಮುದಾಯದಲ್ಲಿ ಹೆಚ್ಚಾಗಿ ದೇವಿಯನ್ನು ಆರಾಧಿಸುವವರು ಸಮಾಜದಲ್ಲಿ ಶೋಷಣೆಗೊಳಪಟ್ಟು ದೇವಿಯನ್ನು ತಾವು ಅನುಕರಣೆ ಮಾಡಿಕೊಂಡು ತಮ್ಮ ತಿಳುವಳಿಕೆಗೆ ಹೊಂದಿಕೊಂಡಂತೆ ಆಚರಣೆಯನ್ನು ಆಚರಿಸುತ್ತಾ ಬಂದಿರುವುದನ್ನು ಕಾಣುತ್ತೇವೆ.

ಇಲ್ಲಿ ಹೆಚ್ಚಾಗಿ ಬಡತನ, ನಿರಕ್ಷರರಿಗಳು, ಆರ್ಥಿಕವಾಗಿ ಹಿಂದುಳಿದವರನ್ನು ಕಾಣುತ್ತೇವೆ. ಮೌಢ್ಯವನ್ನು ಹೆಚ್ಚಾಗಿ ಗ್ರಹಿಸುತ್ತೇವೆ.

ಇವರ ಉಟಗಿ ಆಚರಣೆಯಲ್ಲಿ ಡೊಳ್ಳು, ವಾದ್ಯಗಳು ಮತ್ತು ಹಿಂದುಳಿದ ಜನಾಂಗದವರಿಗೆ ದಲಿತವರ್ಗದವರೇ ಬಂದು ಉಟಿಗೆಯನ್ನು ಕಟ್ಟುವುದು. ಉಟಗಿ ಉಡುವ ದಿವಸ ಮುಂಜಾನೆಯಿಂದ ಉಪವಾಸವಿದ್ದು, ಸಂಜೆ ಕುಂಕುಮ ಭಂಡಾರದಿಂದ ಅಲಂಕರಿಸಿಕೊಂಡು ತಲೆಗೆ ದಂಡೆಯನ್ನು ಹಾಕಿಕೊಂಡು ಉಟಗಿ ಉಟ್ಟುಕೊಂಡು ಮೇಲೆ ಸ್ಯಾಕಿಮಗಿ ಎಂದು ಹೆಂಡವನ್ನು ಹೊತ್ತುಕೊಂಡು ಮನೆಯಿಂದ ಸ್ವಲ್ಪದೂರ ಹೋಗಿ ಅಲ್ಲಿ ಉಟಿಗೆಯನ್ನು ಬಿಡುವುದು ನಂತರ ಕುರಿಯನ್ನು ಬಲಿಕೊಡುವುದು ನಂತರ ಎಲ್ಲರೂ ಊಟಮಾಡುವುದು ಅಲ್ಲದೆ ಭರತ ಹುಣ್ಣಿಮೆಯ ಆಚರಣೆಗಳಲ್ಲಿ ಪಡ್ಲಿಗಿ ತುಂಬಿಸುವುದು ಆಗ ಇವರು ಕೂಡ ಮುಂಜಾನೆಯಿಂದ ಉಪವಾಸವಿದ್ದು ಮಂಗಳವಾರದಂದೇ ತುಂಬಿಸುವಾಗ ಅಕ್ಕಿ, ಜೋಳ, ಕಾಯಿಪಲ್ಲೆಗಳಾದ ಹಸಿಮೆಣಸಿನಕಾಯಿ, ಬದನಿಕಾಯಿ, ಉಳ್ಳಾಗಡ್ಡಿ, ಮೂಲಂಗಿ, ರಾಜಗೀರಿ ಪಲ್ಯೆ ಜೊತೆಗೆ ಹೋಳಿಗೆಯ ಜೊತೆಗೆ ಬದನಿಕಾಯಿ ಪಲ್ಲೆ, ಚಿತ್ರಾನ್ನ, ಅನ್ನ, ಸಾರು ಇಟ್ಟು ಪಡ್ಲಿಗಿಯನ್ನು ತುಂಬಿಸುವುದಾಗಿದೆ. ಮತ್ತು ಜೋಗಪ್ಪರನ್ನು ಕರೆಯಿಸಿ ಚೌಡಿಕೆ ಬಾರಿಸುವುದರ ಮೂಲಕ ಹಾಡು ಹೇಳುವುದು, ಜೋಗತಿಯರನ್ನು ಕರೆಯಿಸಿ ಜೋಗ ಹಾಕಿಸುವುದಾಗಿದೆ.

ಸೇವೆಗಳಲ್ಲಿ ಹುಲಿಗೆಮ್ಮನಿಗೆ ದೀರ್ಘನಮಸ್ಕಾರ ಹಾಕುವುದು ಹೊಳೆಯಲ್ಲಿ ಸ್ನಾನಮಾಡಿ ಅಲ್ಲಿಂದಲೇ ದೀರ್ಘ ನಮಸ್ಕಾರ ಹಾಕುವುದು, ಉಪ್ಪನ್ನು ಹಾಕುವುದು, ಬ್ಯಾಟಿ ಮಾಡುವುದು ಈ ರೀತಿ ಕಂಡುಕೊಂಡಾಗ ಇವು ಶಿಷ್ಟ ಮತ್ತು ಪರಿಶಿಷ್ಟ ವರ್ಗಗಳ ವ್ಯತ್ಯಾಸತೆಯನ್ನು ಕಾಣುತ್ತೇವೆ. ಅಂದರೆ ಮೊದಲಿನಿಂದಲೂ ಆರಾಧನೆ ಸ್ಥಾನವನ್ನು ಆರ್ಚಕರ ಸ್ಥಾನವನ್ನು ಈ ಶಿಷ್ಟವರ್ಗದವರೇ ಅನುಸರಿಸುತ್ತ ಬಂದಿರುವುದನ್ನು ಕಂಡು ಪರಿಶಿಷ್ಟ ವರ್ಗದವರು ಇವರಿಗೆ ಎದುರಾಗಿ ತಾವು ಗ್ರಾಮದ ಸೃಷ್ಟಿಯೊಂದಿಗೆ ದೇವತೆಯಾದ ಹುಲಿಗೆಮ್ಮನನ್ನು ತಮ್ಮ ದೈವ, ಊರಿನ ದೈವವೆಂದು ಬಗೆದು ಅವರು ತಮಗೆ ಬೇಕಾದ ರೀತಿಯಲ್ಲಿ ತಮಗೆ ಅನುಕೂಲವಾಗಿರುವ ರೀತಿಯಲ್ಲಿ ತಮ್ಮದೇ ಜ್ಞಾನದೊಂದಿಗೆ ತಮ್ಮದೇ ಆಚರಣೆಗಳೊಂದಿಗೆ ತಾವು ಶಿಷ್ಟರ ವಿರುದ್ಧವಾಗಿ ಆಚರಿಸುತ್ತಾ ಬಂದಿರುವುದನ್ನು ಎನ್ನುವುದಕ್ಕಿಂತ ಬಂದಿರಬಹುದೇನೋ. ಅಲ್ಲದೆ ಹುಲಿಗೆಮ್ಮ ಮೊದಲಿನಿಂದಲೂ ಶಿಷ್ಟರ

ಆರಾಧನೆಗೆ ಒಳಪಟ್ಟು ತವರಿಗೆ ತಾಯಿಯಾಗಿದ್ದು ನಂತರ ಪರಿಶಿಷ್ಟರಿಗೂ ತಾನು ತಾಯಿಯಾಗಿ ತೋರಿರಬಹುದು. ಆದಕಾರಣ ಎಲ್ಲರ ದೈವವಾಗಿ ಹುಲಿಗೆಮ್ಮ ಇಲ್ಲಿ ಮೆರೆಯುತ್ತಿರುವುದು ಕಂಡುಕೊಳ್ಳುವುದಾಗಿದೆ.

ಆದರೂ ಹುಲಿಗೆಮ್ಮ ಒಳಗಡೆ ಬ್ರಾಹ್ಮಣೇಕತ್ವದಲ್ಲಿ ಪೂಜಿತಳಾಗುತ್ತಿದ್ದರೂ ಹೊರಗಡೆ ನಡೆಯುವ ಆಚರಣೆಗಳಲ್ಲಿ ಕೆಳವರ್ಗದವರ ಆಚರಣೆ ಮತ್ತು ಇದನ್ನೆಲ್ಲಾ ಕಂಡಾಗ ಇಲ್ಲಿ ಕೆಳವರ್ಗದ ಅಧಿಪತ್ಯವೇ ಹೆಚ್ಚಾದಂತೆ ಕಾಣುತ್ತದೆ. ಆದ್ದರಿಂದ ಬ್ರಾಹ್ಮಣರು ಭಯಪೀಡಿತಗೊಂಡು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವುದಕ್ಕೋಸ್ಕರ ತಾವು ಒಳಗಡೆಯ ಆಚರಣೆಯನ್ನು ಬಿಟ್ಟುಕೊಡಲಿಕ್ಕೆ ತಯಾರಿಲ್ಲದೆ ಆರಾಧಕರಾಗಿರುವುದನ್ನು ನೋಡುತ್ತೇವೆ. ಮೇಲ್ವರ್ಗದ ಪಟ್ಟನ್ನು ಬಿಟ್ಟುಕೊಡಲಿಕ್ಕಾಗದೇ ತಮ್ಮ ಅಧಿಪತ್ಯವನ್ನು ಒಳಗಡೆ ಸಾಧಿಸಿಕೊಂಡಿದ್ದಾರೆನ್ನಬಹುದು.

ಮೇಲ್ವರ್ಗದಲ್ಲಿ ಶಿಷ್ಟಸ್ವರೂಪಿಣಿಯಾಗಿ ಕೆಳವರ್ಗದಲ್ಲಿ ತಾನು ಗ್ರಾಮದ ಅಧಿದೇವತೆಯಾಗಿ ಉಗ್ರರೂಪಿಣಿಯಾಗುತ್ತಾಳೆ ಮತ್ತು ಕೆಳವರ್ಗದವರ ಬೇಡಿಕೆಯನ್ನು ಹೆಚ್ಚಾಗಿ ಪೂರೈಸುವವಳಾಗಿದ್ದಾಳೆ. ಹೆಚ್ಚಾಗಿ ಕೆಳವರ್ಗದಲ್ಲಿ ಅಸಹಾಯಕತೆಗೆ ಮಾರುಹೋಗಿ ಅಸಹಾಯಕ ವರ್ಗವನ್ನು ಮೇಲೆತ್ತಿ ತೋರಿಸುವಂತವಳಾಗಿದ್ದಾಳೆ.

ಸಾಮಾಜಿಕವಾಗಿ ಹೆಚ್ಚಾಗಿ ಕೆಳವರ್ಗದವರಲ್ಲಿ ಕಾಳಮ್ಮ, ಗಾಳೆಮ್ಮ, ಕೆಂಚಮ್ಮ, ಹುಲಿಗೆಮ್ಮ ಈ ರೀತಿಯಾಗಿ ಕಂಡುಕೊಳ್ಳುತ್ತೇವೆ. ಒಂದು ರಾಜಕೀಯ ಕ್ಷೇತ್ರದಲ್ಲೂ ಮೊದಲು ಬ್ರಾಹ್ಮಣರ ಅಧಿಪತ್ಯವಿದ್ದು ತದನಂತರ ಹಿಂದುಳಿದ ವರ್ಗದವರ ಮೇಲುಗೈಯನ್ನು ನೋಡುತ್ತೇವೆ. ಸಮಾಜೋ ಸಾಂಸ್ಕೃತಿಕವಾಗಿ ಹುಲಿಗೆಮ್ಮ ಶಿಷ್ಟರಿಂದ ಪರಿಶಿಷ್ಟರ ಕಡೆಗೆ ತಿರುಗಿರುವುದನ್ನು ಕಾಣುತ್ತೇವೆ.

ಇಂದಿಗೂ ಕೆಳವರ್ಗದವರು ಎಷ್ಟೇ ಶಿಕ್ಷಿತರಾಗಿ ಮುಂದುವರೆದಿದ್ದರೂ ತಾವು ಮಾಡಿಕೊಂಡು ಬಂದ ಆಚರಣೆಯನ್ನು ಬಿಟ್ಟುಕೊಟ್ಟಿಲ್ಲ. ಯಾಕೆಂದರೆ ಅದರಿಂದ ಅವರ ಮನಸ್ಸಿಗೆ ತೃಪ್ತಿ ಎನಿಸಿರಬಹುದು. ಯಾಕೆಂದರೆ ಆರ್ಥಿಕವಾಗಿ ಹಿಂದುಳಿದ ಸಮುದಾಯದವರು ತಮಗೆ ಅನುಕೂಲವಾದ ರೀತಿಯಲ್ಲಿಯೇ ದೇವಿಗೆ ಕೆಲವು ಆಹಾರ ಪದಾರ್ಥಗಳನ್ನು ನೈವೇದ್ಯ ಮಾಡಿರಬಹುದು. ಯಾಕೆಂದರೆ ಶಿಷ್ಟವರ್ಗದವರಲ್ಲಿ ಆರ್ಥಿಕವಾಗಿ ಬಲ ಇತ್ತು. ಆದ್ದರಿಂದ ಅವರು ಹಾಲು ತುಪ್ಪ, ಜೇನು ತುಪ್ಪ ಈ ತರಹದ ಸಾಮಾನುಗಳನ್ನು ಪೂಜೆಗೆ ನೈವೇದ್ಯಕ್ಕೆ ಬಳಸುತ್ತಿದ್ದರು. ಆದರೆ ಅದೇ ಕೆಳವರ್ಗದವರು ತಮ್ಮ ಅನುಕೂಲವಾದ ರೀತಿಯಲ್ಲಿ ದೇವಿಗೆ ಆಹಾರ ಪದಾರ್ಥಗಳನ್ನು ನೈವೇದ್ಯಮಾಡಿ ದೇವಿಯನ್ನು ತಮ್ಮ ಕಡೆಗೆ ಒಲಿಸಿಕೊಂಡಿರಬಹುದು. ಆದ್ದರಿಂದ ಹುಲಿಗೆಮ್ಮ ಶಿಷ್ಟದೇವತೆಗಿಂತ ಪರಿಶಿಷ್ಟರ ದೇವತೆಯಾಗಿ ಹೆಚ್ಚು ಮೆರೆದಿದ್ದಾಳೆ.

ಇವತ್ತಿಗೂ ಜಾತ್ರೆಗಳಲ್ಲಿ ಶಿಷ್ಟರ ಮತ್ತು ಪರಿಶಿಷ್ಟರ ಅನುಸಂಧಾನಗಳ ಜೊತೆಗೆ ಹೆಚ್ಚಾಗಿ ಪರಿಶಿಷ್ಟರ ಆರಾಧನೆಯನ್ನೇ ಕಂಡುಕೊಳ್ಳುತ್ತೇವೆ. ಜಾತ್ರೆಯಲ್ಲಿ ಆಕೆ ಶಾಂತಳಾಗಬೇಕಾದರೆ ಬಲಿಯ ಅರ್ಪಣೆಯೇ ಸಾಕಷ್ಟಿರುತ್ತದೆ. ವೈರುಧ್ಯಗಳ ನಡುವೆ ಹುಲಿಗೆಮ್ಮನ ಜಾತ್ರೆ ನೆರವೇರುತ್ತದೆ.

ಗ್ರಾಮದೊಂದಿಗೆ ದೇವಿಯ ಸೃಷ್ಟೀಕರಣ ಕಂಡರೂ ಅದನ್ನು ಸ್ಥಿತ್ಯಂತರತೆಯಲ್ಲಿ ನಗರೀಕರಣ ಪ್ರಭಾವಕ್ಕೆ ಶಿಷ್ಟರು ಒಳಪಟ್ಟು ಹುಲಿಗೆಮ್ಮನನ್ನು ತಮ್ಮ ನಾಗರೀಕ ಸಂಸ್ಕೃತಿಯತ್ತ ಸಾಗಿಸಿದ್ದಾರೆ. ಒಂದು ಚಿಕ್ಕ ಉದಾಹರಣೆಯನ್ನು ಕೊಡುವುದಾದರೆ ಕ್ಷೇತ್ರಕಾರ್ಯದಲ್ಲಿ ದೇವದಾಸಿಯರ ಮನೆಗೆ ಹೋಗಿ ಹುಲಿಗೆಮ್ಮನ ದಸರಾ ಆಚರಣೆಯನ್ನು ವಿಚಾರಿಸಿದಾಗ ಹುಲಿಗೆಮ್ಮ ದಸರಾ ಸಮಯದಲ್ಲಿ ಸಂತಾಪಸೂಚಕಳಾಗಿರುತ್ತಾಳೆ, ಯಾಕೆಂದರೆ ತವರು ಮನೆಯವರು ಉಡಿಲಕ್ಕಿ ಹಾಕಿ ಕಳುಹಿಸದೆ ಬೈದು ಹಿಂದಿರುಗಿ ಕಳಿಸಿರುತ್ತಾರೆ. ಆಗ ಯಾವ ಆಚರಣೆಗಳು ಹುಲಿಗಿ ಕ್ಷೇತ್ರದಲ್ಲಿ ಇರುವುದಿಲ್ಲವೆಂದು ಹೇಳವುರು. ಆದರೆ ಬ್ರಾಹ್ಮಣೀಕತ್ವದ ನೆಲೆಯಲ್ಲಿ ಹುಲಿಗೆಮ್ಮ ದಸಾರದಲ್ಲಿ ೯ ದಿನವೂ ಪೂಜಿತಗೊಳ್ಳುತ್ತಾಳೆ. ವಿವಿಧ ಪಾರಾಯಣಗಳನ್ನು ಇಲ್ಲಿ ಮಾಡಲಾಗುತ್ತದೆ.

ಒಟ್ಟಾರೆ ಪರಿಶಿಷ್ಟ ಸಂಸ್ಕೃತಿಯಿಂದಲೇ ಮೊದಲು ಹುಲಿಗೆಮ್ಮಳು ನಂತರ ಶಿಷ್ಟರ ದೇವತೆಯಾದಳು ಎಂದು ಹೇಳಬಹುದು. ಇದನ್ನು ಚಿಕ್ಕ ಉದಾಹರಣೆಯಾಗಿ ಕಂಡಾಗ ಹುಲಿಗೆಮ್ಮ ಕ್ಷೇತ್ರದಲ್ಲಿ ಇರುವ ಬಾರಿಕೇರಿ ಜನಾಂಗದವರು ಈಕೆ ನಮ್ಮ ದೇವತೆ, ನಮ್ಮ ಮನೆಯಿಂದಲೇ ಎಲ್ಲಾ ಪವಾಡಗಳು ಜರುಗುವುದು ಎಂದು ಕಬ್ಬೇರು ಜನಾಂಗದ ಪೂಜಾರ ಮನೆತನದ ವಕ್ತೃ ಒಬ್ಬಳು ಹೇಳುತ್ತಾಳೆ. ಆದರೆ ಅಲ್ಲೇ ನೆಲೆಸಿರುವ ಬ್ರಾಹ್ಮಣರರ ದೇಸಾಯಿಯವರು ಇಲ್ಲ ಇಲ್ಲ ಎಲ್ಲ ನಮ್ಮದರಿಂದಲೇ ನಾವೇ ಮೊದಲಿಂದಲೂ ದೈವವನ್ನು ಆರಾಧಿಸುತ್ತಿದ್ದೇವೆ ಎಂದು ಹೇಳುತ್ತಾರೆ.

ಶಿಷ್ಟವರ್ಗದವರ ಹಾಡುಗಳಲ್ಲಿ ಸಾಹಿತ್ಯವನ್ನು ಕಂಡುಕೊಳ್ಳುತ್ತೇವೆ. ಆದರೆ ಅದೇ ಪರಿಶಿಷ್ಟವರ್ಗದವರ ಹಾಡುಗಳಲ್ಲಿ ದೇವಿಯ ಪದಗಳಲ್ಲಿ ಕೆಲವು ಅಶ್ಲೀಲ ಪದಗಳನ್ನು ಕಾಣಬಹುದು. ದೇವಿಯನ್ನು ವಿಚಿತ್ರವಾದ ರೀತಿಯಲ್ಲಿ ಬೈದಿರುವ ಪದಗಳನ್ನು ಕಂಡುಕೊಳ್ಳುವುದರೊಂದಿಗೆ ದೇವಿಯು ಶಿಷ್ಟ ಮತ್ತು ಪರಿಶಿಷ್ಟರ ಅನುಸಂಧಾನವು, ಇನ್ನೂ ಶಿಷ್ಟವರ್ಗದವರಲ್ಲಿ ರಾಮ, ಕೃಷ್ಣ ದೇವತಾರಾಧನೆಯನ್ನು ಕಂಡುಕೊಂಡಾಗ ಪರಿಶಿಷ್ಟರಲ್ಲಿ ದೇವಿಯೇ ಅವರಿಗೆ ಎಲ್ಲವೂ ಆಗಿರುತ್ತಾರೆ. ಆಕೆಯನ್ನು ಮಾತ್ರ ಅವರು ಆರಾಧನೆಗೆ ಒಳಪಡಿಸುವಂತವರಾಗಿದ್ದಾರೆ ಎಂದು ಹೇಳಬಹುದು.

ಬ್ರಾಹ್ಮಣ ವರ್ಗದಲ್ಲಿ ನಾವು ಯಾವುದೇ ರೀತಿಯ ಜೋಗತಿಯಾಗುವುದಾಗಲೀ, ದೇವದಾಸಿಯಾಗುವುದಾಗಲಿ, ಮುತ್ತುಕಟ್ಟುವುದಾಗಲಿ ಇರುವುದಿಲ್ಲ. ಆದರೆ ಇದೆಲ್ಲಾ ಪರಿಶಿಷ್ಟವರ್ಗದಲ್ಲಿ ಮಾತ್ರ ದೇವಿಯ ಹೆಸರಲ್ಲಿ ಈ ರೀತಿಯಾಗಿ ದೇವಿಯನ್ನು ಆರಾಧಿಸುತ್ತಾ ದೇವಿಯನ್ನು ಒಲಿಸಿಕೊಂಡಿರುತ್ತಾರೆ. ಮತ್ತು ಹೆಚ್ಚಾಗಿ ಹುಲಿಗೆಮ್ಮ ಕೆಳವರ್ಗದ ಜನಾಂಗದ ಒಕ್ಕಲು ದೇವತೆಯಾಗಿದ್ದಾಳೆ. ಆದ್ದರಿಂದ ಹುಲಿಗೆಮ್ಮ ಶಿಷ್ಟಕ್ಕೆದುರಾಗಿ ಪರಿಶಿಷ್ಟತೆಗೆ ತಿರುಗಿದರೂ ಆಕೆಯ ಎಲ್ಲರ ಅಮ್ಮಳಾಗಿದ್ದಾಳೆ ಎಂದು ಹೇಳಬಹುದು.ಹುಲಿಗೆಮ್ಮನ ಆರಾಧನಾಪಂಥದ ಅಧ್ಯಯನ ಮುಖಾಂತರ ಸೂಚಿತವಾಗುತ್ತಿರುವ ಸಮುದಾಯದೊಳಗಿನ ಮಹಿಳಾ ಪ್ರತಿನಿಧೀಕರಣದ ಪ್ರಶ್ನೆಗಳು ಮತ್ತು ಪಲ್ಲಟಗಳು

## ೭.೨ ಹುಲಿಗೆಮ್ಮನ ಆರಾಧನಾ ಪಂಥದ ಮಹಿಳಾ ಪ್ರತಿನಿಧೀಕರಣದ

ಪ್ರಶ್ನೆಗಳು ಮತ್ತು ಪಲ್ಲಟಗಳು ಇಲ್ಲಿ ಆರಾಧನಾ ಪಂಥವನ್ನು ನೋಡುವುದಾದರೆ ಹುಲಿಗೆಮ್ಮ ಬಂದನಂತರ ಹುಟ್ಟಿಕೊಂಡ ಆರಾಧನಾ ಪಂಥವನ್ನು ಕಾಣುತ್ತೇವೆ. ಆದ್ದರಿಂದ ಮೊದಲು ಆರಾಧನಾ ಪಂಥಗಳು ಹುಟ್ಟಿಕೊಂಡ ಬಗೆಗಳು ಯಾವುವು ಮತ್ತು ಹೇಗೆ ಎನ್ನುವುದನ್ನು ವಿಸ್ತರಿಸುವುದು.

೧. ಹುಲಿಗೆಮ್ಮ ಸಮಾಜದಲ್ಲಿ ಶೋಷಿತ ವರ್ಗದವರಿಗೆ ತಾನು ಒಂದು ಹೆಣ್ಣಾದರೂ ದೈವೀಕರಣದ ರೀತಿಯಲ್ಲಿ ತನ್ನ ಪವಾಡಗಳನ್ನು ತೋರಿಸುವುದರ ಮೂಲಕ ಶೋಷಣೆಗೆ ಒಳಗಾದಂತ ಭಕ್ತರು ಈಕೆಯು ನಮ್ಮನ್ನು ರಕ್ಷಿಸುವ ಸಲುವಾಗಿ ಬಂದ ಹೆಣ್ಣಾಗಿದ್ದಾಳೆ. ನಮ್ಮನ್ನೆಲ್ಲಾ ರಕ್ಷಿಸುತ್ತಾಳೆ ನಮಗೆ ಸಾಧ್ಯವಾಗದ ಶಕ್ತಿ ಈಕೆಯಲ್ಲಿದೆ ಎಂದು ಭಕ್ತರೆಲ್ಲಾ ಅದರಲ್ಲೂ ಶೋಷಿತ ವರ್ಗದವರೆಲ್ಲಾ ಈಕೆಯನ್ನು ಅಮ್ಮಳಾಗಿ ಕಂಡು ದೈವೀಸ್ವರೂಪಕ್ಕೇರಿಸಿ ಈಕೆಯನ್ನು ಆರಾಧಿಸಲು ಇದು ಒಂದು ಕಾರಣವಾಗಿರಬಹುದು.

೨. ಆರಾಧನೆಯಲ್ಲಿ ಸ್ತ್ರೀಪುರುಷರಿಬ್ಬರು ತಮ್ಮ ಮನೋಕಾಮನೆಗಳನ್ನು ಪೂರೈಸಿಕೊಂಡು ತಾವು ತಮಗೆ ಬೇಕಾದ ಮಾನಸಿಕ ತೃಪ್ತಿಯನ್ನು ಈಕೆಯ ಮೂಲಕ ಕಂಡುಕೊಂಡಿರಬಹುದು. ಉದಾಹರಣೆಗೆ ನಮಗೇನಾದರೂ ಆಪತ್ತು ಬಂದಂತ ಸಮಯದಲ್ಲಿ ಅಮ್ಮ ನಮ್ಮನ್ನು ಕಾಪಾಡು ತಾಯಿ ಎಂದು ಅಂದುಕೊಳ್ಳುವುದು ಸಾಮಾನ್ಯ ವಾಡಿಕೆಯಾದರೂ ಕೂಡ ಇನ್ನೊಂದು ರೀತಿಯಲ್ಲಿ ನಮಗೆ ಗೊತ್ತಾಗದ ಹಾಗೆ ಆ ಸಮಯ ನಮ್ಮನ್ನು ಕಷ್ಟ ಪರಿಹರಿಸಿಕೊಳ್ಳಲು ಪ್ರಯತ್ನಕ್ಕೆ ಒಳಪಡಿಸಿರಲೂ ಬಹುದು. ಇಲ್ಲಿ ಪ್ರಯತ್ನಗಳು ಮೇಲುಗೈಯಾದರೂ ಇದರ ಹಿನ್ನೆಲೆಯಾಗಿ ದೇವಿಯನ್ನು ನೆನೆಸಿರುವುದಕ್ಕೆ ನಮ್ಮ ಕಷ್ಟಗಳೆಲ್ಲಾ ಪರಿಹಾರವಾಗಿ ಈಕೆ ನಮ್ಮನ್ನು ಪಾರುಮಾಡಿದ್ದಾಳೆಂದು ಈಕೆಯನ್ನು ಸ್ತ್ರೀ-ಪುರುಷರು ಆರಾಧನೆಗೆ ಒಳಪಡಿಸಿರಲೂಬಹುದಾಗಿದೆ.

೩. ಸ್ತ್ರೀಸಂಕುಲವನ್ನು ನೋಡಿದಾಗ ಹೆಚ್ಚಾಗಿ ಪುರುಷ ವರ್ಗದಲ್ಲಿ ಹೆಣ್ಣು ಶೋಷಣೆಗೆ ಒಳಗಾಗಿರುತ್ತಾಳೆ ವಿನಃ ಮೇಲುಗೈ ಸಾಧಿಸಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಹುಲಿಗೆಮ್ಮ-ಎಲ್ಲಮ್ಮಳು ಕೂಡ ಒಂದು ಶೋಷಿತವರ್ಗದಲ್ಲಿಯೇ ಬಂದಂತವರೆಂದು ಹೇಳಬಹುದು. ಹುಲಿಗೆಮ್ಮ ಎಲ್ಲಮ್ಮನ ಪ್ರತಿರೂಪಳಾಗಿ ಇಲ್ಲಿ ಬರುವ ಮುಖಾಂತರ ಪುರುಷನ ಪ್ರತೀಕಾರವನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಹುಲಿಗೆಮ್ಮ ಇಲ್ಲಿ ಬಂದು ನೆಲೆಸಿ ಸ್ತ್ರೀಕುಲಕ್ಕೆ ರಕ್ಷಣೆ, ಭದ್ರತೆಯನ್ನು ಒದಗಿಸಲಿಕ್ಕಾಗಿಯೇ ಬಂದಿರಬಹುದು. ಮತ್ತು ಇಲ್ಲಿ ಕೂಡ ಈಕೆಯನ್ನು ಆರಾಧಿಸುವ ಭಕ್ತವರ್ಗ ಹೆಚ್ಚಾಗಿ ಶೋಷಣೆಗೆ ಒಳಪಟ್ಟಿರುವ ವರ್ಗ. ಆ ವರ್ಗವನ್ನು ಎತ್ತಿ ಹಿಡಿಯಲು ಪುರುಷರ ಅಧಿಕಾರವನ್ನು ಮೆಟ್ಟಿಹಾಕಲು ಬಂದಿರುವುದಕ್ಕೋಸ್ಕರ ಹೆಚ್ಚಾಗಿ ಇಲ್ಲಿ ಸ್ತ್ರೀಯು ಹುಲಿಗೆಮ್ಮನನ್ನು ಆರಾಧಿಸುವಂತಹುದನ್ನು ಕಾಣುತ್ತೇವೆ.

೪. ಹುಲಿಗೆಮ್ಮ ಹೊಸೂರಿನಿಂದ ಬಂದಳೋ ಅಥವಾ ಗುಡ್ಡದಿಂದಲೇ ಬಂದಳೋ ಎನ್ನವುದು ಸರಿಯಾಗಿ ಗೊತ್ತಿಲ್ಲದಿದ್ದರೂ ಬರುವಾಗ ರೋಷಳಾಗಿ ಬರುವುದು ಒಂದು ಶಕ್ತಿಯ ಸಂಕೇತವಾಗಿ ಸೂಚಿಸುತ್ತದೆ. ಒಂದು ಶಕ್ತಿ ದೈವ ಇಲ್ಲಿ ನೆಲೆಸಿರುವುದನ್ನು ಶಿಷ್ಟ ಮತ್ತು ಪರಿಶಿಷ್ಟ ವರ್ಗಗಳೆರಡು ಒಪ್ಪಿಕೊಂಡು ಹುಲಿಗೆಮ್ಮನನ್ನು ಆರಾಧನೆಗೆ ಒಳಪಡಿಸಿರುವಂತಹುದು.

೫. ಅಸಹಾಯಕ ವರ್ಗಕ್ಕೆ ಈಕೆ ಸಹಾಯಕಳಾಗಿರುವುದು ಇದು ಜೋಗಪ್ಪ-ಜೋಗಮ್ಮ ವರ್ಗವನ್ನು ಪ್ರತಿಬಿಂಬಿಸುತ್ತದೆ. ಜೋಗಪ್ಪ-ಜೋಗಮ್ಮರು ತಮಗೆ ಪಡಿಲಿಗೆ ಬಂದ ತಕ್ಷಣ ಅಥವಾ ಅವರಿಗೆ ಏನೂ ದುಡಿಯಲು ಅರ್ಹರಾಗದಿದ್ದಾಗ ಈಕೆಯ ಹೆಸರೇಳಿಕೊಂಡು ಬದುಕುವುದರಿಂದ ಹುಲಿಗೆಮ್ಮನನ್ನು ಈ ವರ್ಗಗಳು ತಮ್ಮ ತೃಪ್ತಿಗೋಸ್ಕರ ಆರಾಧಿಸುವ ನೆಲೆ ಎನ್ನಬಹುದು.

೬. ಇನ್ನು ಜೋಗಪ್ಪಗಳನ್ನು ಅಂದರೆ ಒಂದು ಗಂಡು ಮಗುವಿಗೆ ಚಿಕ್ಕವನಿರುವಾಗಲೇ ಅದಕ್ಕೆ ಹೆಣ್ಣು ವೇಷವನ್ನು ಹೆಚ್ಚಾಗಿ ತೊಡಿಸುವ ಮುಖಾಂತರ, ಅವನ್ನು ತಾಯಿಯ ಸೆರಗಿನಲ್ಲಿ ಬೆಳೆಯುವ ಮೂಲಕ, ಮನೆಯಲ್ಲಿಯೇ ದೇವಿಯ ಆರಾಧನೆಯನ್ನೇ ಮಾಡುವ ರೀತಿಯು ಅಲ್ಲದೆ ಪರಿಸರದ ಪ್ರಭಾವಕ್ಕನುಗುಣವಾಗಿ ಅವನ್ನು ಹೆಚ್ಚಾಗಿ ಹೆಣ್ಣಿನ ಅವತಾರ ತಾಳಲಿಕ್ಕೆ ಪ್ರಯತ್ನಿಸಲು ಹೋಗಿ ಅತ್ತ ಗಂಡಾಗದೆ ಇತ್ತ ಹೆಣ್ಣಾಗದೆ ಗಂಡುಜೋಗಮ್ಮನನ್ನಾಗಿ ಪರಿವರ್ತನೆ ಮಾಡಿ ಈ ಮೂಲಕ ತನ್ನ ಪ್ರತೀಕಾರದ ಸೇಡನ್ನು ತೀರಿಸಿಕೊಂಡು ತಾನು ದೇವಿಯಾಗಿ ಮೆರೆದು ಈ ಮೂಲಕ ತನ್ನ ಆರಾಧನೆಗೆ ತಾನೇ ಒಳಪಡಿಸಿಕೊಂಡಿರುವಂತಹದು. ಯಾಕೆಂದರೆ ಅಂತವರಿಗೆ ಯಾರು ಕೆಲಸವನ್ನು ಕೊಡಲಾಗದ ಸಂದರ್ಭದಲ್ಲಿ ಈಕೆಯ ಹೆಸರೇಳಿಕೊಂಡು ಜೀವನ ಮಾಡಬಲ್ಲೆ ಈಕೆಯನ್ನು ಆರಾಧಿಸುವಂತದ್ದು ಒಂದು ಕಾರಣ.

ಇನ್ನು ಶಿಷ್ಟ-ಪರಿಶಿಷ್ಟದ ನೆಲೆಯಲ್ಲಿ ಹೊಸೂರಮ್ಮನಲ್ಲಿ ಅನೇಕ ಶಕ್ತಿಯನ್ನು ಕಂಡುಕೊಂಡು ಆಕೆಗೆ ಮಟ್ಟ ಹಾಕುವ ಶಕ್ತಿ ಕಡಿಮೆ ಇದ್ದು ಅದೇ ಶಿಷ್ಟವರ್ಗದ ಜನ ಪರಿಶಿಷ್ಟರ ದೇವತೆಯಾದ ಹುಲಿಗೆಮ್ಮನಲ್ಲಿ ದುಷ್ಟರನ್ನು ಸಂಹರಿಸುವ ಶಕ್ತಿಯನ್ನು ಉಗ್ರಸ್ವರೂಪವನ್ನು ಕಂಡು ಈ ಶಕ್ತಿಯನ್ನು ನಂಬಿ ಆರಾಧಿಸುವುದಾಗಿರಬಹುದು. ಮೇಲ್ವರ್ಗದ ಜನರಲ್ಲಿ ಆಚರಣೆಯಲ್ಲಿ ಸೇವೆಯಲ್ಲಿ, ವಿಧಿ ವಿಧಾನದಲ್ಲಿ ಪೂಜಾವಿಧಿಗಳಲ್ಲಿ ಶಾಂತತೆಯನ್ನು ಕಂಡು ಅಲ್ಲದೆ ಶಾಂತತೆ ಇದ್ದರೆ ಸಾಲದು ಸ್ವಲ್ಪ ಕೋಪವನ್ನು ಇರಿಸಿಕೊಳ್ಳಬೇಕೆಂದು ಈಕೆಯನ್ನು ಮೇಲ್ವರ್ಗದ ಜನ ಆರಾಧಿಸುವಂತಹದು.

ಪರಿಶಿಷ್ಟರು ತಮಗೆ ಆರ್ಥಿಕ ಬಲ ಇಲ್ಲದ ಕಾರಣದಿಂದ ಇವರಿಗೆ ಯಾವುದೇ ಒಂದು ಶಕ್ತಿಯ ಸಹಾಯ ಇಲ್ಲದ ಸಮಯದಲ್ಲಿ ಹುಲಿಗೆಮ್ಮ ಅವರಿಗೆ ಬೆಳಕಾಗಿ ತೋರಿ ಅವರಿಂದ ಆರಾಧನೆಗೆ ಒಳಪಟ್ಟಿರಬಹುದು. ಆದಕಾರಣ ಆ ಜನರು ಈಕೆಯನ್ನು ನಂಬಿ ತಮ್ಮ ಅನುಕೂಲಕ್ಕೆ ತಕ್ಕಂತೆ ಆಚರಿಸುತ್ತಾ ತಮ್ಮದೇ ಆದ ಆಹಾರವನ್ನು ನೈವೇದ್ಯ ಮಾಡುತ್ತಾ ತಮ್ಮ ಮನಸ್ಸಿನ ಖುಷಿಯನ್ನು ಈ ಗ್ರಾಮದೇವತೆಯ ಮೂಲಕ ಕಂಡುಕೊಂಡಿರಬಹುದಾಗಿದೆ. ಈಕೆಯನ್ನು ಆರಾಧಿಸಲು ಇದು ಒಂದು ಕಾರಣವಾಗಿರಬಹುದು.

ಒಟ್ಟಾರೆ ಈ ಎಲ್ಲ ವರ್ಗಗಳಿಗೆ ಸಹಾಯಕವಾಗಿರುವ ಹುಲಿಗೆಮ್ಮ ಧ್ವನಿಯಿಲ್ಲದವರಿಗೆ ಧ್ವನಿಯ ಸಂಕೇತವಾಗಿ ಇಲ್ಲಿ ಜನಪದ ಹೋರಾಟವನ್ನು ಮಾಡಿದ್ದಾಳೆ. ಸಾಮಾಜಿಕವಾಗಿ ಜನರ ಪರವಾಗಿ ಚಿಂತನೆ ಗೈಯ್ದು ಜನರ ಮೆಚ್ಚುಗೆಯನ್ನು ಸಂಪಾದಿಸಿ ಜನರಿಂದಲೇ ಆರಾಧಿಸಲ್ಪಡುವಂತವಳಾಗಿದ್ದಾಳೆ ಎಂದು ಇದೆಲ್ಲಾ ಆರಾಧನೆಗೆ ಹುಟ್ಟಿಕೊಳ್ಳುವ ಕೆಲವು ಅಂಶಗಳೆನ್ನಬಹುದು.

ಅಲ್ಲದೆ ಈ ಪ್ರತಿನಿಧೀಕರಣದ ಸ್ವರೂಪ, ಸ್ಥಿತ್ಯಂತರ ಮತ್ತು ಪಲ್ಲಟಗಳನ್ನು ಗಮನಿಸಿದಾಗ ಹುಲಿಗೆಮ್ಮ ಪರ-ವಿರೋಧಗಳಿಗೆ ಒಳಪಟ್ಟು ಮತ್ತೆ ತನ್ನ ಸಾಮರ್ಥ್ಯವನ್ನು ಮೆರೆಯುತ್ತಾಳೆ. ಅದನ್ನು ನಾವು ಈ ರೀತಿ ವಿಸ್ತರಿಸಿದಾಗ ಹುಲಿಗೆಮ್ಮ ಶಾಕ್ತ ಪಂಥದಲ್ಲಿ ತುಂಬಾ ಶಕ್ತಿಯುತವಾಗಿ ಮೆರೆದ ದೇವತೆಯಾಗಿದ್ದಾಳೆ. ಅದರಲ್ಲೂ ಸಿದ್ಧರಿಗೆ ಕುಲದೇವತೆಯಾಗಿ ಮಾತೃಪ್ರಧಾನ್ಯತೆಯನ್ನು ಎತ್ತಿ ತೋರಿಸಿದವಳು. ಅಂದರೆ ಸಿದ್ಧರ ಕುಲದೇವತೆಯಾಗಿ ಮತ್ತೆ ಸಿದ್ಧರನ್ನು ಸಂಹರಿಸುವುದನ್ನು ನೋಡಿದರೆ ಇಲ್ಲಿ ಮಾತೃಸ್ವರೂಪಿಣಿಯಾಗಿ ಈಕೆಯನ್ನು ನಾವು ಕಾಣಲಿಕ್ಕೆ ಸಾಧ್ಯವೇ? ಎನ್ನುವ ಪ್ರಶ್ನೆಯಾಗಿ ಕಾಡುತ್ತದೆ. ಯಾಕೆಂದರೆ ತಾಯಿಯ ಗುಣವೇ ಅಹಂ ಅನ್ನು ಅಳಿಸಿಹಾಕಿ ಮನಸ್ಸಿನಲ್ಲಿ ಒಳ್ಳೆಯ ಗುಣವನ್ನು ಸೃಷ್ಟಿಸುವುದು, ತನ್ನ ಭಕ್ತರ ಉದ್ಧಾರಕ್ಕೋಸ್ಕರ ಒಂದು ಜೀವದ ಸೃಷ್ಟಿಯಾಗಿ ಬಂದಿರುವ ಹುಲಿಗೆಮ್ಮ ಮತ್ತು ಭಕ್ತರಿಂದ ಆರಾಧನೆಗೊಳಪಟ್ಟು ಅಮ್ಮ ಎನಿಸಿಕೊಂಡಿರುವ ಹುಲಿಗೆಮ್ಮ ಅದೇ ಸಿದ್ಧರು ತಪ್ಪಾಗಿ ಸಾಮಾಜಿಕ ಕಟ್ಟಳೆಗಳನ್ನು ಮೀರಿದ ಸಂದರ್ಭದಲ್ಲಿ ಅವರನ್ನು ಸಮಾಧಾನಕರವಾದ ರೀತಿಯಲ್ಲಿ ತಿದ್ದಬಹುದಿತ್ತೇ ವಿನಃ ಅವರನ್ನು ಸಂಹರಿಸುವ ಪ್ರಸಂಗ ಇಲ್ಲಿ ಬರಬೇಕಾಗಿರಲಿಲ್ಲ. ಇದು ಒಂದು ರೀತಿಯಾದರೆ ಸಿದ್ಧರು ಹೆಣ್ಣನ್ನು ಗೋಳೊಯ್ದುಕೊಳ್ಳುತ್ತಿರುವಾಗ, ಹುಲಿಗೆಮ್ಮನಿಗೂ ಅಸಭ್ಯವಾದ ರೀತಿಯಲ್ಲಿ ನಡೆದುಕೊಂಡಾಗ ಯಾವ ಹೆಣ್ಣು ತನ್ನೆದುರಿಗೆ ಪುರುಷರು ಇನ್ನೊಂದು ಹೆಣ್ಣಿಗೆ ಕಟ್ಟಿಕೊಡುತ್ತಿರುವುದನ್ನು ಕಂಡು ಸುಮ್ಮನಿರುವುದಿಲ್ಲ. ಹಾಗೇನೆ ಇಲ್ಲಿ ಹುಲಿಗೆಮ್ಮ ಅದನ್ನು ಸಹಿಸಲಾಗದೆ ತನ್ನ ಸ್ವಾಭಿಮಾನದ ಪ್ರಶ್ನೆಯಾಗಿ ಸಿದ್ಧರನ್ನು ಸಂಹರಿಸಲೂಬಹುದು.

ಅಂದರೆ ನಾಶಕಾರ್ಯ ಸೃಷ್ಟಿ ಕಾರ್ಯಕ್ಕೆ ಪೂರಕವೇ? ಎನ್ನುವ ಪ್ರಶ್ನೆ. ಆದರೂ ಕೊನೆಗೆ ಸಿದ್ಧರನ್ನು ಸಂಹರಿಸಿ ಮತ್ತು ಅವರಿಗೆ ಪ್ರಾಣಭಿಕ್ಷೆಯನ್ನು ನೀಡಿ ಮತ್ತೆ ಅವರು ಈಕೆಗೆ ಮಣಿದು ಈಕೆಯನ್ನು ಆರಾಧಿಸುವಂತೆ ಮಾಡಿಕೊಳ್ಳುವುದನ್ನು ಕಾಣುತ್ತೇವೆ. ಇದು ಬದಲಾವಣೆಗೆ ಒಳಪಡುವ ಸಂಕೇತವಾಗಿ ಕೊನೆಗೆ ಸಮರ್ಥನೆಗೆ ಮತ್ತೆ ಹುಲಿಗೆಮ್ಮನನ್ನೆ ಎತ್ತಿತೋರಿಸುವಂತದ್ದಾಗಿದೆ.

ಮೇಲ್ವರ್ಗದ ಆರಾಧನೆಯಲ್ಲಿ ಸಸ್ಯಹಾರದ ಸೇವೆಗಳಲ್ಲಾಗಲೀ, ಆಹಾರ ಪದಾರ್ಥಗಳಲ್ಲಾಗಲೀ, ವಿಧಿ-ವಿಧಾನಗಳಲ್ಲಾಗಲಿ, ಪೂಜೆಗಳಲ್ಲಾಗಲೀ ಈಕೆಯನ್ನು ಆರಾಧಿಸುವ ಮುಖಾಂತರ ಈಕೆ ಅಮ್ಮಳಾದರೂ ಈಕೆ ಮೇಲ್ವರ್ಗಕ್ಕೆ ಅಥವಾ ಶಿಷ್ಟ ಪರಂಪರೆಗೆ ಯಾವ ಅಥವಾ ಎಷ್ಟು ರೀತಿಯ ಮಾನಸಿಕ ತೃಪ್ತಿಯನ್ನು ಕೊಡಬಹುದು? ಅಥವಾ ಅವರು ಈಕೆಯಿಂದ ಎಷ್ಟು ತೃಪ್ತಿಯನ್ನು ಹೊಂದುತ್ತಾರೆ? ಎನ್ನುವ ಪ್ರಶ್ನೆ ಅಥವಾ ಎಷ್ಟರಮಟ್ಟಿಗೆ ಪ್ರಚೋದಕಳಾಗಿದ್ದಾಳೆ ಎನ್ನುವುದು ಸಂದೇಹಾತ್ಮಕವಾಗಿ ಸೂಚಿಸುತ್ತದೆ. (ಇದಕ್ಕೆ ಉದಾಹರಣೆ ನಂಬಿಕೆಗಳೇ ಆಚರಣೆಗಳಾಗಿರುವದನ್ನು ನೋಡಬಹುದು) ಇದು ಸಮಂಜಸ ಆಗುತ್ತದೆಯೋ ಇಲ್ಲವೋ ಆದರೂ ಈ ಉದಾಹರಣೆಯನ್ನು ಒಂದು ಸಾಮಾನ್ಯರೀತಿಯಲ್ಲಿ ಕಂಡುಕೊಳ್ಳಬಹುದು.

ಅಂದರೆ ತಾಯಿಯಾದವಳು ಕಾಲಕ್ಕನುಗುಣವಾಗಿ ತನ್ನ ಭಕ್ತರ ಮನೋಕಾಮನೆಗಳನ್ನು ಪೂರೈಸಲು ಸಾಧ್ಯವೇ? ಒಂದು ವೇಳೆ ಪೂರೈಸಿದರೂ ಅದು ಕೆಲವೊಮ್ಮೆ ನಕಾರಾತ್ಮಕತೆಗೆ ಒಳಗಾದಾಗ ಇಲ್ಲಿ ಮತ್ತೆ ತನ್ನ ಸ್ಥಾನ ಹಿಂದುಳಿಯುವಿಕೆಗೆ ಕಾರಣವೂ ಆಗಿರಬಹುದು. ಅಂದರೆ ಮನಸ್ಸಿಗೆ ಸಂಬಂಧಪಟ್ಟ

ಆಚರಣೆಯಾಗಿರುವುದರಿಂದಲೂ ಕೆಲವು ಪ್ರಯತ್ನಗಳು ಈಡೇರಲೂಬಹುದು. ಆದ್ದರಿಂದ ಈಕೆಯನ್ನು ಮೇಲ್ವರ್ಗದವರು ಈ ರೀತಿಯಾಗಿಯೂ ಕಂಡಿರಬಹುದು.

೩. ಇನ್ನು ಶೋಷಿತವರ್ಗದ ಸಮಾಜದಲ್ಲಿ ಜೋಗಮ್ಮಗಳಾಗಿರುವುದು ಅಂದರೆ ಶ್ರೀಮಂತ ವರ್ಗದಿಂದ ಹಲವಾರು ನೋವನ್ನನುಭವಿಸಿದ ಹೆಣ್ಣುಮಕ್ಕಳು ಜೋಗಮ್ಮಂದಿರಾಗಿ ಈಕೆಯ ಹೆಸರೇಳಿಕೊಂಡು, ಪಡ್ಲಿಗಿ ಹಿಡಿದು ಕವಡೆಸರಗಳನ್ನು ಹಾಕಿಕೊಂಡು ದೇವಿಯನ್ನು ಅನುಕರಣೆ ಮಾಡಿ ಮೈದುಂಬಿ ಬಂದಂತೆ ಮಾಡಿಕೊಂಡು ತಮ್ಮ ರಕ್ಷಣೆಗೋಸ್ಕರ ಇವೆಲ್ಲದರ ಜೊತೆಗೆ ಹುಲಿಗೆಮ್ಮ ಎಂದು ಹೆಸರು ಹೇಳಿ ಪುರುಷ ವರ್ಗಕ್ಕೆ ಭಯವನ್ನು ತುಂಬಿಸಿ ಹೆಣ್ಣುಮಕ್ಕಳು ಇದ್ದರೂ ಕೂಡ ಇಂದಿಗೂ ಪುರುಷವರ್ಗವೇ ಮೇಲುಗೈಯಾಗಿ ಇಂದಿಗೂ ಶೋಷಣೆಗೆ ಒಳಗಾಗುತ್ತಿರುವ ಮಹಿಳೆಗೆ ಹುಲಿಗೆಮ್ಮ ನಿಜವಾಗಿಯೂ ಶಕ್ತಿವಂತಳೇ? ಎನ್ನುವ ಪ್ರಶ್ನೆ ಪ್ರತಿಬಿಂಬಿತವಾಗುತ್ತಾ ಹೋಗುತ್ತದೆ.

ಆದರೂ ಬದಲಾದ ಪರಿಸ್ಥಿತಿಗನುಗುಣವಾಗಿ ದೇವದಾಸಿಯರನ್ನು ದೇವರ ದಾಸಿಯಾಗಿರಿ ಎಂದು ಯಾವ ದೈವಗಳೂ ಹೇಳಿಲ್ಲ. ಒಂದು ವೇಳೆ ಆದರೂ ತಮ್ಮ ಹಿತಕ್ಕನುಗುಣವಾಗಿ ದೇವರೆನ್ನುವ ಪದವನ್ನು ಮನುಷ್ಯರೇ ಸೃಷ್ಟಿ ಮಾಡುತ್ತಾರೆ ವಿನಃ ಯಾವ ಅಗೋಚರ ಶಕ್ತಿಯೂ ಈ ರೀತಿಯಾಗಿ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಹುಲಿಗೆಮ್ಮ ಜೀವನವನ್ನು ನಡೆಸಲು ಸಾಧನಗಳನ್ನು ಕೊಟ್ಟು ಒಳ್ಳೆ ರೀತಿಯಲ್ಲಿ ದಾರಿ ತೋರಿದ್ದಾಳೆ ವಿನಃ ಅದನ್ನು ಮನುಷ್ಯರು ಕೆಟ್ಟರೀತಿಯಲ್ಲಿ ಉಪಯೋಗಿಸಿಕೊಂಡಿದ್ದಾರೆನ್ನಬಹುದು. ಯಾವ ತಾಯಿಯು ತನ್ನ ಮಕ್ಕಳು ಕೆಡುವುದನ್ನು ಇಷ್ಟಪಡುವುದಿಲ್ಲ. ಉಗ್ರಸ್ವರೂಪಿಣಿಯಾದ ಹುಲಿಗೆಮ್ಮ ತಾನು ಬರುವಾಗ ಸಿಟ್ಟಿನಿಂದ ಬಂದು ಗಂಡಸರನ್ನು ಮಟ್ಟಹಾಕುವುದಕ್ಕೋಸ್ಕರ ಪ್ರತೀಕಾರದ ಶಕ್ತಿಯಾಗಿ ಬಂದು ಅವರಿಗೆ ಈ ವೇಷ ತೊಡಿಸುವುದರ ಮುಖಾಂತರ ಅವರು ಈ ರೂಪದಲ್ಲಾದರೂ ತಲೆಬಾಗಲಿ, ಒಂದು ಹೆಣ್ಣಿಗೆ ತಲೆಬಾಗುವ ಪುರುಷವರ್ಗವನ್ನು ಸೃಷ್ಟಿಮಾಡುತ್ತಾಳೆ. ಶೋಷಿತ ವರ್ಗದ ಮಹಿಳೆಯ ಧ್ವನಿಯಾಗಿ ನಿಂತು ಮತ್ತೆ ತನ್ನ ಪ್ರಾತಿನಿಧೀಕತ್ವವನ್ನು ಮೆರೆಯುತ್ತಾಳೆ ಮತ್ತು ಪುರುಷವರ್ಗವು ಈಕೆಯನ್ನು ಗೌರವ ಸ್ಥಾನದಲ್ಲಿ ಕಂಡು ಮಾತೃಸ್ಥಾನದಲ್ಲಿ ಈಕೆಯನ್ನು ಪೂಜಿಸುವಂತದ್ದಾಗಿ ಕಾಣುತ್ತೇವೆ.

**೭.೩ ಸಾಮಾಜಿಕ ವೈರುಧ್ಯಗಳ ನೆಲೆಯಲ್ಲಿ ಹುಲಿಗೆಮ್ಮ ಮತ್ತು ಹೊಸೂರಮ್ಮ**

ನಾವು ಇಲ್ಲಿ ಸಾಮಾಜಿಕ ವೈರುಧ್ಯಗಳನ್ನು ಕೊಂಡುಕೊಳ್ಳುವ ಮುಂಚೆ ಅನುಸಂಧಾನಗಳನ್ನು ಕಂಡುಕೊಳ್ಳುತ್ತಾ ಹೋಗೋಣ. ಇಲ್ಲಿ ಅನುಸಂಧಾನಗಳಲ್ಲಿ ಸಾಮ್ಯತೆ, ವ್ಯತ್ಯಾಸಗಳನ್ನು ಸಮಾನತೆಗಳನ್ನು ಸ್ತ್ರೀಯತ್ವದ ನೆಲೆಯಲ್ಲಿ ಕಾಣುತ್ತಾ ಹೋಗಬಹುದಾಗಿದೆ. ಮೇಲ್ವರ್ಗ ಜನತೆಗೂ ಮತ್ತು ಕೆಳವರ್ಗದ ಜನತೆಗೂ ಈ ಎರಡು ಗ್ರಾಮದೇವತೆಗಳು ಕುಲದೇವತೆಗಳಾಗಿರುವುದನ್ನು ನೋಡುತ್ತೇವೆ. ಎರಡು ವರ್ಗಕ್ಕೂ ಕುಲದೇವತೆಗಳಾದರೂ ಇವರುಗಳ ಗುಣಗಳಿಂದ ಇವರಿಬ್ಬರು ತಮ್ಮ ಸ್ಥಾನವನ್ನು ಎತ್ತಿ ತೋರಿಸುತ್ತಾರೆ.

ಇವರಿಬ್ಬರ Similarity ಎಲ್ಲಮ್ಮನಿಂದಲೇ ಕಂಡರೂ ಕೂಡ ಮಾತೃಪ್ರಧಾನತೆಯನ್ನೇ ಇಲ್ಲಿ ತೋರಿಸುವ ಗುಣವಾಗಿದೆ ಎಂದು ಹೇಳಬಹುದು. ಹುಲಿಗೆಮ್ಮಳು ಒಂದು ಗ್ರಾಮದಿಂದಲೇ ಸೃಷ್ಟೀಕರಣ ಹೊಂದಿದರೂ ಗ್ರಾಮದ ಹೆಸರಿನಿಂದಲೇ ತಾನು ಮೆರೆದಿರುವುದು. ಹಾಗೆಯೇ ಹೊಸೂರಮ್ಮ ಹೊಸೂರಿನಿಂದಲೇ ತನ್ನ ಹೆಸರನ್ನು ಸೂಚಿಸುತ್ತಾ ಹೋಗುತ್ತಾಳೆ. ಇವರಿಬ್ಬರು ಬಂದಿರುವ ಗ್ರಾಮದೇವತೆಗಳಾಗಿಯೇ ಇಲ್ಲಿ ಸ್ತ್ರೀಕುಲವನ್ನು ಪ್ರತಿನಿಧಿಸುವ ಸಂಕೇತದವರಾಗಿದ್ದಾರೆ.

ಇನ್ನು ಆಚರಣೆಗಳಲ್ಲಿ ವ್ಯತ್ಯಾಸ

| **ಹೊಸೂರಮ್ಮ** | **ಹುಲಿಗೆಮ್ಮ** |
|---|---|
| ದಿನನಿತ್ಯದ ಸೇವೆ | ದಿನನಿತ್ಯದ ಸೇವೆ |
| ಜೀವನಾವರ್ತನದ ಆಚರಣೆ | ಜೀವನಾವರ್ತನದ ಆಚರಣೆ |
| ವಾರ್ಷಿಕಾವರ್ತನದ ಆಚರಣೆ | ವಾರ್ಷಿಕಾವರ್ತನದ ಆಚರಣೆ |
| ಜಾತ್ರೆ | ಜಾತ್ರೆ |

ಹೊಸೂರಮ್ಮನಲ್ಲಿ ಇವೇ ಆಚರಣೆ ಮತ್ತು ಹುಲಿಗೆಮ್ಮನಲ್ಲೂ ಇವೇ ಆಚರಣೆಗಳನ್ನು ಒಂದೇ ರೀತಿಯಾಗಿ ಕಂಡುಕೊಂಡರೂ ವಿಧಿವಿಧಾನಗಳಲ್ಲಿ, ಸೇವೆಗಳಲ್ಲಿ ಕೆಲವೊಂದು ಅತಿ ವಿರಳವಾದ ರೀತಿಯಲ್ಲಿ ಕೆಲವು ಆಚರಣೆಗಳು ಬದಲಾವಣೆಗೆ ಒಳಪಟ್ಟಿವೆ ಎಂದು ಹೇಳಬಹುದು. ಹುಲಿಗೆಮ್ಮಳಿಗೆ ಬಲಿಯ ಆಚರಣೆಯನ್ನು ಹೆಚ್ಚಾಗಿ ಮಾಡಲಾಗುತ್ತದೆ. ಆದಕಾರಣ ಇಲ್ಲಿ ಕೆಳವರ್ಗದ ಮೇಲುಗೈಯನ್ನು ಹೆಚ್ಚಾಗಿ ಕಾಣುತ್ತೇವೆ. ಹೊಸೂರಮ್ಮನಿಗೆ ಬಲಿಯ ಆಚರಣೆಗಳಿಲ್ಲ ಮತ್ತು ಈಕೆಯನ್ನು ಬ್ರಾಹ್ಮಣರು ಹೆಚ್ಚಾಗಿ ಆರಾಧಿಸುತ್ತಿರುವುದರಿಂದ ಮತ್ತು ಆಚರಣೆಗಳಲ್ಲಿ ಬ್ರಾಹ್ಮಣೀಕತ್ವದ ಪಾಲನೆಗಳಾಗಿವೆ. ಆದ್ದರಿಂದ ಈಕೆಗೆ ಬಲಿ ಆಚರಣೆಗಳ ಬದಲಾಗಿ ಕಾಯಿಕರ್ಪೂರದ ಆಚರಣೆಗಳನ್ನು ಕಂಡುಕೊಳ್ಳುತ್ತೇವೆ.

ಹುಲಿಗೆಮ್ಮಳು ಹುಲಿಯ ವಾಹನವನ್ನೇರಿರುವುದರಿಂದ ಬೇರೆ ವಾಹನಗಳ ಉತ್ಸವವೂ ಇಲ್ಲಿ ಕಡಿಮೆ. ಆದರೆ ಹೊಸೂರಮ್ಮಳಿಗೆ ಬೇರೆ ಎಲ್ಲ ವಾಹನಗಳಾದ ಸಿಂಹವಾಹನ, ಮಯೂರವಾಹನ, ಅಶ್ವವಾಹನ, ಗಜವಾಹನ, ಗರುಡವಾಹನ ಈ ರೀತಿಯಾಗಿ ಕಂಡುಕೊಳ್ಳುತ್ತೇವೆ. ಹುಲಿಗೆಮ್ಮಳಲ್ಲಿ ಹೆಚ್ಚಾಗಿ ಉಟಿಗೆಯ ಆಚರಣೆಯನ್ನು ಕಂಡುಕೊಳ್ಳುತ್ತೇವೆ. ಆದರೆ ಹೊಸೂರಮ್ಮಳಿಗೆ ಹೋಲಿಸಿದರೆ ಇಲ್ಲಿ ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೊಸೂರಮ್ಮಳಿಗೆ ಉಟಿಗೆ ಆಚರಣೆ ಅತಿ ವಿರಳವಾದ ರೀತಿಯಲ್ಲಿ ಮಾಹಿತಿಯನ್ನು ಕಂಡುಕೊಳ್ಳಲಾಗಿದೆ.

ಹುಲಿಗೆಮ್ಮ ಹೊಸೂರಮ್ಮ ಅಕ್ಕತಂಗಿಯರಾಗಿ ಇವರಿಬ್ಬರೂ ಸಮಾನಗುಣವಂತರು ಎನ್ನುವುದನ್ನು ಇಲ್ಲಿ ನಾವು ಹೆಚ್ಚಾಗಿ ಗ್ರಹಿಸುತ್ತೇವೆ. ಇವರಿಬ್ಬರೂ ಶಿಷ್ಟ ಮತ್ತು ಪರಿಶಿಷ್ಟವರ್ಗದವರಲ್ಲಿ ಯಾವುದೇ ರೀತಿಯಲ್ಲಿ

ಜಗಳವನ್ನುಂಟು ಮಾಡದ ರೀತಿಯಲ್ಲಿ ಎಲ್ಲಾ ರೀತಿಯಲ್ಲಿ ತಮ್ಮ ಸಮಾನ ಮನೋಭಾವನೆಯನ್ನು ಪ್ರತಿಸಿಧಿಸುತ್ತಾ ನೋಡುವುದಾದರೆ, ಕೌಟುಂಬಿಕದಲ್ಲಿ ಅಕ್ಕತಂಗಿಯರು ಇಬ್ಬರು ಒಂದೇ ಎನ್ನುವದನ್ನು ಮತ್ತು ಒಂದೇ ಮನಸ್ಕರು ಎನ್ನುವ ಚಿತ್ರಣವನ್ನು ಕೊಡುತ್ತದೆ.

ಇವರಿಬ್ಬರಲ್ಲಿ ವ್ಯತ್ಯಾಸವಾಗಿ ಹೊಸೂರಮ್ಮ ಮಾನ್ಯೇವು ಗದ್ದೆಗಳನ್ನು ಪಡೆದಿದ್ದಾಳೆ. ಹುಲಿಗೆಮ್ಮಳು ಜನರನ್ನು ಪಡೆದಿದ್ದಾಳೆ. ಇನ್ನೊಂದು ಇಲ್ಲಿ ಶಿಷ್ಟ ಪರಿಶಿಷ್ಟ ವರ್ಗದ ಕುಲದೇವತೆಗಳಾಗಿ ಕಂಡುಬರುವುದನ್ನೂ ನೋಡಿದಾಗ ಈಕೆ ಹೊಸೂರಮ್ಮ ಹೆಚ್ಚಾಗಿ ಬ್ರಾಹ್ಮಣರ ಮನೆಯಲ್ಲೇ ಹೆಚ್ಚು ಪೂಜಿತಳಾಗುವುದು ಕಂಡುಬಂದಿತೆ ವಿನಃ ಕೆಳವರ್ಗದ ಜನತೆಯಲ್ಲಿ ಹುಲಿಗೆಮ್ಮಳ ಹೆಸರನ್ನೇ ಹೆಚ್ಚು ಕಂಡುಕೊಳ್ಳುತ್ತೇವೆ.

ಇದು ಯಾಕೆ ಎನ್ನುವುದನ್ನು ವಿಸ್ತರಿಸುತ್ತಾ ಹೋದಾಗ ಎರಡು ವರ್ಗಕ್ಕೂ ಅನ್ವಯಿಸಿ ನೋಡಿದಾಗ ಶಕ್ತಿಯಲ್ಲಿ ಅಂದರೆ ಬ್ರಾಹ್ಮಣ ವರ್ಗದಲ್ಲಿ ಪೂಜೆ, ವಿಧಿವಿಧಾನಗಳಲ್ಲಿ ಪಡಲಿಗಿ ತುಂಬಿಸುವ ಆಚರಣೆಯಲ್ಲಿ ನಾವು ಕೆಲವೊಂದು ನಿಷೇಧಾರ್ಥದ ಆಹಾರ ಪದಾರ್ಥಗಳನ್ನು ಕಂಡುಕೊಳ್ಳುತ್ತೇವೆ. ಬ್ರಾಹ್ಮಣರು ಪಡ್ಲಿಗಿಗೆ ಹಸಿಮೆಣಸಿನಕಾಯಿ, ಬದನೆಕಾಯಿ, ಉಳ್ಳಾಗಡ್ಡಿಯನ್ನು ಹೆಚ್ಚಾಗಿ ಬಳಕೆಗೆ ತೆಗೆದುಕೊಳ್ಳದೇ ಇರವುದು ಒಂದು ವೇಳೆ ಬಳಕೆಗೆ ತೆಗೆದುಕೊಳ್ಳದೇ ಇರುವುದು ಬಳಕೆಗೆ ತೆಗೆದುಕೊಂಡರೂ ಅದನ್ನು ಪಡ್ಲಿಗಿಗೆ ತುಂಬಿ ಜೋಗತಿಯರಿಗೆ ನೀಡುವುದನ್ನು ಕಾಣುತ್ತೇವೆ. ಆಹಾರದ ಪದಾರ್ಥದಲ್ಲಿ ದೈಹಿಕ ಶಕ್ತಿ ಕಡಿಮೆಯಾಗುವುದನ್ನು ಬ್ರಾಹ್ಮಣರ ದೇವತೆಯಾದ ಈಕೆ ಸ್ವಲ್ಪ ಶಕ್ತಿಯಲ್ಲಿ ಕಡಿಮೆ ಶಕ್ತಿ ಹೊಂದಿರುವ ದೇವತೆಯಾಗಿದ್ದು ಪ್ರಬಲ ಶಕ್ತಿಯಾದ ಹುಲಿಗೆಮ್ಮನನ್ನು ಅನುಸರಿಸುವುದನ್ನು ನಾವು ಇಲ್ಲಿ ಕಾಣಬಹುದು. ಅಂದರೆ ಒಂದು ಊಹೆ ಮುಖಾಂತರ. ಅಂದರೆ ನಾಗರಿಕ ಸಂಸ್ಕೃತಿಯಿಂದ ಮತ್ತೆ ಜನಪದರ ಸಂಸ್ಕೃತಿಯನ್ನು ಒಪ್ಪಿಕೊಂಡಿರುವಂತದ್ದನ್ನು ಕಾಣಬಹುದು. ಇದು ವಿಚಾರವಾದರೆ ಹಿಂದುಳಿದ ವರ್ಗದವರಿಗೂ ಹೊಸೂರಮ್ಮ ಮನೆದೇವತೆಯಾಗಿರುವುದನ್ನು ಕಾಣುತ್ತೇವೆ. ಲಿಂಗಾಯತರಿಗೆ, ಗಾಣಿಗರಿಗೆ ಅಂದರೆ ಪ್ರಾದೇಶಿಕವಾಗಿ ಕಂಡುಕೊಳ್ಳುತ್ತಾ ಹೋಗಬಹುದಾಗಿದೆ. ಇನ್ನು ಹುಲಿಗೆಮ್ಮ ಹೊಸೂರಮ್ಮನನ್ನು ನೆನೆಯುತ್ತಲೇ ಉಧೋ ಹಾಕುವುದು ನಮಗೆ ಅಕ್ಕತಂಗಿಯರನ್ನು ನೆನೆಯುವದರ ಮೂಲಕವಾದರೂ ಹುಲಿಗೆಮ್ಮನ ಹೊಸೂರಿನಿಂದಲೇ ಬಂದವಳೆಂದು ಆಕೆಯ ಮೊದಲ ಕ್ಷೇತ್ರ ಹೊಸೂರು ಎಂದು ಈ ಕ್ಷೇತ್ರಕ್ಕೆ ಸಂಬಂಧಪಟ್ಟ ರೀತಿಯಲ್ಲಿ ಹೇಳಬಹುದು. ಆ ಒಂದು ಕಾರಣದಿಂದ ಹೊಸೂರಮ್ಮ-ಹುಲಿಗೆಮ್ಮ ನಿನ್ನಾಲ್ಕುಧೋ... ಉಧೋ ಎಂದು ಹೇಳುವ ಘೋಷಣೆ ಪಡ್ಲಿಗಿಯ ಆಚರಣೆಯಲ್ಲಿ ಕಾಣಬಹುದು.

ಹುಲಿಗೆಮ್ಮ-ಹೊಸೂರಮ್ಮ ಎರಡು ವರ್ಗದ ಕುಲದೇವತೆಗಳಾದರೂ ತಮ್ಮ ತಮ್ಮ ಶಕ್ತಿಪ್ರದರ್ಶನದಲ್ಲಿ ಮೇಲು ಮತ್ತು ಕೆಳವರ್ಗವನ್ನು ಪ್ರತಿನಿಧಿಸುವ ಮುಖೇನ ಸಾಮಾಜಿಕ ವೈರುಧ್ಯಗಳನ್ನು ಪ್ರಕಟಪಡಿಸುತ್ತಿದ್ದಾರೆ. ಹುಲಿಗೆಮ್ಮ ಬಂದ ಮೂಲಕ್ಷೇತ್ರವನ್ನು ಹೊಸೂರು ಎಂದು ಹೆಸರಿಸುವುದರ ಮೂಲಕ ಹುಲಿಗಿಯು ಹೊಸೂರಿನ ವ್ಯಾಪ್ತಿಯದ್ದೆಂದೂ ಹಾಗಾಗಿ ಶ್ರೇಣೀಕರಣದಲ್ಲಿ ಹೊಸೂರಮ್ಮ ಹುಲಿಗೆಮ್ಮಳಿಗಿಂತ ಮೇಲು ಹಂತದಲ್ಲಿದ್ದಾಳೆಂದು ವೈದ್ದಿಕ ಪ್ರಣೀತ ಸಂಕಥನಗಳು ನಿರೂಪಿಸಲು ಯತ್ನಿಸುತ್ತವೆ. ಇಂತಹ ಪ್ರಯತ್ನಗಳು ನಮ್ಮ ಸಾಮಾಜಿಕ ವೈರುಧ್ಯಗಳನ್ನು ವ್ಯಕ್ತಪಡಿಸುತ್ತವೆ. ಹುಲಿಗೆಮ್ಮ ಶೋಷಿತ ವರ್ಗದ ಜನಾಂಗಕ್ಕೆ ಧ್ವನಿಯಾದಂತವಳು ಮತ್ತು

ಜನಪರ ಆಶಯುಗಳನ್ನು ಪ್ರತಿಭಟನಾತ್ಮಕ ನೆಲೆಯಲ್ಲಿ ಅಭಿವ್ಯಕ್ತಿಸುವ ಸ್ತ್ರೀಯಾಗಿರುವುದು ಅರ್ಥಪೂರ್ಣವಾದುದಾಗಿದೆ. ಹುಲಿಗೆಮ್ಮ ಹೆಚ್ಚಾಗಿ ಕೆಳವರ್ಗದವರ ಮನೆಯಲ್ಲಿಯೇ ಆರಾಧಿಸಲ್ಪಡುತ್ತಿದ್ದಾಳೆ. ಹೀಗೆ ಆರಾಧಿಸುವುದರ ಮುಖಾಂತರ ಶೋಷಿತರ ಧ್ವನಿಯಾಗಿ ಹಲವು ತಳಸಮುದಾಯಗಳ ಸಾಂಸ್ಕೃತಿಕ ಚಹರೆಯಾಗಿರುವುದು ಮಾತ್ರವಲ್ಲದೆ ಆ ಸಮುದಾಯಗಳ ಆಶಯಗಳನ್ನು ಸಾಂಕೇತಿಕವಾಗಿ ಪ್ರಕಟಪಡಿಸುವ ಸಂಕೇತವಾಗಿದ್ದಾಳೆ.

ಹುಲಿಗೆಮ್ಮ-ಹೊಸೂರಮ್ಮ ಕುಲದೇವತೆಗಳಾಗಿ ಬಾಹ್ಯಸಂಘರ್ಷಕ್ಕೆ ಕಾರಣವಾಗದಿದ್ದರೂ ಆಂತರಿಕವಾಗಿ ಸಾಮಾಜಿಕ ಸಂಘರ್ಷವೊಂದಕ್ಕೆ ಪ್ರೇರಕವಾಗಿರುವುದು ಮಾತ್ರ ನಿಜ. ಇದು ನಮ್ಮ ವರ್ಣವ್ಯವಸ್ಥೆಯ ವೈರುಧ್ಯಗಳನ್ನು, ವಿರೋಧಾಭಾಸಗಳನ್ನು ವ್ಯಕ್ತಪಡಿಸುತ್ತದೆ. ಹುಲಿಗೆಮ್ಮನನ್ನು ತಮ್ಮ ದೈವವನ್ನಾಗಿಸಿಕೊಳ್ಳುವುದರ ಮೂಲಕ ತಳಸಮುದಾಯಗಳು ವ್ಯಕ್ತಪಡಿಸುವ ಆಶಯ ಮತ್ತು ರೂಪುಗೊಳ್ಳಲಿರುವ ಸಂಘರ್ಷವನ್ನು ಅದು ಸ್ಪಷ್ಟ ಆಕಾರ ಪಡೆಯುವ ಮೊದಲೇ ವೈದಿಕ ಪುರೋಹಿತಶಾಹಿ ಅಲ್ಲಲ್ಲಿಯೇ ಅದನ್ನು ಹೊಸಕಿ ಹಾಕಲು ಪ್ರಯತ್ನಿಸುತ್ತದೆ. ಮಾತೃಮೂಲೀಯ ಸಂಸ್ಕೃತಿಯ ದೈವವನ್ನು ಮನುಷ್ಯವಿರೋಧಿ ವೈದಿಕ ಆಶಯಗಳೊಂದಿಗೆ ಸೇರಿಸುವ ಕ್ರಮದಲ್ಲಿ ತೇಪೆ ಹಾಕುವ ಕೆಲಸ ಮಾಡುತ್ತಿದೆ. ಹುಲಿಗೆಮ್ಮನನ್ನು ಆರ್ಯ ದೈವಗಳೊಂದಿಗೆ ಸಮೀಕರಿಸುವಂತಹ ಸಂಕಥನಗಳು ಹುಟ್ಟಿಕೊಳ್ಳುವುದು ಸಹ ಪುರೋಹಿತಶಾಹಿಯ ಹುನ್ನಾರದ ಒಂದು ಭಾಗವೇ ಆಗಿದೆ.

ಹುಲಿಗೆಮ್ಮ ಹೆಚ್ಚಾಗಿ ಶೋಷಿತ ವರ್ಗವಲ್ಲದೆ ಹಲವು ವರ್ಗದವರಿಗೂ ತಾನೂ ಅಮ್ಮಳಾಗಿ, ಶಕ್ತಿ ದೇವತೆಯಾಗಿ ಮೆರೆದು ತನ್ನ ಪವಾಡಗಳಿಂದ ಭಕ್ತರನ್ನು ಸೆಳೆದುಕೊಂಡಿರುತ್ತಾಳೆ. ಹೆಚ್ಚಾಗಿ ಕೆಳವರ್ಗದವರ ಮನೆಗಳಲ್ಲಿ ಕುಲದೇವತೆಯಾಗಿದ್ದಾಳೆ. ಅವರೇ ಈಕೆಯನ್ನು ನಂಬಿದ್ದಾರೆ ಎನ್ನುವುದಕ್ಕಿಂತ ಅವರಿಗಾಗಿಯೇ ಈಕೆ ಇದ್ದಾಳೆಂದು ಹೇಳಬಹುದು.

**೭.೪ ಲೈಂಗಿಕತೆ ಮತ್ತು ಪುರುಷಪ್ರಾಧಾನ್ಯತೆ**

ಹುಲಿಗೆಮ್ಮ ಪಂಥದ ಆಚರಣಾತ್ಮಕ ವಿವರಗಳು ಹಲವಾರು ವಿಸ್ಮಯಕಾರಿ ಅಂಶಗಳನ್ನು ಬೆಳಕಿಗೆ ತರುವಂತಿವೆ. ಈ ಪಂಥದ ಆಚರಣೆಯ ಮುಖ್ಯ ಅಂಗವಾಗಿರುವ ಜೋಗತಿಯರು ಮತ್ತು ಗಂಡುಜೋಗಮ್ಮಗಳು ಹುಲಿಗೆಮ್ಮ ಪಂಥದ ಪ್ರಚಾರಕರು ಮಾತ್ರವೇ ಆಗಿರದೆ ಪುರುಷಪ್ರಾಧಾನ್ಯ ವ್ಯವಸ್ಥೆಯನ್ನು ಪ್ರಶ್ನಿಸುವ ಮತ್ತು ಬದುಕುವ ಹಕ್ಕನ್ನು ಪ್ರತಿಪಾದಿಸುವ, ಪ್ರತಿಭಟನಾತ್ಮಕ ನೆಲೆಯಲ್ಲಿ ಒಂದು ಗಂಡು ಇಲ್ಲಿ ಹೆಣ್ಣಾಗಿ ಪರಿವರ್ತನೆಯಾಗುವುದನ್ನು ವೈಜ್ಞಾನಿಕವಾಗಿ ವಿಶ್ಲೇಷಿಬಹುದು. ಒಂದು ಗಂಡು ಮಗುವಿಗೆ ಚಿಕ್ಕಮಗುವಾಗಿದ್ದಾಗ ಹೆಚ್ಚಾಗಿ ಹೆಣ್ಣುಮಗುವಿನ ಬಟ್ಟೆಗಳನ್ನು ತೊಡಿಸುವುದರಿಂದ, ಮನೆಯಲ್ಲಿ ತಾಯಿಯ ಹತ್ತಿರ ಬೆಳೆಯುವುದರಿಂದ, ಮನೆಯಲ್ಲಿಯೂ ಹೆಣ್ಣುದೇವತೆಯನ್ನೇ ಪೂಜೆ ಮಾಡುವುದರಿಂದ ಮತ್ತು ಪರಿಸರದ ಪ್ರಭಾವಕ್ಕನುಗುಣವಾಗಿಯೂ ತಾನು ಹೆಣ್ಣಾಗಿ ಪರಿವರ್ತನೆಯಾಗಬೇಕೆನ್ನುವ ಇಚ್ಛೆ ಅಪ್ರಜ್ಞಾಪೂರ್ವಕವಾಗಿ ಮೂಡಿರಬಹುದಾಗಿದೆ. ತನ್ನ

ಹೆಣ್ತನದ ವರ್ತನೆಗಳಿಗೆ ಅಧಿಕೃತತೆ ನೀಡಲು ದೇವಿಯ ಹೆಸರೇಳಿಕೊಂಡು ಬಂದಿರಬಹುದಾದ ಸಾಧ್ಯತೆಯೂ ಇದೆ. ಹುಲಿಗೆಮ್ಮ ತನ್ನ ಕ್ಷೇತ್ರದಲ್ಲಿನ ಒಂದು ಗಂಡಿಗೂ ಸೀರೆಯನ್ನು ಉಡಿಸುತ್ತಾಳೆ ಎನ್ನುವುದು ಒಂದು ಪ್ರತೀಕಾರದ ಸಂಕೇತವೆಂಬಂತೆ ಜನಪದದ ಮೂಲಗಳು ವ್ಯಾಖ್ಯಾನಿಸುತ್ತವೆ. ಅಥವಾ ಇದನ್ನು ಇನ್ನೊಂದು ರೀತಿಯಿಂದಲೂ ಅರ್ಥೈಸಬಹುದಾಗಿದೆ. ಮಾತೃಮೂಲೀಯ ದೇವತೆಯಾದ ಹುಲಿಗೆಮ್ಮ ಪುರುಷಾಧಿಕ್ಯದಿಂದ ನೊಂದ ಕಾರಣ ಜನಪದರ ಸಹಾನುಭೂತಿಗೆ ಕಾರಣಳಾಗಿದ್ದಾಳೆ. ಮಾತೃಮೂಲೀಯ ಸಂಸ್ಕೃತಿಯುಳ್ಳ ಬುಡಕಟ್ಟು ಮೂಲದ ಸಮುದಾಯಗಳು ಇವಳಿಗೆ ದೈವತ್ವವನ್ನು ಆರೋಪಿಸಿ ಪ್ರತಿಭಟನಾತ್ಮಕ ನೆಲೆಯಲ್ಲಿ ಪುರುಷಾಧಿಕ್ಯವನ್ನು ಪ್ರಶ್ನಿಸುವ ಅಲ್ಲಗಳೆಯುವ ನಿಟ್ಟಿನಲ್ಲಿ ಈ ಆಚರಣೆಗಳು ರೂಪುಗೊಂಡಿವೆಯೆನಿಸುತ್ತದೆ. ಯಾಕೆಂದರೆ ಗಂಡಿಗೂ ಹೆಣ್ತನವನ್ನು ಆರೋಪಿಸಿ ಅವನ ಪುರುಷಾಹಂಕಾರವನ್ನು ಮಣ್ಣುಗೂಡಿಸುವ ಮೂಲಕ ದೇವಿ ಪುರುಷಾಧಿಕ್ಯವನ್ನು ಗೇಲಿಮಾಡುವ, ವಿಡಂಬಿಸುವ ಆಶಯವನ್ನು ಹೊಂದಿದಂತೆ ತೋರಿಬರುತ್ತದೆ.

ಇದಕ್ಕೆ ಮತ್ತೊಂದು ಮಗ್ಗಲೂ ಇದೆ. ಇಂದು ಪಾಶ್ಚಾತ್ಯಾ ಜಗತ್ತಿನಲ್ಲಿ ಸಲಿಂಗಕಾಮಕ್ಕೆ ಅಧಿಕೃತತೆಯ ಮುದ್ರೆಯೊತ್ತಬೇಕೆಂದು ಅಲ್ಲಿ ಆಂದೋಲನಗಳೇ ನಡೆಯುತ್ತಿವೆ. ಸಲಿಂಗ ಪ್ರೇಮಿಗಳು ಗಂಡು ಗಂಡು, ಹೆಣ್ಣು ಹೆಣ್ಣು ಸಾಂಪ್ರದಾಯಿಕವಾಗಿ ಮದುವೆಯಾಗುವ ಅಥವಾ ಒಂದಾಗಿ ಇರುವ ಸ್ವಚ್ಛಂಧತೆ ಮತ್ತು ಸ್ವಾತಂತ್ರ್ಯ ಅವರಿಗಿದೆ. ಅದಕ್ಕೊಂದು ಕಾನೂನಿನ ಸಮ್ಮತಿಯನ್ನು ಸಹ ನೀಡಬೇಕೆಂಬುದಾಗಿ ಹೋರಾಟಗಳು ರೂಪುಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಇಲ್ಲಿನ ಗಂಡುಜೋಗಮ್ಮರು ತಮ್ಮ ದೈಹಿಕ ಮತ್ತು ಮಾನಸಿಕವಾಗಿರುವ ಹೆಣ್ತನದ ಬಯಕೆಗೆ ಹಾಗೂ ತಮ್ಮ ಬದುಕಿನ ವಿಧಾನಕ್ಕೆ ಸಾಮಾಜಿಕ ಮತ್ತು ಧಾರ್ಮಿಕತೆಯ ಮಾನ್ಯತೆಯನ್ನು ಪಡೆಯಲೋಸುಗ ಹುಲಿಗೆಮ್ಮ ಪಂಥವನ್ನು ಆಶ್ರಯಿಸಿದಂತಿದೆ. ಮಾತೃಮೂಲೀಯ ಅಂಶಗಳನ್ನು ಎತ್ತಿಹಿಡಿಯುವ ಮತ್ತು ಪ್ರತಿಪಾದಿಸುವ ಈ ಸಂಸ್ಕೃತಿಯು ತನ್ನ ಸ್ವರೂಪಕ್ಕನುಗುಣವಾಗಿ ಗಂಡುಜೋಗಿಗಳ ಹೆಣ್ಣಾಗಿ ಪರಿವರ್ತನೆಯಾಗಬೇಕೆಂಬ ಮಾನಸಿಕ ಮತ್ತು ದೈಹಿಕ ಪರಿವರ್ತನೆಯ ಇಚ್ಛೆಗೆ ಮತ್ತು ಅಂತಹ ಸ್ಥಿತಿಗೆ ಅಧಿಕೃತ ಮಾನ್ಯತೆಯ ಮುದ್ರೆಯೊತ್ತಿರುವುದು ಗಮನಿಸತಕ್ಕ ಅಂಶವಾಗಿದೆ.

ದೇವದಾಸಿ ಸಂಸ್ಕೃತಿಯನ್ನು ಪ್ರೋತ್ಸಾಹಿಸಲಾಗುತ್ತಿದೆಯೆಂದು ಹೇಳಲಾಗುತ್ತಿರುವ

### ೭.೫ ಹುಲಿಗೆಮ್ಮ ದೇವಿಯ ಭಕ್ತಸಮುದಾಯದ ಪ್ರೇರಣೆಗಳು

ಹುಲಿಗೆಮ್ಮ ದೇವಿಗೆ ಸಾಮಾನ್ಯ ಭಕ್ತರಲ್ಲದೆ ಜೋಗತಿಯರು, ಜೋಗಪ್ಪಗಳು ಭಕ್ತರಾಗಿರುವುದನ್ನು ಕಾಣುತ್ತೇವೆ. ಅದರಲ್ಲೂ ಈ ಜೋಗತಿಯರಾಗಲು ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಇತ್ಯಾದಿ ಅಂಶಗಳು ಈ ಸಂಪ್ರದಾಯದೊಂದಿಗೆ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಕಾರ್ಯಕಾರಣ ಸಂಬಂಧವನ್ನು ಪಡೆದುಕೊಂಡಿದೆಯೆನ್ನಬಹುದು. ಈ ಜೋಗತಿಯರೆಲ್ಲರೂ ದೇವಿಯ ಸೇವೆಗೆ ಮೀಸಲಾದವರು ಎಂದರ್ಥ. ದೇವದಾಸಿಯರು ಮೂಲತಃ ದೇವದಾಸಿಯರೆಂದರೆ ದೇವಸ್ಥಾನಗಳಲ್ಲಿ ನೃತ್ಯ, ಸಂಗೀತ, ಸೇವೆ ಮಾಡಿಕೊಂಡು ಜೀವಿಸುತ್ತಿದ್ದರು. ಆದರೆ ಪ್ರಭಾವಶಾಲಿ ಬುದ್ಧಿವಂತರ ಕಪಿಮುಷ್ಟಿ, ಶೋಷಣೆಯ ರೂಪ ಪಡೆದುಕೊಂಡಿತು.

ಈ ಪದ್ಧತಿಯ ಪ್ರೇರಣೆಯನ್ನು ಗುರುತಿಸುವ ಮೊದಲು ಈ ಶಬ್ದದ ಬಗೆಗೆ ಸ್ಪಷ್ಟೀಕರಣ ಅಗತ್ಯ. ಬಸವಿ, ಜೋಗತಿ, ದಾಸಿ, ಗೆಜ್ಜೆಪೂಜೆ, ಮಣಿಕಟ್ಟು, ಮುತ್ತುಕಟ್ಟು ಈ ಎಲ್ಲಾ ಪಾರಿಭಾಷಿಕ ಪದಗಳು ದೇವದಾಸಿಯ ವೃತ್ತಿಯ ಸೂಚಕಗಳಾಗಿವೆ.

ಜೋಗತಿಯರು ಹುಲಿಗೆಮ್ಮ ಪಂಥದ ಪ್ರಸಾರಕರು ಹಾಗೂ ಧರ್ಮದ ಹೆಸರಿನಲ್ಲಿ ಭಿಕ್ಷೆ ನಡೆಸುವರು. ಆದರೆ ಧಾರ್ಮಿಕ ಆಶಯ ಹೊಂದಿದ್ದು ಇಬ್ಬರ ಕೇಂದ್ರಬಿಂದು ದೇವರೇ ಎಂಬುದು ಮುಖ್ಯ. ಈ ಎರಡು ಪಂಥದವರು ಯಾವುದೋ ಒಂದು ಹಂತದಲ್ಲಿ ನೈತಿಕ, ಧಾರ್ಮಿಕ, ಸಾಮಾಜಿಕ ಮಹತ್ವವನ್ನು ಕಳೆದುಕೊಂಡು ವೇಶ್ಯಾವೃತ್ತಿಗೆ ತಿರುಗಿರಬಹುದು. ನಮ್ಮ ದೇಶದಲ್ಲಿ ನಾಗರಿಕತೆಯ ಒಳಿತು ಕೆಡುಕುಗಳೆರಡು ಈ ದೇವಾಲಯಗಳಿಗೆ ಸಂಬಂಧಿಸಿದ್ದು, ಇವುಗಳ ಪ್ರಾಕಾರದಲ್ಲಿ ಸಾವಿರಾರು ಕುಟುಂಬಗಳಿಗೆ ದೇವಸ್ಥಾನಗಳು ಆಶ್ರಯ ತಾಣಗಳಾಗಿದ್ದವು ಎಂದು ಹೇಳಬಹುದು. ನಮ್ಮ ಶಿಲ್ಪ, ಚಿತ್ರಲೇಖನ, ನೃತ್ಯ, ಸಂಗೀತ ಎಲ್ಲಕ್ಕೂ ಈ ದೇವಾಲಯಗಳೇ ನೆಲೆಗಳಾಗಿದ್ದವು. ಈ ವಿಧವಾಗಿ ದೇವಾಲಯಗಳು ನಮ್ಮ ಒಳ್ಳೆಯ ಕಾಲ ಮತ್ತು ಕೆಟ್ಟ ಕಾಲಗಳೆರಡರಲ್ಲೂ ಉಪಕರಿಸಿವೆ. ಹುಲಿಗೆಮ್ಮನ ಹೆಸರಿನಲ್ಲಿ ಹೆಣ್ಣನ್ನು ಬೇಟೆಯಾಡುವ ಸಂಗತಿ ಸಾಮಾನ್ಯವಾಗಿದೆ. ಬಡತನ, ಅನಕ್ಷರತೆ, ಅಜ್ಞಾನ, ನಿರುದ್ಯೋಗ, ದೇವರು ಧರ್ಮ ಇವುಗಳ ಚಕ್ರದಲ್ಲಿ ಸಿಲುಕಿ ನಲುಗುತ್ತಿರುವ ಹಲವಾರು ಕುಟುಂಬಗಳು ಅನಿವಾರ್ಯವಾಗಿ ಜೋಗತಿ ಸಂಪ್ರದಾಯಕ್ಕೆ ಕಟ್ಟುಬಿದ್ದಿವೆ. ಹೀಗಾಗಿ ಧಾರ್ಮಿಕತೆಯ ಜೊತೆ ಆರ್ಥಿಕ ಹಾಗೂ ಸಾಮಾಜಿಕ ಕಾರಣಗಳು ಈ ಪದ್ಧತಿಗೆ ಪ್ರೇರಣೆಯಾಗಿ ಹುಲಿಗೆಮ್ಮ ಭಕ್ತರಾಗಲು ಕಾರಣವಿರಬಹುದು.

ಧಾರ್ಮಿಕ ಶ್ರದ್ಧೆ, ಮೌಢ್ಯತೆ, ಜೋಗತಿಯಾಗಲು ಮುಖ್ಯಪ್ರೇರಣೆ ಎನ್ನಬಹುದು. ಏನೇ ಕಷ್ಟಗಳು ಬಂದರೂ ಅದೆಲ್ಲದಕ್ಕೂ ಕಾರಣ ಹುಲಿಗೆಮ್ಮನೇ ಎಂದು ಹೇಳುವುದಾಗಿದೆ. ಮಕ್ಕಳಾಗದೇ ಇರುವವರು, ರೋಗದಿಂದ ನರಳುವವರು ದೇವರಿಗೆ ಹರಕೆ ಹೊರುವುದು ನಮ್ಮ ತಲೆಮಾರಿನಿಂದ ಬಂದಿದೆ ಎಂದು ಹೇಳುವರು. ಕೆಲವರು ಅದನ್ನು ತಮ್ಮ ಕುಲಕಸುಬೆಂದೇ ಭಾವಿಸಿದ್ದಾರೆ. ಆದ್ದರಿಂದ ಹೆಣ್ಣು ಮಗು ಋತುಮತಿಯಾಗುವ ಮೊದಲು ೬-೭ ವರ್ಷಕ್ಕೆ ಜೋಗತಿ ಜೋಗತಿ ಪಟ್ಟ ಕಟ್ಟಲಾಗುತ್ತಿದೆ. ಒಂದು ವೇಳೆ ಕಟ್ಟದೇ ಇದ್ದರೂ ಹುಲಿಗೆಮ್ಮ ಕಾಡುತ್ತಾಳೆ. ಕಾದಾಟವಿಕ್ಕುತ್ತಾಳೆ ಎಂದು ಜನಪದರು ನಂಬಿರುವುದನ್ನು ಕಂಡುಕೊಳ್ಳಬಹುದು.

ಒಂದು ಹೆಣ್ಣು ಯಾವುದೇ ಕಾರಣದಿಂದ ಸಮಾಜದಲ್ಲಿ ಬಹಿಷ್ಕೃತಳಾದರೂ ಆಕೆ ಜೋಗತಿಯಾಗುವುದರ ಮೂಲಕ ಸಮಾಜದಲ್ಲಿ ಗುರುತಿಸಿಕೊಳ್ಳುತ್ತಾಳೆ. ಆದ್ದರಿಂದ ಹುಲಿಗೆಮ್ಮನ ಕ್ಷೇತ್ರದಲ್ಲಿ ಜೋಗತಿಯಾಗುವುದಕ್ಕಿಂತ ಮುಂಚೆ ಅವಳು ಸಾಮಾನ್ಯ ಹೆಣ್ಣು. ಇಲ್ಲಿ ಅವಳು ಹಲವು ಕಾರಣಗಳಿಂದ ಜೋಗತಿಯಾಗಿದ್ದಾರೆ. ಶೋಷಿತ ಸಮಾಜದಲ್ಲಿ ತನ್ನನ್ನು ಸಾಂಸ್ಕೃತಿಕ ಚಹರೆಯೊಂದಿಗೆ ಗುರುತಿಸಿಕೊಳ್ಳುವಿಕೆಯನ್ನು ಕಾಣುತ್ತೇವೆ. ಇಲ್ಲಿ ಹುಲಿಗೆಮ್ಮಳು ಚಿರ ಮುತ್ತೈದೆ ಆದ್ದರಿಂದ ಹುಲಿಗೆಮ್ಮನ ಭಕ್ತರಾದ ಈ ಜೋಗತಿಯರನ್ನು ಚಿರ ಮುತ್ತೈದೆಯರೆಂದು ಪರಿಗಣಿಸಿ ಮದುವೆ ತಾಳಿಯನ್ನು ತರಬೇಕಾದರೆ ಇವರ ಮನೆಯಿಂದಲೇ ತರುತ್ತಾರೆ.

**ಮಹಿಳಾ ಪ್ರತಿನಿಧೀಕರಣಗಳ ಮಾದರಿಗಳ ಹಿಂದಿರುವ ಪ್ರೇರಣೆಗಳು**

ಹುಲಿಗೆಮ್ಮ ಇಲ್ಲಿ ಹೆಣ್ಣಾದರೂ ಈ ಕ್ಷೇತ್ರದಲ್ಲಿ ಶೋಷಿತ ಧ್ವನಿಗೆ ತಾನು ಧ್ವನಿಯಾಗಿದ್ದಾಳೆ. ಹಲವಾರು ಭಕ್ತರನ್ನು ಪಡೆದು ಇಲ್ಲಿ ಭಕ್ತರ ಪ್ರತಿನಿಧಿಯಾಗಿ ತನ್ನ ಸ್ಥಾನವನ್ನು ಮೇಲುಗೈಯಾಗಿಸಿಕೊಂಡಿದ್ದಾಳೆ. ಒಂದು ಕಡೆ ದೇವತೆಯಾಗಿ ಎಲ್ಲರನ್ನೂ ಕಾಪಾಡುವ ಒಂದು ಅಗೋಚರ ಶಕ್ತಿಯಾಗಿದ್ದಾಳೆ. ಇಲ್ಲಿ ಈಕೆಯು ದುಷ್ಟರನ್ನು ಶಿಕ್ಷಿಸುವ ಶಿಷ್ಟರನ್ನು ಸಂರಕ್ಷಿಸುವ ದೇವತೆಯಾಗಿ ಮೆರೆದಿದ್ದಾಳೆ. ಬರೀ ಈ ಕ್ಷೇತ್ರಕ್ಕಷ್ಟೆ ಸೀಮಿತಗೊಳ್ಳದ ಈ ಗ್ರಾಮದೇವತೆ ಹೊರ ರಾಜ್ಯಗಳಿಂದಲೂ ಭಕ್ತರನ್ನು ಆಕರ್ಷಿಸುತ್ತಿದ್ದಾಳೆ. ಪ್ರಾದೇಶಿಕವಾಗಿ ತನ್ನ ಪವಾಡದ ಮೂಲಕ ತನ್ನದೇ ಆದ ಚಹರೆಯನ್ನು ಹುಲಿಗೆಮ್ಮ ಗುರುತಿಸಿಕೊಂಡಿದ್ದಾಳೆ. ಪ್ರತಿ ಮಂಗಳವಾರ ಮತ್ತು ಪ್ರತಿ ಶುಕ್ರವಾರ ಅಲ್ಲದೆ ಪ್ರತಿ ಹುಣ್ಣಿಮೆಗೆ ಈಕೆಯ ಜಾತ್ರೆಯನ್ನು ಕಾಣುತ್ತೇವೆ. ವರ್ಷದ ಎಲ್ಲೂ ಕಾಣದ ಜಾತ್ರೆಯನ್ನು ವರ್ಷದುದ್ದಕ್ಕೂ ಈ ದೇವಿಯ ಜಾತ್ರೆಯನ್ನು ಕಾಣುತ್ತೇವೆ. ವಿವಿಧ ಹರಕೆಗಳಿಂದ, ವಿವಿಧ ಸೇವೆಗಳಿಗೆ ಪ್ರೀತ್ಯರ್ಥಳಾಗಿ ಹಲವಾರು ಭಕ್ತರ ಮನಸ್ಸನ್ನು ಸೆಳದವಳಾದ ಈ ಹುಲಿಗೆಮ್ಮ ತಾಯಿಯನ್ನು ಬೇರೆಲ್ಲೂ ಈಕೆಯ ಮಹಿಮೆಯನ್ನು ಇಂತ ಸ್ವರೂಪದ ದೇವತೆಯನ್ನು ಕಾಣಲು ಸಾಧ್ಯವಿಲ್ಲವೆಂದು ಈ ಕ್ಷೇತ್ರದ ಜನಪದರು ನಂಬುತ್ತಾರೆ. ಯಾವ ಜಾತಿ ಭೇದಭಾವವಿಲ್ಲದೆ ಎಲ್ಲರನ್ನು ಸಮಚಿತ್ತದಿಂದ ಕಾಣುವ ತಾಯಿಯಾಗಿದ್ದಾಳೆ. ಈಕೆಯ ಶಾಂತತೆಯ ಗುಣದಿಂದ ಸ್ತ್ರೀ ಪುರುಷರೆನ್ನದೆ ಎಲ್ಲರೂ ಈಕೆಯನ್ನು 'ಅಮ್ಮ' ಎಂದು ಸಂಬೋಧಿಸಿ ಈಕೆಗೆ ಮಣಿಯುತ್ತಾರೆ. ಇಷ್ಟೆಲ್ಲಾ ನೋಡುವ ನಾವು ಈಕೆಗೆ ಇಷ್ಟೊಂದು ಭಕ್ತ ಸಮುದಾಯದ ಹಿಂದಿರುವ ಪ್ರೇರಣೆಗಳೇನು ಅದರಲ್ಲೂ ಮಹಿಳಾ ಪ್ರತಿನಿಧೀಕರಣದ ಮಾದರಿಗಳ ಹಿಂದಿರುವ ಪ್ರೇರಣೆಗಳನ್ನು ಕಂಡುಕೊಂಡಾಗ ಕೆಲವು ಅಂಶಗಳು ನಮಗೆ ಇಲ್ಲಿ ಕಾಣಿಸಿಕೊಳ್ಳುತ್ತವೆ.

**ವೈಜ್ಞಾನಿಕವಾಗಿ ನಾವು ನೋಡಿದಾಗ**

೧. ಹೆಚ್ಚಾಗಿ ಮಹಿಳೆಯರು ಈಕೆಯನ್ನು ಎಲ್ಲಾ ರೀತಿಯಿಂದಲೂ ನಂಬಿಕೊಂಡಿದ್ದಾರೆ. ಬೇಡಿದ್ದನ್ನು ಕೊಡುವ ದೇವಿಯಾಗಿ ಹುಲಿಗೆಮ್ಮ ಪರಿಣಮಿಸುತ್ತಾಳೆ.

ಹಿಂದಿನಕಾಲದಲ್ಲಿ ನಮ್ಮ ಪೂರ್ವಜರು ಮರಗಳನ್ನು ವೈಜ್ಞಾನಿಕವಾದ ರೀತಿಯಲ್ಲಿ ಕಂಡುಕೊಂಡು ಬಂದು ಅವುಗಳಲ್ಲಿ ಕೆಲವವುಗಳನ್ನು ವೃಕ್ಷದೇವತೆಗಳಾಗಿ ಪೂಜಿಸಿ ಅವುಗಳಿಗೆ ದೈವತ್ವದ ಭಾವನೆಗಳನ್ನು ಕಲ್ಪಿಸಿ ಆ ಮರಗಳನ್ನು ಕಡಿಯದ ಹಾಗೆ ಸಂರಕ್ಷಿಸಲು ಇದು ಒಂದು ಉಪಾಯವೂ ಆಗಿರಬಹುದು. ಯಾಕೆಂದರೆ ಉದಾಹರಣೆಯಾಗಿ ಬೇವಿನ ಮರವನ್ನು ಇಂದಿಗೂ ಹುಲಿಗೆಮ್ಮಳೆಂದು ಬಗೆದು ಆ ಮರಕ್ಕೆ ಅರಿಶಿಣ ಕುಂಕುಮವನ್ನು ಹಚ್ಚಿ ಅಲ್ಲಿ ಒಂದು ದೀಪವನ್ನಿಟ್ಟು ಆ ಮರಕ್ಕೆ ಸೀರೆಯನ್ನು ಸುತ್ತುವರೆದು ಪೂಜಿಸುವುದು ಒಂದು ಕಡೆ ಮರವನ್ನು ಕಡಿಯದೇ ಸಂರಕ್ಷಿಸುವುದು ಇನ್ನೊಂದು ಯಾವ ಕಲ್ಲು ದೇವರನ್ನು ನಂಬಲಾರದ ಪರಸ್ಥಿತಿ ಎಲ್ಲಾ ಔಷಧೀಯ ಗುಣವನ್ನು ಹೊಂದಿದ ಬೇವಿನ ಮರವನ್ನೇ ತಾಯಿ ಎಂದು ಬಗೆಯುವುದು, ಬೇವಿನ ಮರವನ್ನು ಪೂಜಿಸುವುದಾಗಿದೆ. ಯಾಕೆಂದರೆ ವೈಜ್ಞಾನಿಕವಾಗಿ ಬೇವಿನಲ್ಲಿ ಔಷಧೀಯ ಗುಣವಿದೆ. ಆದ್ದರಿಂದ

ಅದನ್ನು ಅಮ್ಮ ಬಂದ ಮಕ್ಕಳಿಗೆ ಬೇವಿನ ಸೊಪ್ಪಿನಿಂದ ಗಾಳಿ ಬೀಸುವುದರಿಂದ ಸ್ವಲ್ಪ ತಂಪಾಗಿ ಅಮ್ಮ ಕಡಿಮೆಯಾಗುತ್ತದೆ ಎಂಬ ಒಂದು ನಂಬಿಕೆ ಬೇವಿನ ಎಲೆಯ ಗಾಳಿಯಲ್ಲಿ ಯಾವುದೋ ರೋಗ ನಿರೋಧಕ ಶಕ್ತಿ ಇರುವುದರಿಂದ ಬೇವಿನ ಎಲೆಯಿಂದ ಗಾಳಿ ಬೀಸುವುದಾಗಿದೆ.

ಇನ್ನೊಂದು ಬೇವಿನ ಉಟಿಗೆಯನ್ನು ಹುಲಿಗೆಮ್ಮನ ಸೇವೆಯೆಂದು ತಿಳಿದು ಈ ಸೇವೆಯನ್ನು ಹೆಚ್ಚಾಗಿ ಕೆಳವರ್ಗದವರೇ ಮಾಡುತ್ತಾರೆ. ಒಂದು ರೀತಿಯಲ್ಲಿ ಕೆಳವರ್ಗದ ಜನರು ನಿರಕ್ಷರಿಗಳು, ಸ್ವಚ್ಛತೆ ಇಲ್ಲದಿರುವವರು, ಯಾಕೆಂದರೆ ಸರಿಯಾಗಿ ಸ್ನಾನಮಾಡದೆ ಹಲವಾರು ರೋಗಗಳು ಸಾಂಕ್ರಾಮಿಕ ರೋಗಗಳು ಬಂದಿರಬಹುದು. ತಮ್ಮ ರೋಗ ನಿವಾರಣೆಯಾಗದೆ ಅವರು ಮಾನಸಿಕವಾಗಿ ಅಸ್ವಸ್ಥರಾಗಿರುತ್ತಾರೆ. ಇದರಿಂದ ಬೇವಿನ ಉಟಿಗೆಯನ್ನುಟ್ಟು ಈ ಉಡುವಿಕೆಯಿಂದಾಗಿ ತಮ್ಮ ರೋಗ ನಿವಾರಣೆ ಮಾಡಿಕೊಂಡಿರಬಹುದು. ಮಾನಸಿಕ ಸ್ವಾಸ್ಥತೆಯನ್ನು ಪಡೆದುಕೊಂಡಿರಬಹುದು. ಇದಕ್ಕೆ ಬೇವನ್ನೇ ಉಪಯೋಗಿಸುವುದರಿಂದ ಹುಲಿಗೆಮ್ಮನ ಹರಕೆ ತೀರಿಸಿರುವುದರಿಂದ ನಮಗೆ ಒಳ್ಳೆಯದು ಆಯಿತು ಎಂದುಕೊಂಡು ಹುಲಿಗೆಮ್ಮನ ಆರಾಧನೆಗೆ ಹುಲಿಗೆಮ್ಮನನ್ನು ನಂಬಲು ಈ ಎಲ್ಲಾ ರೀತಿಯಿಂದಲೂ ಪ್ರೇರಣೆಗಳಾಗಿ ಒದಗಿ ಬಂದಿರಬಹುದು.

ಅಥವಾ ಹುಲಿಗೆಮ್ಮ ತನ್ನ ಕಷ್ಟದಲ್ಲಿ ಈ ಉಟಿಗೆಯನ್ನುಟ್ಟು ಕುಷ್ಟವನ್ನು ನಿವಾರಿಸಿಕೊಂಡಳು ಎಂದಾಗ ಊಹೆಯ ಪ್ರಕಾರ ಕುಷ್ಟಕ್ಕೆ ಆಧುನಿಕ ವೈದ್ಯ ಚಿಕಿತ್ಸೆ ಬರುವುದಕ್ಕೆ ಮುಂಚೆ ಈ ಬೇವಿನ ಸೊಪ್ಪನ್ನು ಹಚ್ಚಿ ರೋಗ ನಿವಾರಣೆ ಮಾಡಿಕೊಂಡಿರಲೂ ಬಹುದು ಎನ್ನುವುದನ್ನು ಒಂದು ಚಿಕ್ಕ ಊಹೆಯಾಗಿ ಕೊಡಬಹುದು.

ಒಟ್ಟಾರೆ ನಮ್ಮ ಚರ್ಮದ ರೋಗಗಳಿಗೆ ಬೇವು ಔಷಧಿಕಾರಿ ಗುಣವುಳ್ಳ ದೇವಿಯೂ ಆಗಿದೆ, ಸಸ್ಯವೂ ಆಗಿದೆ. ಒಟ್ಟಾರೆ ಬೇವಿನಲ್ಲಿ ಹಲವಾರು ಗುಣಗಳನ್ನು ಕಂಡಿರುವುದರಿಂದ ಈ ಮರವನ್ನು ಕಡಿಯಲಾಗದೆ ಉಳಿಸಿಕೊಳ್ಳುವುದಕ್ಕೋಸ್ಕರ ಹುಲಿಗೆಮ್ಮನೆಂದು ಬಗೆದು ಪೂಜಿಸಲು ಒಂದು ಪ್ರೇರಣೆಯಾಗಿರಬಹುದು.

೨. ಅರಳೀಮರವನ್ನು ಅಶ್ವಥ ನಾರಾಯಣ ಮರವನ್ನು ತಿರುಗುವುದರಿಂದ ಮಕ್ಕಳಾಗುತ್ತವೆ ಎಂಬ ನಂಬಿಕೆಯಿದೆ. ಇದರಿಂದ ಈ ಮರದಲ್ಲಿಯೂ ತಾಯಿಯನ್ನು ಕಂಡು ಹೆಂಗಳೆಯರು ಹೆಚ್ಚಾಗಿ ಈ ಮರವನ್ನು ಪೂಜಿಸುವುದು ಅದರಲ್ಲೂ ಬಂಜೆಯರು ಈ ಮರವನ್ನು ಪೂಜಿಸುವುದನ್ನು ನಾವು ಇಂದಿಗೂ ಕಂಡುಕೊಳ್ಳುವುದು ಪ್ರತೀತಿ. ನಮ್ಮ ಸಮಾಜದಲ್ಲಿ ಬಂಜೆಯರನ್ನು ಎಷ್ಟು ಕಡೆಗಣಿತರನ್ನಾಗಿ ನೋಡುತ್ತಾರೆಂದರೆ ಅವರು ಮಕ್ಕಳನ್ನು ಮುಟ್ಟಿದರೆ ಆಯುಷ್ಯ ಕಡಿಮೆಯಾಗುತ್ತದೆಂದು ಅವರನ್ನು ಯಾವುದೇ ಶುಭಕಾರ್ಯಗಳಿಗೆ ಕರೆಯಲಾರದೇ ಇರುವುದು ಇಂದಿಗೂ ನಮ್ಮ ಸಮಾಜದಲ್ಲಿ ಕಂಡುಕೊಳ್ಳುತ್ತೇವೆ. ಆದ್ದರಿಂದ ಹೆಣ್ಣುಮಕ್ಕಳು ಅಶ್ವಥ ನಾರಾಯಣ ಮರವನ್ನು ತಿರುಗಿದರೆ ಮಕ್ಕಳಾಗುತ್ತವೆ ಎಂದು ಸಾಮಾನ್ಯ ನಂಬಿಕೆಯಾದರೂ ವೈಜ್ಞಾನಿಕವಾಗಿ ಈ ಮರದಲ್ಲಿ ಸೃಷ್ಟೀಕರಣದ ಗುಣವಿದೆ. ಯಾಕೆಂದರೆ ಬೆಳಗಿನ ಜಾವ ೫ ಗಂಟೆಗೆ ಅರಳೀ ಮರವನ್ನು ಪ್ರದಕ್ಷಿಣೆ ಹಾಕುವುದರಿಂದ ಅರಳೀಮರದ ಗಾಳಿಯು ಹೆಣ್ಣಿನ ದೇಹದಲ್ಲಿ ಕೆಲವು ಹಾರ್ಮೋನುಗಳನ್ನು ಪ್ರಚೋದಿಸುತ್ತದೆ. ಇನ್ನು ಅರಳೀ ಮರಕ್ಕೆ ಯಾವಾಗಲೂ ನಾಗಪ್ಪನ ಸ್ಥಾಪನೆ ಹೆಚ್ಚಾಗಿ ಮಾಡುವುದರಿಂದ ಈ ಮರವನ್ನು ಅಶ್ವಥ ನಾರಾಯಣ ಮರ ಎಂದು ಕರೆಯಲಾಗುತ್ತದೆ. ನಾಗರಹಾವು ಒಂದು ಮಿಥುನ ಶಿಲ್ಪ, ಲೈಂಗಿಕದ ಸಂಕೇತವಾಗಿ ತೋರುತ್ತದೆ.

ನಮ್ಮ ದೇಶದಲ್ಲಿ ಮುಕ್ತವಾಗಿ ಲೈಂಗಿಕತೆಗೆ ಅವಕಾಶ ಇಲ್ಲದೇ ಇರುವ ಸಮಯದಲ್ಲಿ ಅವಳಲ್ಲಿ ಆ ಭಾವನೆಯು ಬಾರದೇ ಇರುವ ಸಮಯದಲ್ಲಿ ಈ ಮಿಥುನ ಶಿಲ್ಪವನ್ನು ನೋಡುವದರ ಮೂಲಕ ಅವಳ ಮನಸ್ಸಿನಲ್ಲಿ ಕಾಮದ ಮನೋಭಾವನೆ ಪ್ರಚೋದನೆಯಾಗಿ ತಾನು ಒಂದು ಲೈಂಗಿಕ ಸಂಪರ್ಕವನ್ನು ಹೊಂದಿ ಮಕ್ಕಳನ್ನು ಪಡೆಯುವ ಸಾಧ್ಯತೆಯಿದೆ. ಈ ಅರಳೀಮರವನ್ನು ಹೆಣ್ಣು ತಾಯ್ತನದ ಸಂಕೇತವಾಗಿ ಕಂಡುಕೊಳ್ಳುತ್ತಾಳೆ. ಅಂದರೆ ಈ ಮರವನ್ನು ತಾಯಿಯೆಂದು ಭಾವಿಸಿ ಹುಲಿಗೆಮ್ಮನ ಕ್ಷೇತ್ರದಲ್ಲಿ ಈ ಅರಳಿ ಮರದ ಕೆಳಗೆ ಮುದ್ದಮ್ಮ ತಾಯಿಯೆಂದು ಬಗೆದು ಈ ಮರವನ್ನು ಪೂಜಿಸಿ ಕಾಯಿ ಹಣ್ಣು ಮಾಡಿಸುತ್ತಾರೆ. ಈ ಮೂಲಕ ಹೆಣ್ಣು ತನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುವ ಪ್ರೇರಣೆಯನ್ನು ಈ ಮರದಿಂದ ಅಂದರೆ ದೈವಿಕ ಸಂಕೇತದ ಮೂಲಕ ಪಡೆಯುತ್ತಾಳೆ.

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ

ಬಾಡಿಗೆ ಎತ್ತು ದುಡಿದಾಂಗ

ಬಾಳೆಲೆಯ ಹಾಸುಂಡು ಬೀಸಿ ಒಗೆದಂಗೆ

ಎನ್ನುವ ಜನಪದ ಹಾಡಿನ ಚಿತ್ರಣದೊಂದಿಗೆ ಬಂಜೆಯ ಬಾಳು ಯಾವ ರೀತಿ ನಮ್ಮ ಸಮಾಜದಲ್ಲಿದೆ ಎಂಬುದು ವ್ಯಕ್ತವಾಗುತ್ತದೆ. ಆದ್ದರಿಂದ ಬಂಜೆಯಾದ ಹೆಣ್ಣುಮಕ್ಕಳು ಅರಳೀ ಮರದಲ್ಲಿ ತಾಯ್ತನದ ಅಂಶವನ್ನು ಕಂಡುಕೊಳ್ಳುವುದರ ಮೂಲಕ ಅದನ್ನು ತಾಯಿಯೆಂದು ಬಗೆದು ಪ್ರೇರಿತರಾಗಿ ಪೂಜಿಸುತ್ತಾರೆ. ಹೀಗೆ ಮರಗಳಲ್ಲಿಯೂ ಔಷಧೀಯ ಮತ್ತು ಸೃಷ್ಟಿಯ ಗುಣವಿರುವುದರಿಂದ ಅವುಗಳಿಗೆ ದೈವತ್ವದ ಕಲ್ಪನೆಯನ್ನು ಮೂಡಿಸಿ ತಲೆಬಾಗುವುದಾಗಿದೆ. ಅವುಗಳನ್ನು ಉಳಿಸಿಕೊಳ್ಳುವುದಾಗಿದೆ.

ಮಾನಸಿಕವಾದ ರೀತಿಯಿಂದಲೂ ಹುಲಿಗೆಮ್ಮ ಜನರ ಮನವನ್ನು ಗೆದ್ದು ತಾನು ಪೂಜಿತಳಾಗುತ್ತಾಳೆ.

೧. ನಿರಾಶವಾದಿ ಜೀವಿಗಳಿಗೆ ಆಶಾವಾದವನ್ನು ಮನಸ್ಸಿನಲ್ಲಿ ತುಂಬುವ ದೇವಿಯಾಗಿ ಹುಲಿಗೆಮ್ಮ ಮೆರೆಯುತ್ತಾಳೆ. ಮನುಷ್ಯನಿಗೆ ಎಷ್ಟೇ ಕಷ್ಟಬಂದರೂ ಅವರ ನಂಬಿಕೆ ಒಂದು ಅಗೋಚರ ಶಕ್ತಿಯನ್ನು ಆಧರಿಸಿ ಜೀವನವನ್ನು ಸಾಗಿಸುವುದಾಗಿದೆ. ಅದರಲ್ಲಿ ಸ್ತ್ರೀಯಾಗಲೀ ಪುರುಷರಾಗಲೀ ಮನುಷ್ಯನಿಗೆ ಕಷ್ಟಬಂದಾಗ ದೇವಿ ನಮ್ಮ ಕಷ್ಟವನ್ನು ಪಾರುಮಾಡಮ್ಮ, ನಿನಗೆ ಅಂದುಕೊಂಡಿದ್ದನ್ನು ಮಾಡುತ್ತೇವೆ ಎಂದು ದೇವಿಗೆ ನಮಸ್ಕರಿಸಿ ಜೊತೆಗೆ ಕಷ್ಟ ಪರಿಹಾರವಾಗಲು ಪ್ರಯತ್ನಗಳನ್ನು ಮಾಡಿ ಗೆದ್ದಾಗ ಅಲ್ಲಿ ಹುಲಿಗೆಮ್ಮಳ ದಯೆ ದೇವಿಯನ್ನು ನಂಬಿದ್ದಕ್ಕೆ ನಮ್ಮನ್ನು ಹುಲಿಗೆಮ್ಮ ಕಷ್ಟದಿಂದ ಪಾರುಮಾಡಿದಳು ಎಂದು ಪ್ರೇರಣೆ ಹೊಂದಿ ಸಾಕಷ್ಟು ಮಹಿಳೆಯರು ತಮ್ಮದೇ ಆದ ಸೇವೆಯನ್ನು ತಮ್ಮ ಇಚ್ಛೆಗೆ ತಮಗೆ ಅನುಕೂಲವಾಗುವ ರೀತಿಯಲ್ಲಿ ಹುಲಿಗೆಮ್ಮನನ್ನು ನಂಬಿ ಆಕೆಯ ಪ್ರೀತಿಗೆ ಪಾತ್ರರಾಗುತ್ತಾರೆ. ವಿಧವಿಧವಾದ ಪ್ರೇರಣೆಯಾಗಿ ಹುಲಿಗೆಮ್ಮ ಇಲ್ಲಿ ಸ್ಥಾನವನ್ನು ಮೆರೆದು ಜನರ ಪ್ರತಿನಿಧಿಯ ಸಂಕೇತವಾಗಿದ್ದಾಳೆ.

೩. ಭಯ ಭೀತಿಯ ಮುಖಾಂತರ ಸಮಾಜದ ಒಳ್ಳೆಯ ನಡವಳಿಕೆಗೆ ಹುಲಿಗೆಮ್ಮ ಕಾರಣವಾಗಿದ್ದಾಳೆ. ಯಾಕೆಂದರೆ ಭಯವಿಲ್ಲದ ಪರಿಸ್ಥಿತಿಯಲ್ಲಿ ಅದು ಮನೆಯಲ್ಲಾಗಲಿ ಅಥವಾ ಸಮಾಜದಲ್ಲಾಗಲೀ ಭಯವಿಲ್ಲದೆ

ಇರುವುದು ಹಾಳುಗೆಡುವ ಪರಿಸ್ಥಿತಿಯಾಗಿದೆ. ಅದರಿಂದ ಸಮಾಜದ ಸ್ವಾಸ್ಥ್ಯ ಕೆಡುತ್ತದೆ. ಇದರಿಂದ ಒಂದು ಚೌಕಟ್ಟಿಲ್ಲದೆ ಬಾಳುವಂತ ಪರಿಸ್ಥಿತಿ ಉದ್ಭವಿಸುತ್ತದೆ. ಆದ್ದರಿಂದ ಮನುಷ್ಯರಲ್ಲಿ ದೇವರೆನ್ನುವ ಕಲ್ಪನೆ ಸೃಷ್ಟಿಸಿ ಭಯಭೀತಿಯನ್ನು ಹುಟ್ಟು ಹಾಕಿ ಸಮಾಜದಲ್ಲಿ ಒಳ್ಳೆಯ ರೀತಿಯಿಂದ ಬಾಳುವೆ ಸಾಗಿಸುವುದನ್ನು ನಾವು ದೇವಿಯ ಮುಖಾಂತರ ಕಂಡುಕೊಂಡು ಆಕೆಗೆ ಮಣಿದು ಒಳ್ಳೆಯ ಕೆಲಸವನ್ನು ಮಾಡುತ್ತೇವೆ. ಒಂದು ವೇಳೆ ಒಳ್ಳೆಯ ಕೆಲಸವನ್ನು ಮಾಡದೇ ಇದ್ದಲ್ಲಿ ಹುಲಿಗೆಮ್ಮ ನಮ್ಮನ್ನು ಸುಮ್ಮನೆ ಬಿಡುವುದಿಲ್ಲ. ಆಕೆಯನ್ನು ಒಳ್ಳೆಯ ರೀತಿಯಲ್ಲಿ ನಡೆದುಕೊಂಡರೆ ನಮಗೆ ಖಂಡಿತವಾಗಿಯೂ ಒಳ್ಳೆಯದನ್ನು ಮಾಡುತ್ತಾಳೆಂಬ ನಂಬಿಕೆ ಜನರಲ್ಲಿ ಹುಟ್ಟಿ ಇದರಿಂದ ಹುಲಿಗೆಮ್ಮನ ಭಕ್ತರಾಗಲು ಒಂದು ಕಾರಣವಾಗಿರಬಹುದು. ಹೆಚ್ಚಾಗಿ ಪುರುಷರಿಗಿಂತ ಮಹಿಳೆಯರು ಹುಲಿಗೆಮ್ಮನ ಭಕ್ತರಾಗಿರುವುದನ್ನು ನಾವು ಕಾಣುತ್ತೇವೆ. ತಾಯಿಯೇ ಮಕ್ಕಳನ್ನು ಸರಿಯಾದ ದಾರಿಗೆ ಕೊಂಡೊಯ್ಯುವ ವ್ಯವಸ್ಥೆ ಹುಲಿಗೆಮ್ಮನಲ್ಲಿ ಕಾಣುತ್ತೇವೆ.

೪. ಜೋಗಪ್ಪಗಳಿಗೆ ಸಾಮಾಜಿಕ ಮಾನ್ಯತೆಯನ್ನು ಒದಗಿಸಿರುವ ದೇವತೆ ಹುಲಿಗೆಮ್ಮ ಹಿಂದೆ ಹೇಳಿದ ಹಾಗೆ ಜೋಗಪ್ಪ ಅಂದರೆ ನಮ್ಮ ಸಮಾಜದಲ್ಲಿ ಗಂಡು ಹೆಣ್ಣಾಗಿ ಪರಿವರ್ತಿತವಾಗುವುದನ್ನು ಕಂಡಿದ್ದೇವೆ ವಿನಃ ಹೆಣ್ಣು ಗಂಡಾಗಿರುವ ಸಾಧ್ಯತೆ ಕಡಿಮೆ. ಬೇರೆ ದೇಶದಲ್ಲಿ ಈ ತರಹದವರಿಗೆ ಒಂದು ಭದ್ರತೆ ಇರಬಹುದು. ಆದರೆ ನಮ್ಮ ದೇಶದಲ್ಲಿ ಈ ತರಹದವರಿಗೆ ಭದ್ರತೆ ಕಡಿಮೆ ಮತ್ತು ಸಾಮಾಜಿಕ ಮಾನ್ಯತೆಯೂ ಇರುವುದಿಲ್ಲ. ಆದ್ದರಿಂದ ಹುಲಿಗೆಮ್ಮ ಇವರನ್ನು ಈ ವೇಷ ತೊಡಿಸಿ ಭಕ್ತರನ್ನಾಗಿಸಿಕೊಂಡು ಇವರಿಗೆ ಇವರ ಜೀವನವನ್ನು ಸಾಗಿಸಲು ಪಡ್ಲಿಗಿ, ಚೌಡಿಕೆಯನ್ನು ಕೊಟ್ಟು ಹುಲಿಗೆಮ್ಮ ನೆರವಾಗಿದ್ದಾಳೆ. ಈ ಮೂಲಕ ಇವರು ಈಕೆಯ ಪ್ರೇರಣೆ ಹೊಂದಿ ತಾಯಿಯನ್ನು ಪೂಜಿಸಲು ಇದು ಒಂದು ಕಾರಣವಾಗಿರಬಹುದು.

**೬.೭ ಆರಾಧನಾ ಪಂಥಕ್ಕೆ ಒದಗಿ ಬಂದ ಪರಿವರ್ತನೆ**

ಉಗ್ರದೇವತೆಗಳೆಂದರೇನೆ ಅವರಿಗೆ ಉಗ್ರರೀತಿಯ ಆಚರಣೆಗಳಿರುತ್ತವೆ. ಹಾಗೆಯೇ ಇಲ್ಲಿ ಹುಲಿಗೆಮ್ಮನ ಆಚರಣೆಗಳನ್ನು ಕಂಡಾಗ ಎಷ್ಟೋ ಉಗ್ರ ಆಚರೆಗಳನ್ನು ಕಂಡುಕೊಂಡಿದ್ದೇವೆ. ಆದರೆ ಕಾಲಾನಂತರದಲ್ಲಿ ಆರಾಧನೆಗಳು ಪರಿವರ್ತನೆಯಾಗಿರುವುದನ್ನು ಆಧುನಿಕ ಯುಗದಲ್ಲಿ ಕಂಡುಕೊಳ್ಳುತ್ತೇವೆ.

೧. ಪ್ರಾಚೀನತೆಯಲ್ಲಿ ನಮ್ಮ ಪೂರ್ವಜರು ವೃಕ್ಷದೇವತೆಗಳಿಗೆ ಅದರಲ್ಲೂ ಔಷಧ ಗುಣವಿರುವ ವೃಕ್ಷಗಳನ್ನೇ ಪೂಜಿಸುತ್ತಿದ್ದರೂ ಕೂಡ ಇಂದು ಅವುಗಳ ಪ್ರಾಧಾನ್ಯತೆ ಕಡಿಮೆಯಾಗಿ ಹುಲಿಗೆಮ್ಮನನ್ನೇ ಪೂಜಿಸುವುದನ್ನು ಕಂಡುಕೊಳ್ಳುತ್ತೇವೆ. ಇದು ಒಂದು ರೀತಿಯಾದರೆ, ನಾಗರಿಕ ಸಂಸ್ಕೃತಿಯಲ್ಲಿ ಪ್ರಕೃತಿಯನ್ನೇ ದೇವರೆಂದು ನಂಬಿ ಬೇವಿನ ಮರವನ್ನು ಹುಲಿಗೆಮ್ಮನೆಂದು ಪೂಜಿಸುವುದು ಯಾವ ಒಂದು ಕಲ್ಲಿನಲ್ಲಿ ದೇವರನ್ನು ಕಾಣದೇ ಪ್ರಕೃತಿಯೆಂದರೂ ಹೆಣ್ಣೇ ಎಂದು ಬಗೆದು ಬೇವಿನ ಮರವನ್ನೆ ಪ್ರತಿ ಮಂಗಳವಾರ, ಶುಕ್ರವಾರದಂದು ಅರಿಶಿಣ, ಕುಂಕುಮ ಹಚ್ಚಿ ಊದುಬತ್ತಿಯನ್ನು ಬೆಳಗಿ ದೀಪ ಹಚ್ಚಿ ನಮಸ್ಕರಿಸುವುದಾಗಿದೆ.

೨. ಬೆತ್ತಲೆ ಸೇವೆಯಿಂದ ಬೇವಿನ ಕೊಂಬೆಯನ್ನಿಟ್ಟು ಮಾಡುವ ಪರಿವರ್ತನೆ

ಹುಲಿಗೆಮ್ಮನ ಸೇವೆಯಲ್ಲಿ ಒಂದಾದ ಸೇವೆ ಬೆತ್ತಲೆ ಸೇವೆ. ಈ ಬೆತ್ತಲೆ ಸೇವೆಯನ್ನು ಮಾಡುವುದರಿಂದ ಹುಲಿಗೆಮ್ಮ ನಮಗೆಲ್ಲಾ ಒಳ್ಳೆಯದು ಮಾಡುತ್ತಾಳೆಂದು ಮಾಡುವುದಾಗಿತ್ತು. ಆದರೆ ಇಂದು ಜಗತ್ತು ಬದಲಾಗಿದೆ. ಹಲವರು ಜ್ಞಾನವನ್ನು ಹೊಂದಿದ್ದಾರೆ. ಶಿಕ್ಷಣ ಪಡೆದವರಾಗಿದ್ದಾರೆ. ಈ ಬೆತ್ತಲೆ ಸೇವೆಯನ್ನು ಮಾಡದೆ ಇದರ ಪ್ರತಿರೂಪವಾಗಿ ಬೇವಿನ ಮರದ ಕೊಂಬೆಗಳನ್ನು ಒಂದು ತುಂಬಿದ ಕೊಡಕ್ಕೆ ಇಟ್ಟು ದಂಡೆಹಾಕಿ ಅರಿಶಿಣ, ಕುಂಕುಮದಿಂದ ಅಲಂಕರಿಸಿ ಪಡ್ಲಿಕಿಯನ್ನು ತುಂಬಿಸಿ ಅದನ್ನೇ ಬೆತ್ತಲೆ ಸೇವೆಯೆಂದು ಹುಲಿಗೆಮ್ಮನನ್ನು ಪೂಜಿಸುತ್ತಾರೆ. ಮತ್ತು ಬೆತ್ತಲೆ ಸೇವೆಯನ್ನು ಸರ್ಕಾರವು ನಿಷೇಧಿಸಿದ್ದರಿಂದ ಅದರ ಪ್ರತಿರೂಪವಾಗಿ ಈ ರೀತಿಯ ಆಚರಣೆಯಾಗಿ ಪರಿವರ್ತನೆಗೊಂಡಿದೆ.

೩. ಪಡ್ಲಿಗಿ ಹಿಡಿದ ಜೋಗತಿಯರು ಇಂದು ಹೊಲಗಳಲ್ಲಿ ದುಡಿದು ತಮ್ಮ ಜೀವನವನ್ನು ಮಾಡುತ್ತಿರುವುದರಿಂದ ಮನೆ ಮನೆಗೆ ಭಿಕ್ಷೆಗೆ ಹೋಗುವ ಬದಲು ಒಳ್ಳೆಯ ಮನಸ್ಸಿನಿಂದ ದೇವಿಯನ್ನು ನೆನೆದು ಪೂಜಿಸುವ ವಾಡಿಕೆಯಿದೆ. ಒಂದು ದೇವಿಯ ಹೆಸರೇಳಿ ಐದು ಮನೆಯನ್ನು ಬೇಡುವುದು ಕಂಡರೂ ಈ ಆಚರಣೆ ಇತ್ತೀಚಿಗೆ ವಿರಳವಾಗುತ್ತಿದೆ.

೪. ನರಬಲಿಯ ಬದಲು ಪ್ರಾಣಿ ಬಲಿ ಅಥವಾ ಕಾಯಿ ಹಣ್ಣು ಮಾಡಿಸುವಿಕೆಯ ರೀತಿಯಲ್ಲಿ ಹುಲಿಗೆಮ್ಮ ಪರಿವರ್ತನೆ ಹೊಂದಿದ್ದಾಳೆ. ಮೊದಲೆಲ್ಲಾ ಹುಲಿಗೆಮ್ಮ ಇದ್ದಾಳೋ ಇಲ್ಲವೋ ಎನ್ನುವ ಶಕ್ತಿಗೋಸ್ಕರ ಜಾತ್ರೆಯಲ್ಲಿ ಮನುಷ್ಯನ ಬಲಿಯನ್ನು ಕೊಡಲಾಗುತ್ತಿತ್ತು. ಅಂದರೆ ಮನುಷ್ಯನ ರುಂಡವನ್ನು ಕಡಿದು ಆ ಮೇಲೆ ಭಂಡಾರದ ಸಹಾಯದಿಂದ ಮತ್ತೆ ರುಂಡವು ಒಂದಾಗಿ ಆ ಮನುಷ್ಯ ಬದುಕುತ್ತಿದ್ದನೆಂದು ನಂಬಲಾಗಿತ್ತು. ಇದು ಎಷ್ಟು ನಿಜವೋ ಎಷ್ಟು ಸುಳ್ಳೋ ಗೊತ್ತಿಲ್ಲ. ಆದರೂ ಒಂದು ಮಾಂತ್ರಿಕತೆಯ ಶಕ್ತಿಯಾಗಿದೆ ಎನ್ನಬಹುದು. ಬರುಬರುತ್ತಾ ಮಾನವನ ಬದಲು ಪ್ರಾಣಿ ಬಲಿ ಶುರುವಾಯಿತು. ಯಾಕೆಂದರೆ ಕ್ರೂರ ಬಲಿಯಾಗಿ ಅದರ ಬದಲು ಸಾಂಕೇತಿಕವಾಗಿ ಪ್ರಾಣಿಬಲಿಯನ್ನು ಕೊಡುತ್ತಾ ಬರಲಾಯಿತು. ಈಗಲೂ ಹುಲಿಗೆಮ್ಮ ಕ್ಷೇತ್ರದಲ್ಲಿ ಮನುಷ್ಯರ ಬಲಿಯ ಸಂಕೇತವಾಗಿ ಕುರಿ ಕೋಳಿಯನ್ನು ಬಲಿಕೊಡುವ ಆಚರಣೆಯಾಗಿ ಪರಿವರ್ತನೆಯಾಗಿದೆ.

೫. ಉಗ್ರಸ್ವರೂಪಿಣಿಯಾದ ಹುಲಿಗೆಮ್ಮ ಇಂದು ಶಾಂತ ರೀತಿಯಾಗಿ ಪರಿವರ್ತನೆಯಾಗಿ ಪೂಜಿತವಾಗುತ್ತಿದ್ದಾಳೆ. ಯಾಕೆಂದರೆ ಹಿಂದೆ ಎಲ್ಲಾ ಈಕೆಯನ್ನು ಕೆಳವರ್ಗದವರು ಉಗ್ರಸ್ವರೂಪಿಣಿ ಎಂದು ಬಗೆದು ತಮ್ಮದೇ ಆದ ಆಚರಣೆಗಳೊಂದಿಗೆ ಈಕೆಗೆ ತಮ್ಮದೇ ಆದ ರೀತಿಯಲ್ಲಿ ಪೂಜಿತಗೊಳ್ಳುತ್ತಿದ್ದಳು. ಆದರೆ ಈಕೆಗೆ ಯಾವ ಅಭಿಲಾಷೆಗಳು ಕುಂಕುಮಾರ್ಚನೆಗಳು ಇರಲಿಲ್ಲವೆಂದು ಭಾವಿಸೋಣ. ಆದರೆ ಇತ್ತೀಚಿಗೆ ಶಿಷ್ಟವರ್ಗದ ನೆಲೆಯಲ್ಲಿ ಈಕೆ ಶಾಂತ ಸ್ವರೂಪಿಣಿಯಾಗಿ ಪಾರ್ವತಿಯಾಗಿ ಹಲವು ಶ್ಲೋಕಗಳಿಂದ, ಹಲವು ಅಭಿಷೇಕಗಳಿಂದ ಪೂಜಿತಗೊಳ್ಳುತ್ತಿದ್ದಾಳೆ.

ಒಟ್ಟಾರೆ ಹುಲಿಗೆಮ್ಮನ ಆರಾಧನೆಗಳು ಇಂದು ಮನುಷ್ಯರ ಅನುಕೂಲಕ್ಕೆ ತಕ್ಕಂತೆ, ಅವರ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಪರಿವರ್ತನೆ ಹೊಂದುತ್ತಿರುವುದನ್ನು ನಾವು ಕಾಣುತ್ತೇವೆ. ಬದಲಾಗಿರುವ ಆಚರಣೆಗಳಲ್ಲಿಯೇ ಮೂಲ ಆಶಯಗಳನ್ನು ಕಂಡುಕೊಂಡಿದ್ದಾರೆ. ಹಳತು ಮತ್ತು ಹೊಸತುಗಳ ಸಂಘರ್ಷಗಳ ನಡುವೆ ಮೂಲ ಬದುಕಿನ ಆಶಯಗಳೊಂದಿಗೆ ಜನಪದರ ಬದುಕಿನ ಚಲನೆ ಕೂಡ ಊರ್ಧ್ವಮುಖವಾಗಿ ಮುಂದುವರೆಯುತ್ತದೆ.

**ಹು**ಲಿಗಿ ಪ್ರದೇಶವು ಹುಲುಸಿನಿಂದ ಕೂಡಿದ್ದು ಇಲ್ಲಿ ನೆಲೆಸಿದ ಹುಲಿಗೆಮ್ಮ ಸಮೃದ್ಧ ದೇವಿಯಾಗಿದ್ದಾಳೆ. ಭಕ್ತರು ಹುಲಿಗೆಮ್ಮನನ್ನು ಅಮ್ಮಾ ಎಂದೇ ಗುರುತಿಸುತ್ತಾರೆ. ಅದರ ಮೂಲಕ ಮಕ್ಕಳಾಗುತ್ತಾರೆ. ಭಾರತೀಯ ಸಮಾಜದಲ್ಲಿ ಕಂಡುಬರುವ ತಾಯಿ ಮಗನ ಬಲಿಷ್ಠ ಸಂಬಂಧಗಳೇ ಇಲ್ಲಿ ದೈವಿಕ ಆವರಣದಲ್ಲಿ ಪುನರ್‌ಸೃಷ್ಟಿಯಾಗಿದೆ. ಇದರ ಇನ್ನೊಂದು ಮಗ್ಗುಲಲ್ಲಿ ತಂದೆ ಇಲ್ಲದಿರುವುದು ಕಂಡುಬರುತ್ತದೆ. ತಂದೆ ಇಲ್ಲದೆ ತಾಯಿಯ ರಕ್ಷಣೆಯಲ್ಲಿರುವ ದೈವಿಕ ಸಮಾಜವಿದು. ಪರೋಕ್ಷವಾಗಿ ಮಾತೃಮೂಲದ ಸಮಾಜವೊಂದರ ಅಭಿವ್ಯಕ್ತಿಯಾಗಿದೆ. ವಾಸ್ತವ ಸಮಾಜದಲ್ಲಿ ಈಗ ಪಿತೃಮೂಲ ಸಂಬಂಧಗಳು ಬಲಿಷ್ಠವಾಗಿವೆ. ಹುಲಿಗೆಮ್ಮನ ಭಕ್ತರೆಲ್ಲ ಇಂತಹ ಪಿತೃಮೂಲ ಕುಟುಂಬದ ಸದಸ್ಯರೇ ಆಗಿದ್ದಾರೆ. ಆದರೆ ಹುಲಿಗೆಮ್ಮನ ಕ್ಷೇತ್ರಮಾತ್ರ ಪಿತೃಮೂಲವನ್ನು ನಿರಾಕರಿಸಿ ಮಾತೃ ಅಧಿಕಾರವನ್ನು ಸ್ಥಾಪಿಸುವ ಪರ್ಯಾಯ ಶಕ್ತಿಕೇಂದ್ರವಾಗಿದೆ. ಈ ಅರ್ಥದಲ್ಲಿ ಇದು ಸಮಾಜದ ಸ್ವಯಂ ವೈರುಧ್ಯಗಳನ್ನು ಸಾಬೀತು ಪಡಿಸುತ್ತದೆ. ಇನ್ನೊಂದು ಕೊನೆಯಲ್ಲಿ ಅದು ಆಚರಣೆಯ ಒಳಗೆ ದೈವಮೂಲದ ಮಾತೃಪ್ರಧಾನ ಕುಟುಂಬದ ವ್ಯವಸ್ಥೆಯನ್ನು ಹೊಂದಿದೆ. ಹುಲಿಗೆಮ್ಮನನ್ನು ಅಮ್ಮನಾಗಿ ಕಂಡು ಸಂಭೋಗವನ್ನು ನಿರಾಕರಿಸುವುದು ಕುತೂಹಲಕಾರಿಯಾಗಿದೆ. ಜೋಗಪ್ಪ, ಜೋಗಮ್ಮಂದಿರಗಳು ಹುಲಿಗೆಮ್ಮನ ಮಾತೃಮೂಲ ಸಂಸ್ಕೃತಿಯನ್ನು ಪ್ರಚಾರ ಮಾಡುವ ಪ್ರಸಾರಕರಾಗಿದ್ದಾರೆ.

ಜನಪದ ದೈವಗಳ ಲಕ್ಷಣಗಳ ಹಿನ್ನೆಲೆಯಲ್ಲಿ ಹುಲಿಗೆಮ್ಮ ಎಲ್ಲಾ ದೈವಗಳಂತೆ ಸ್ವತಂತ್ರಳು. ಭಕ್ತ ಸಮೂಹದೊಂದಿಗೆ ಬೆಸೆಯುವ ದೇವತೆಯ ಸಂಬಂಧವಾಹಿನಿ ಬೆಳೆಯುತ್ತದೆಯೇ ಹೊರತು ದೇವಿಯ ಹಿಂದಿನ ತಲೆಮಾರಿನಿದಲ್ಲ. ದೇವಿಯ ತಂದೆ ತಾಯಿಯರು ಮುಖ್ಯವಾಗುವುದಿಲ್ಲ. ಆದರೆ ಅವಳ ತಂಗಿ (ಹೊಸೂರಮ್ಮ) ಅತಿಮುಖ್ಯ. ಗ್ರಾಮದ ದೈವಗಳು (ಶಿಷ್ಟ-ಜನಪದ) ಸಹೋದರರು, ಅವರ ಸಂಬಂಧ ಅಷ್ಟೇನೂ ಪ್ರಾಮುಖ್ಯತೆ ಪಡೆದಿಲ್ಲ. ಆದರೆ ಶಿಷ್ಟದೇವತೆಗಳೊಂದಿಗೆ ಜನಪದ ದೇವತೆಗಳ ಸಂಬಂಧ ಇಲ್ಲ. ಉದಾಹರಣೆಗೆ ಲಕ್ಷ್ಮೀಸರಸ್ವತಿಯರೊಂದಿಗೆ ಸಂಬಂಧವಿಲ್ಲ.

ಹುಲಿಗೆಮ್ಮ ಅವಿವಾಹಿತಳು - ಗಂಡನಿಲ್ಲ, ಸಂತಾನವಿದೆ. ಅಕ್ಕತಂಗಿಯರಿದ್ದಾರೆ. ಈ ದೇವತೆಗಳಿಗೂ ತಂದೆಯ ಅಧಿಕೃತತೆ ಇಲ್ಲ. ಈ ಪರಂಪರೆಯನ್ನು ಆರಾಧಿಸುವ ಭಕ್ತ ಸಮುದಾಯದಲ್ಲೂ ದೇವಿ-ಸಂಸ್ಕೃತಿಯ ಮೌಲ್ಯಗಳು ಪರಿಚಲನೆಗೊಂಡು ಧಾರ್ಮಿಕ ಭದ್ರತೆ ಒದಗುತ್ತದೆ. ಇದು ಜನಪದ ದೇವತೆಗಳ ಸ್ತ್ರೀ ಪ್ರತಿನಿಧೀಕರಣ. ಆದರೆ ಶಿಷ್ಟದೇವತೆಗಳಲ್ಲಿ ಇದಕ್ಕೆ ವಿರುದ್ಧ ನೆಲೆ. ಮಹಿಳೆಯು ಆಚರಣೆ ಆರಾಧನೆಗಳಿಗೆ ಅನರ್ಹಳು. ತಂದೆ, ಗಂಡ, ಮಗ ಹೀಗೆ ಯಾರಾದರೂ ಪ್ರಾತಿನಿಧ್ಯತೆಯ ಮೂಲಕ ಆಚರಣೆಯಲ್ಲಿ ಭಾಗವಾಗಬಹುದೇ ಹೊರತು ಸ್ವತಂತ್ರವಿಲ್ಲ.

ಜನಪದ ದೇವತೆಗಳು ತಮ್ಮ ಮೂಲಕ ಸಂಬಂಧಗಳನ್ನು ಸ್ಥಾಪಿಸಿಕೊಳ್ಳುತ್ತಾರೆ. ಪುರುಷ(ದೈವಗಳ)ರ ಮೂಲಕವಲ್ಲ. ಉದಾಹರಣೆಗೆ, ದೇವತೆಗೆ ಕೃಷ್ಣ, ಶಿವ, ಹನುಮಂತ ಯಾರೇ ಆದರೂ ಅವಳ ಅಣ್ಣಂದಿರು ಎಂಬ ಅಧಿಕೃತತೆ ಇದೆ. ಆದರೆ ಹನುಮಂತನ ತಂಗಿ, ಕೃಷ್ಣನ ತಂಗಿ ಎಂಬ ಗುರುತುಗಾರಿಕೆ ಇಲ್ಲ. ಹುಲಿಗೆಮ್ಮನೂ ಸಹ ಕ್ಷೇತ್ರದಲ್ಲಿರುವ ಇತರ ದೈವಗಳೊಂದಿಗೆ ಇದೇ ತೆರನಾದ ಸಂಬಂಧವನ್ನು ಹೊಂದಿದ್ದಾಳೆ. ಉದಾಹರಣೆಗೆ ಸೋಮಲಿಂಗಪ್ಪ ಹುಲಿಗೆಮ್ಮನ ಅಣ್ಣನಾಗಿದ್ದಾನೆ.

ಯಾವುದೇ ಜನಪದ ದೇವತೆಯ ಹೆಸರು ಅಮ್ಮನಿಂದ ಕೊನೆಗೊಳ್ಳುವ ಹಾಗೆ ಹುಲಿಗೆಮ್ಮನ ಹೆಸರೂ 'ಅಮ್ಮ' ಎಂದೇ ಕೊನೆಗೊಳ್ಳುತ್ತದೆ. ಇದು ಮಾತೃಪ್ರಾಧಾನ್ಯತೆ. ಶಿಷ್ಟ ಸಂಕುಲದಲ್ಲಿ ಹೀಗಿಲ್ಲ. 'ದೇವಿ'ಯಾಗಿರುತ್ತದಷ್ಟೇ. ಪುರುಷನ ಪತ್ನಿಯಾಗಿ ಮಾತ್ರ ಆದ್ಯತೆ. ಉದಾಹರಣೆಗೆ ತ್ರಿಮೂರ್ತಿಗಳ ಅಧೀನತೆಯಲ್ಲಿ ಶಕ್ತಿಯರು ಇದ್ದಾರೆ.

ಇಲ್ಲಿ ಮಾತೃಸಂವೇದನೆಯು ಅಸ್ತಿತ್ವದ ಹಂಬಲ, ಸ್ವಾತಂತ್ರ್ಯ ಸ್ಥಾಪನೆಯ ಹೋರಾಟ-ಪ್ರತಿನಿಧೀಕರಣ ಆಚರಣೆಗಳ ಸತ್ವ ಆಗಿದೆ. ಸ್ವೇಚ್ಛೆಯ ಹುಡುಗಾಟವಲ್ಲ. ಏಕೆಂದರೆ ಇಲ್ಲಿ ಕೌಟುಂಬಿಕ ಹಿನ್ನೆಲೆಯ ಪರಂಪರೆ ಇದೆ. ಪುರುಷ ಸಹಕಾರವಿದೆ. ಆದರೆ ಪುರುಷ ಪ್ರಾಧಾನ್ಯ ಅಹಂಕಾರಕ್ಕೆ ನೆಲೆ ಇಲ್ಲ.

ಗ್ರಾಮೀಣ ಪರಿಸರ, ಜನಪದ ಪರಂಪರೆ, ಕೆಳಜಾತಿ ಅಥವಾ ಬುಡಕಟ್ಟು ಸಂಸ್ಕೃತಿಯ ಭಕ್ತಸಮೂಹ ಹುಲಿಗೆಮ್ಮನ ಭಕ್ತರು. ಜೋಗ/ಜೋಗತಿ. ಇಲ್ಲಿ ಪುರುಷನಿಗಿರುವ ಭಕ್ತನಿಗೆ ಕಟ್ಟುಪಾಡುಗಳು ಭಕ್ತೆಗೆ ಇಲ್ಲ. ಅವಳ ಹೆಣ್ತನವನ್ನು ದೇವತೆ ಮರ್ಧಿಸುವುದಿಲ್ಲ - ಮರ್ಧಿಸುತ್ತಾಳೆ. ಇಲ್ಲಿ ಪುರುಷನ ವೀರ್ಯಕ್ಕೆ ಮಹತ್ವವಿಲ್ಲ. ಗರ್ಭಧಾರಣೆ ಮತ್ತು ಸಂತಾನಕ್ಕೆ ಪ್ರಾಶಸ್ತ್ಯವಿದೆ. ಭಕ್ತೆಯರ ಮಕ್ಕಳಿಗೆ ಅಪ್ಪನ ಅಧಿಕೃತತೆಯ ಹಂಗೂ ಇಲ್ಲ. ಅದನ್ನು ದೇವಿ ಹೊರುತ್ತಾಳೆ. ಗೊರವಿ ಮತ್ತು ಜೋಗತಿಯರಿಗೆ ವಿವಾಹಬಂಧನ ಮತ್ತು ಗಂಡನ ಹಿಡಿತವಿಲ್ಲ. ತಮ್ಮ ಮಕ್ಕಳಿಗೆ ಸಂಬಂಧಿಸಿದ ಸಾಮಾಜಿಕ ಹೊಣೆ ಅವರದೇ ಆಗುತ್ತದೆ. ಆದರೆ ಧಾರ್ಮಿಕ ರಕ್ಷಣೆ ಭದ್ರತೆ ಹುಲಿಗೆಮ್ಮನದಾಗಿರುತ್ತದೆ. ಭಕ್ತೆಯರಿಗೆ ವಿಧವೆತನದ ಅವಮಾನಗಳು ಇಲ್ಲ. ನಿತ್ಯ ಸುಮಂಗಲಿಯರು.

ಭಕ್ತನ ಪುರುಷತ್ವವನ್ನೇ ನಾಶಮಾಡುತ್ತಾಳೆಂದು ಸಂಕೇತಿಸುವುದರಿಂದ ಜೋಗಯ್ಯನಾದ ಮೇಲೆ ಆತನ ಸಂಭೋಗಕ್ಕೆ ಧಾರ್ಮಿಕ ನಿಷೇಧವಿರುತ್ತದೆ. ನಂತರದ ಆತನ ಸಂತತಿಗೆ ಅಧಿಕೃತತೆ ಬರುವುದಿಲ್ಲ. ಆ ಮಕ್ಕಳನ್ನು ಹುಲಿಗೆಮ್ಮನ ಮಕ್ಕಳೆಂದು ಗುರುತಿಸಲಾಗುತ್ತದೆಯೇ ಹೊರೆತು ಜೋಗಯ್ಯನ ಮಕ್ಕಳೆಂದಲ್ಲ. ಪುರುಷ ಭಕ್ತರ ವಿಷಯದಲ್ಲಿ ಸವಾಲಾಗಿ ಹುಲಿಗೆಮ್ಮನ ಹುಲಿಗೆಮ್ಮನ ನಿಯಮಗಳು ಪಾಲನೆಯಾಗಿ ಸ್ತ್ರೀ ಮೂಲದ ದರ್ಪ ಪ್ರತಿಪಾದನೆಯಾಗುತ್ತದೆ.

ಆಚರಣೆಗಳ ಆಶಯ ಅಪರಿಮಿತವಾದ ಸಂಭೋಗ ಸುಖ, ಗರ್ಭಧಾರಣೆ, ಸಂತಾನ ಪ್ರಾಪ್ತಿ ಆಗಿರುತ್ತದೆ. ಈ ಫಲವಂತಿಕೆಯಲ್ಲಿ ಸಂತತಿ ಶಾಶ್ವತವಾಗಿರಬೇಕೆಂಬ ಬಯಕೆ ಇರುತ್ತದೆ. ದಾಂಪತ್ಯ ಜೀವನದ ನಿಷ್ಠೆ ನಿಯಮಗಳು ಪುರುಷ ಅಧೀನತೆಯಂಥ ಅಂಶಗಳು ಇಲ್ಲಿ ಗೌಣ. ಆಚರಣೆಗಳ ಪರಿಕರಗಳಾದ ಅರಿಶಿಣ ಕುಂಕುಮ ಬಳೆ

ಇತ್ಯಾದಿ ಆಕರ್ಷಕ ಬಣ್ಣಗಳು ಗಮನಾರ್ಹ. ಲೈಂಗಿಕ ಕಾಯಿಲೆಗಳ ಪರಿಹಾರ ಆಚರಣೆಗಳ ಆಶಯಗಳಲ್ಲೊಂದು. ಶುಚಿತ್ವದಲ್ಲಿ ಆಚರಣೆಯನ್ನು ನೆರವೇರಿಸುವಾಗ ನಿಗದಿತ ದಿನಗಳ ಸ್ನಾನ, ನಿಗದಿತ ಆಹಾರ, ನಿದ್ರೆ ಇವೆಲ್ಲ ಕಡ್ಡಾಯವಾಗಿರುತ್ತವೆ. ಇದು ಪ್ರಾಕೃತಿಕ ಚಿಕಿತ್ಸೆಯಾಗಿರುತ್ತದೆ.

ಹುಲಿಗೆಮ್ಮನಿಗಿರುವ ನಂಬಿಕೆಯನ್ನು ಗಮನಿಸಿದಾಗ ಪುರುಷರನ್ನು ಮಹಿಳೆಯರನ್ನಾಗಿ ಮಾಡುತ್ತಾಳೆ ಎಂಬ ನೆಲೆ ಪ್ರಾತಿನಿಧೀಕರಣಕ್ಕೆ ಒತ್ತನ್ನು ನೀಡುತ್ತದೆ. ಹುಲಿಗೆಮ್ಮನ ಕಣ್ಣು ಯಾವ ಪುರುಷನ ಮೇಲೆ ಬೀಳುತ್ತದೋ ಆತ ಅವಳ ಕಿಂಕರನಾಗುತ್ತಾನೆ. ಅದುವರೆಗೆ ಆತನಲ್ಲಿದ್ದ ಅಹಂಕಾರ ಪೌರುಷಗಳನ್ನು ದೇವಿ ನಿರ್ನಾಮ ಮಾಡುತ್ತಾಳೆ. ಆ ಮೂಲಕ ಪುರುಷತ್ವ ಕಳೆದು ನಪುಂಶಕನನ್ನಾಗಿಸಿ ತನ್ನ ಆರಾಧನೆಯ ವೇಷಭೂಷಣಗಳನ್ನು ತೊಡಿಸುತ್ತಾಳೆ. ಕುಂಕುಮ, ಬಳೆ, ವಿಭೂತಿ, ಸೀರೆ, ರವಿಕೆಗಳನ್ನು ಉಡಿಸಿ ಹೆಣ್ಣಿನಂತೆ ಪರಿವರ್ತಿಸಿಕೊಳ್ಳುತ್ತಾಳೆ. ಅಂದರೆ ದೇವಿಯು ಪುರುಷನ ಅಸ್ತಿತ್ವದ ವಿರುದ್ಧ ಹೋರಾಟ ಮಾಡಿ ಹೆಣ್ಣಿನ ಬಳಗಕ್ಕೆ ಪರಿವರ್ತನೆ ಮಾಡಿಕೊಳ್ಳುತ್ತಾಳೆ. ಇದು ಸ್ತ್ರೀ ಕೇಂದ್ರಿತ ಆಳ್ವಿಕೆ ಅಥವಾ ಯಜಮಾನ್ಯ. ಇದಲ್ಲದೆ ಹುಲಿಗೆಮ್ಮನೂ ಇತರೆ ದೇವತೆಗಳಂತೆ ಮಾತೃಮೂಲದ ಭಕ್ತರನ್ನು ಆಶ್ರಯಿಸಿರುವವಳು. ದೇವಿ-ಭಕ್ತ ಸಂಬಂಧ, ಅನ್ಯೋನ್ಯ ತಾಯಿ ಮಕ್ಕಳಂತೆ. ಅವಿವಾಹಿತ ತಾಯಿ ಸಾಮಾಜಿಕವಾಗಿ ತನ್ನದೇ ಆದ ಸಾಂಸ್ಕೃತಿಕ ಮೌಲ್ಯಗಳನ್ನು ರೂಪಿಸಿಕೊಳ್ಳುವ ದಿಟ್ಟತನ ದೇವತೆಯ ಹಿನ್ನೆಲೆ ಮತ್ತು ಭಕ್ತವಲಯದ ವರ್ತಮಾನ ಭವಿಷ್ಯತ್‌ಗಳಲ್ಲಿ ಇರುತ್ತದೆ. ಬಂಧು-ಬಳಗವನ್ನು ಬಯಸುವುದು ಮಾತೃಮೂಲ ಮನಸ್ಸು. ದಾಯಾದಿತನ ಪಿತೃಪರಂಪರೆ - ಇದು ಈ ದೇವತೆಯ ಪರಿಧಿಗೆ ಬರುವುದಿಲ್ಲ. ಆಚರಣೆಗಳು, ಆಹಾರ ಪದ್ಧತಿ, ಉಡುಗೆ-ತೊಡುಗೆ, ವಾದ್ಯ ಎಲ್ಲವೂ ದೈಹಿಕ ಸುಖ, ಮಾನಸಿಕ ನೆಮ್ಮದಿ, ಸಂತಾನ ಅಭಿವೃದ್ಧಿಯ ಪೂರಕ ಅಂಶಗಳು. ಇಲ್ಲಿ ಮೈಲಿಗೆಯ ಪ್ರಶ್ನೆಯೇ ಇಲ್ಲ. ಈರುಳ್ಳಿ-ಬೆಳ್ಳುಳ್ಳಿ, ಹುಣಸೆಯ ಹುಳಿ, ಮಾಂಸಾಹಾರಗಳಿಗೆ ಆದ್ಯತೆಯಿದೆ. ಇವು ಹೆಣ್ಣಿನ ಫಲವಂತಿಕೆಗೆ ಸತ್ವ ವೃದ್ಧಿಸುವಂಥವು.

ಚೌಡಿಕೆ ವಾದ್ಯ ಸ್ತ್ರೀಯ ಜನನಾಂಗದ ಆಕಾರದಲ್ಲಿದೆ. ಅದನ್ನು ಮಿಡಿಯಿಸಿ ನುಡಿಸಿ ಹಾಡಿ ನಲಿಯುವುದು ಭಿಕ್ಷೆಬೇಡುವುದು - ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಆಚರಣೆಯಲ್ಲಿ ಬಲಿನೀಡಿದ ಪ್ರಾಣಿಯ ಮಾಂಸಕ್ಕಿಂತ ರಕ್ತವನ್ನು ದೇವರಿಗೆ ಅರ್ಪಿಸುವುದು ಮುಖ್ಯವಾಗಿರುತ್ತದೆ. ಏಕೆಂದರೆ ಹೆಣ್ಣು ಮುಟ್ಟಿನ ರೂಪದ ರಕ್ತದ ಸ್ಥಿತಿ-ಗತಿಗಳಿಗೆ ಅನುಗುಣವಾಗಿ ಫಲವಂತಿಕೆಯನ್ನು ಪ್ರತಿನಿಧಿಸುತ್ತಾಳೆ. ಮುಟ್ಟು ಆಗುವುದು ನಿಲ್ಲುವುದು ಇದ್ಯಾವುದೂ ವೈಯಕ್ತಿಕ ನೆಲೆಯಲ್ಲಿ ಮೈಲಿಗೆಯಲ್ಲ. ಅದೇ ಪ್ರಧಾನ ಹಾಗೂ ಹೆಣ್ತನದ ಭಾಗ್ಯ. ಈ ಆರಾಧನೆಯೇ ಬಲಿಯಾದ ಪ್ರಾಣಿಯ ರಕ್ತವನ್ನು ದೇವತೆಗೆ ಅರ್ಪಿಸುವುದಾಗಿರುತ್ತದೆ.

ಈ ಮೇಲಿನ ಅಂಶಗಳ ಜೊತೆಗೆ ಮಹಿಳೆಯು ಹುಲಿಗೆಮ್ಮನ ಆಚರಣೆ, ಸಂಪ್ರದಾಯ ಮುಂತಾದ ಸಂದರ್ಭಗಳಲ್ಲಿ ತನ್ನ ಪ್ರತಿನಿಧೀಕರಣವನ್ನು ಹೇಗೆ ನಡೆಸಿಕೊಂಡು ಬಂದಿದ್ದಾಳೆ ಎಂಬುದನ್ನು ಈ ಕೆಳಗಿನ ಅಂಶಗಳಿಂದ ಗಮನಿಸಬಹುದು.

ಪ್ರತಿಯೊಂದು ಆಚರಣೆಗಳಲ್ಲಿಯೂ ಮಹಿಳೆಯ ಪಾತ್ರವನ್ನು ಕಂಡುಕೊಂಡಾಗ ಹೆಣ್ಣಿಂದಲೇ ಜೀವನ, ಹೆಣ್ಣು ಜೀವನದ ರಥವನ್ನೆಳೆಯುವ ಸಾರಥಿ ಎಂತಲೂ ಕರೆಯಲೂಬಹುದು. ಯಾಕೆಂದರೆ ಪ್ರತಿಯೊಂದು ಹಂತದಲ್ಲಿಯೂ ಅಂದರೆ ಹುಟ್ಟಿನಿಂದ ಸಾವಿನ ತನಕ ಹೆಣ್ಣಿಲ್ಲದ ಪಾತ್ರ ಯಾವುದೂ ಇಲ್ಲ. ಹೆಣ್ಣು-ಗಂಡು ಇಬ್ಬರೂ ಸೇರಿದರೂ ಅತ್ಯಂತ ಹೆಚ್ಚಿನ ಪಾತ್ರಧಾರಿಯಾಗಿ ಹೆಣ್ಣು ಇಲ್ಲಿ ಪ್ರತಿನಿಧಿಸುವ ಸಂಕೇತವಾಗಿದ್ದಾಳೆ. ಗಂಡಿನ ಪಾತ್ರ ಏನಿದ್ದರೂ ಮೇಲು ನೋಟದ ಕ್ರಿಯೆಗೆ ಮಾತ್ರ ಸಲ್ಲುತ್ತದೆ. ಆತ ಏನಿದ್ದರೂ ತಂದುಕೊಡುವವನು. ಆದರೆ ಹೆಣ್ಣು ಮಾತ್ರ ತಯಾರಿ ನಡೆಸುವ ಕ್ರಿಯೆಯವಳಾಗಿರುವುದನ್ನು ನಾವು ಇಲ್ಲಿ ಕಂಡುಕೊಳ್ಳಬಹುದು.

ಮನೆಯಲ್ಲಿ ಮಗು ಹುಟ್ಟುವಾಗ ಒಂದು ಹೆಣ್ಣಿಗೆ ಸಹಾಯಕಳಾಗಿ ನಂತರ ಹುಟ್ಟಿದ ಮಗುವಿನ ಸ್ವಚ್ಛತೆಯನ್ನು ಮಾಡಿ ಮೂರು ತಿಂಗಳ ತನಕ ಮಗುವಿನ ಆರೈಕೆ ಮತ್ತು ತಾಯಿಯ ಆರೈಕೆ ಮತ್ತು ತಾಯಿಯ ಆರೈಕೆಯವಳಾಗಿ ಕೆಲಸ ನಿರ್ವಹಿಸುತ್ತಾಳೆ. ಪ್ರತಿಯೊಂದು ಬಾಣಂತಿಕೆಗೆ ಬೇಕಾದ ಆಹಾರವನ್ನು ತಯಾರು ಮಾಡುವುದು, ಮಗು ಹುಟ್ಟಿದ ನಂತರ ಮಾಸು(ರಕ್ತ)ವನ್ನು ಸ್ವಚ್ಛತೆಯಿಂದ ಒಂದು ಮಡಕೆಯಲ್ಲಿ ತುಂಬಿ ಅದನ್ನು ಬಲಭಾಗದಲ್ಲಿ ಹೂಳುವುದು ಇತ್ಯಾದಿ ಕ್ರಿಯೆಗಳೆಲ್ಲದರಲ್ಲೂ ಸ್ತ್ರೀ ಹೊಣೆಗಾರಿಕೆಯನ್ನು ಕಾಣಬಹುದಾಗಿದೆ. ದಿನೇ ದಿನೇ ಬಾಣಂತಿ ಸರಿಹೊಂದಲು ತಾಯಿಯ ಅವಶ್ಯಕತೆ ಬೇಕು ಎನ್ನುತ್ತೇವೆಯೆ ವಿನಃ ತಂದೆಯ ಪಾತ್ರ ಇರುವುದಿಲ್ಲ. ಹೆಚ್ಚಾಗಿ ಈ ಎಲ್ಲಾ ಕಾರ್ಯಗಳು ಅವಳಿಗೆ ಎಷ್ಟೇ ಕಷ್ಟವೆನಿಸಿದರೂ ಅವಳು ಅದನ್ನು ಬೆಂಬಿಡದೆ ಇನ್ನೊಬ್ಬರ ಆರೋಗ್ಯವನ್ನು ಕಾಪಾಡುವ ಮಾತೆಯಾಗಿದ್ದಾಳೆ. ಶುಶ್ರೂಷೆ ಮಾಡುವ ವೈದ್ಯಳಾಗಿದ್ದಾಳೆ.

ಇನ್ನು ಮಗಳು ದೊಡ್ಡವಳಾದಾಗ ಐದು ಜನ ಮುತ್ತೈದೆಯರು ಬೇಕೆನ್ನುತ್ತಾರೆ ವಿನಃ ಐದು ಜನ ಗಂಡಸರು ಬೇಕೆನ್ನುವುದಿಲ್ಲ. ಮಗಳು ದೊಡ್ಡವಳಾದಾಗ ತಾನು ಮಗಳಿಗೆ ಎಣ್ಣೆ, ಅರಿಶಿಣ ಹಚ್ಚಿ ಸ್ನಾನಮಾಡಿಸಿ ಬೇಕಾದ ತಿನಿಸುಗಳನ್ನು ಮಾಡಿ ತಿನಿಸುವುದರಲ್ಲಿ ತಾಯಿಯ ಪಾತ್ರ ಅಗಮ್ಯವಾದುದು. ಮುತ್ತೈದೆಯರೆಲ್ಲಾ ಸೇರಿ ಆರತಿ ಮಾಡುವುದು, ಹಾಡುಹೇಳುವುದು, ಮದುವೆಯ ಸಂದರ್ಭದಲ್ಲಿ ಮಧುಮಗನನ್ನು ಮಾಡಲು ಇಲ್ಲಿ ಹೆಣ್ಣುಮಕ್ಕಳೆ (ಹೆಂಗಸರೇ) ಇಲ್ಲಿಯ ಪಾತ್ರಧಾರಿಗಳಾಗಿರುತ್ತಾರೆ. ಮದುವೆಗೆ ಮುಂಚೆ ಅಕ್ಕಿ ಹಸನು ಮಾಡುವ, ಮದುವೆಗೆ ಬೇಕಾದ ಸಾಮಾಗ್ರಿಗಳನ್ನು ಒದಗಿಸುವ, ಮದುವೆಗೆ ಬೇಕಾದ ಆಭರಣಗಳನ್ನು ತರುವ, ಮದುವೆಗೆ ಬಂದವರನ್ನು ಸರಿಯಾದ ರೀತಿಯಲ್ಲಿ ನೋಡಿಕೊಳ್ಳುವ ಜವಾಬ್ದಾರಿಯಲ್ಲಿಯೂ ಅಂದರೆ ಗಂಡು ಇಲ್ಲಿ ತಾಳಿ ಪೋಣಿಸಿ ತಾಳಿ ಕಟ್ಟುವ ಕೆಲಸಕ್ಕೆ ಮಾತ್ರ ಸೀಮಿತವಾಗಿರುತ್ತಾನೆ. ಇದರ ಹಿಂದೆ ಮಹಿಳೆಯರು ತಾವು ಎಷ್ಟೆಲ್ಲಾ ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸಿರುತ್ತಾರೆಂಬುದು ಒಂದು ರೀತಿಯ ಮರೀಚಿಕೆಯ ಸಾಂಗತ್ಯವಾಗಿರುತ್ತದೆ ಎಂದು ಹೇಳಬಹುದು. ಗಂಡು ಮಕ್ಕಳಿಗೆ ಮುದ್ರ ಹಾಕಿಸುವ ಆಚರಣೆ ಕೆಲ ಮನೆಗಳಲ್ಲಿದೆ. ಮನೆ ದೇವಿ ಹುಲಿಗೆಮ್ಮಳಾದರೂ ಗಂಡಸರು ಮದುವೆಯ ಮುಂಚೆ ಗಂಡು ದೇವರಾದ ಹನುಮಪ್ಪನ ಗುಡಿಗೆ ಹೋಗಿ ಮುದ್ರೆ ಹಾಕಿಸಿಕೊಂಡು ಬರುತ್ತಾರೆ. ಈ ಮುದ್ರೆ ಹಾಕಿಸಿಕೊಂಡು ಬಂದ ಮೇಲೇನೆ ಅವನು ಮದುವೆಗೆ ಅರ್ಹ ಎಂದು ಹೇಳುತ್ತಾರೆ.

ಈ ಮುದ್ರೆ ಹಾಕಿಸುವಾಗಲೂ ಹುಡುಗನಿಗೆ ಅರಿಶಿಣ ಹಚ್ಚಿ, ಹೆಂಗಸರೆಲ್ಲಾ ಆರತಿ ಮಾಡಿ ಅವನ ಕೊರಳಿಗೆ ಹಾರವನ್ನು ಹಾಕಿ ಅವನಿಗೆ ಮುದ್ರೆ ಹಾಕುವತನಕ ಜೊತೆಗಿದ್ದು ಮುದ್ರೆ ಹಾಕಿದ ಮೇಲೆ ಚರ್ಮದ ಹಾರೈಕೆಗಾಗಿ ಎಣ್ಣೆ ಹಚ್ಚುವುದು, ತಪ್ಪಲನ್ನು ಅರೆದು ಹಚ್ಚುವುದು ಇದೆಲ್ಲಾ ಹೆಣ್ಣಿನ ಕಾರ್ಯವಾಗಿರುತ್ತದೆ. ಹುಟ್ಟಿದ ಮಕ್ಕಳಿಗೆ 'ಅಮ್ಮ' ಬಂದಾಗ ದೇವಿಯನ್ನು ನೆನೆಯಲು ತಮ್ಮ ಮಕ್ಕಳಿಗೆ ಒಳ್ಳೆಯದಾಗಲೆಂದು ದಿನಾಲು ದೇವಿಯ ಪಾದಕ್ಕೆ ನೀರುಹಾಕುವುದು, ದೇವರು ಮಾಡಿದಂತ ಸಂದರ್ಭದಲ್ಲಿ ಅದು ಸಸ್ಯಹಾರವೇ ಆಗಿರಲಿ ಅಥವಾ ಮಾಂಸಹಾರವೇ ಆಗಿರಲಿ ಒಂದು ಕುರಿಯನ್ನು ದೇವಿಯ ಹತ್ತಿರ ಕರೆದೊಯ್ದು ನಮಸ್ಕರಿಸಬೇಕಾದರೆ ಮೊದಲು ಕುರಿಗೆ ನೀರು ಚಿಮುಕಿಸಿ ಅದಕ್ಕೆ ಅರಿಶಿಣ, ಕುಂಕುಮ ಹಚ್ಚುವುದು ಇಲ್ಲಿ ಹೆಣ್ಣೇ ಆಗಿರುತ್ತಾಳೆ ವಿನಃ ಗಂಡಿನ ಪಾತ್ರ ಇರುವುದಿಲ್ಲ. ಆಮೇಲೆ ಕುರಿಗೆ ಚೂರಿ ಹಾಕಿ ಕುರಿಯನ್ನು ಕಡಿದಾಗ ನಂತರ ಕುರಿಗೆ ಮಸಾಲೆ ರುಬ್ಬುವುದು ಅದಕ್ಕೆ ಬೇಕಾದ ಮಸಾಲೆ ಪದಾರ್ಥಗಳನ್ನು ತಯಾರು ಮಾಡುವುದು, ಕೊಬ್ಬರಿ ತುರಿಯುವುದು, ಚರಗ ಚೆಲ್ಲಿ ಸ್ವಚ್ಛತೆಯನ್ನು ಮಾಡುವುದು, ನಂತರ ಅಡುಗೆ ತಯಾರಿಸುವುದು, ತಯಾರಿಸಿದ ಅಡುಗೆಯನ್ನು ಮತ್ತೆ ದೇವಸ್ಥಾನಕ್ಕೆ ಒಯ್ದು ನೈವೇದ್ಯ ಮಾಡಿಸಿಕೊಂಡು ಬರುವುದು, ಬಂದ ಬೀಗರುಗಳಿಗೆ ಆಹಾರ ಬಡಿಸುವುದು ನಂತರ ಊಟವಾದ ಪಾತ್ರೆಗಳನ್ನು, ಪ್ಲೇಟುಗಳನ್ನು ತೊಳೆಯುವುದು, ದೇವರು ಮಾಡಿದಾಗ ಗಂಡಸರು ಇದ್ದರೂ ಅದರ ಹಿಂದೆ ಮಹಿಳೆಯ ಪಾತ್ರವೇ ಅತ್ಯಂತ ಪ್ರಮುಖವಾದದ್ದಾಗಿರುತ್ತದೆ.

ಇನ್ನು ಪೂಜೆಯ ಸಮಯದಲ್ಲಿ ಹುಲಿಗೆಮ್ಮನ ದೇವಸ್ಥಾನದಲ್ಲಿ ಇಲ್ಲಿ ಗಂಡಸರೇ ದೇವಿಯನ್ನು ಪೂಜೆ ಮಾಡಿ ಅಲಂಕರಿಸುವುದಾದರೆ ಇದಕ್ಕೆ ಬೇಕಾದ ಸಹಾಯವನ್ನು ಇಲ್ಲಿ ಹೆಣ್ಣುಮಕ್ಕಳೇ ಒದಗಿಸುತ್ತಾರೆ. ದಿನಾಲೂ ದೇವಿಗೆ ಪ್ರಸಾದ ನೈವೇದ್ಯವಾಗಲು ಹೆಣ್ಣು ಮಕ್ಕಳು ಬ್ರಾಹ್ಮಣ ಹೆಣ್ಣುಮಕ್ಕಳೇ ಮುಂಜಾನೆ ಎದ್ದು ಮಡಿಯಿಂದಿದ್ದು ದೇವಿಗೆ ಪ್ರಸಾದವನ್ನು ತಯಾರುಮಾಡುವಂತಾದ್ದು ಇಲ್ಲಿ ಹೆಣ್ಣೇ ಆಗಿರುತ್ತಾಳೆ. ಪೂಜಾರಿಗಳು ಮಾಡಿದ ಪ್ರಸಾದವನ್ನು ತಂದು ನೈವೇದ್ಯ ಮಾಡುತ್ತಾರೆ.

ಸೇವೆಯಲ್ಲಿ ಕೆಳವರ್ಗದ ಮೇಲುವರ್ಗದ ಜಾತಿಗಳನ್ನು ಕಂಡರೂ ಇಲ್ಲಿ ಹೆಣ್ಣೇ ಸೂಚಿತವಾಗಿರುತ್ತಾಳೆ. ಕಸಹೊಡೆಯುವುದಾಗಲೀ, ದೇವರಿಗೆ ಎಣ್ಣೆ ಅಂದರೆ ದೀಪಕ್ಕೆ ಎಣ್ಣೆ ಹಾಕುವುದಾಗಲೀ, ಚೌರಿ ಬೀಸುವುದಾಗಲೀ, ದೇವಿಗೆ ಕೊಟ್ಟಂತ ಕಾಣಿಕೆಗಳನ್ನು ಜೋಡಿಸುವುದಾಗಲೀ ಈ ಎಲ್ಲ ಕಾರ್ಯಗಳಲ್ಲೂ ಮಹಿಳೆಯ ಪಾಲುದಾರಿಕೆಯನ್ನೇ ಕಾಣುತ್ತೇವೆ. ಇನ್ನು ದೇವಸ್ಥಾನದಲ್ಲಿ ಪೂಜಾರಿಗಳನ್ನು ಹುಲಿಗೆಮ್ಮ ದೇವಿಗೆ ಗಂಡುಪೂಜಾರಿಗಳನ್ನು ಕಂಡುಕೊಂಡರೂ ಇತರೆ ದೇವಸ್ಥಾನದ ಪೂಜಾರಿಗಳು ಮಾತಂಗಿ ದೇವಿಗೆ ಮುದ್ದಮ್ಮ ದೇವಿಗೆ ಹೆಣ್ಣೇ ಪೂಜಾರಿಯಾಗಿದ್ದಾಳೆ. ಪಡ್ಲಿಗಿಯ ಆಚರಣೆಯಲ್ಲಿ ಪಡ್ಲಿಗೆ ತುಂಬಿಸಲು ಬೇಕಾದ ಆಹಾರವನ್ನು ತಯಾರು ಮಾಡಿ ತಾನು ಮಡಿಯಿಂದ ಎಲ್ಲವನ್ನು ಪಡ್ಲಿಗಿಗೆ ತುಂಬುವುದು ಬೇಕಾದ ಕಾಯಿಪಲ್ಯೆಗಳನ್ನು ಅಕ್ಕಿ ಬೇಳೆಯನ್ನು ಪಡ್ಲಿಗಿಗೆ ತುಂಬಿ ನಂತರ ಜೋಗಮ್ಮಂದಿರನ್ನು ಕರೆದು ಜೋಗು ಹಾಕಿಸುವ ತನಕ ಎಲ್ಲ ಕಾರ್ಯವನ್ನು ತಾನೇ ನಿರ್ವಹಿಸುತ್ತಾಳೆ.

ಹಬ್ಬಹರಿದಿನಗಳಲ್ಲಿ ಬೆಳಿಗ್ಗೆ ಎದ್ದು ಕಸಗುಡಿಸಿ, ರಂಗೋಲಿ ಹಾಕುವುದರಿಂದ ಹಿಡಿದು ಅಡುಗೆ ಮಾಡುವ ತನಕ ಇಲ್ಲಿ ಹೆಣ್ಣೇ ಪ್ರಧಾನವಾಗಿರುತ್ತಾಳೆ. ಅಂದರೆ ಹುಟ್ಟಿನ ಸಂದರ್ಭವೇ ಆಗಲಿ ಸಾವಿನ ಸಂದರ್ಭವೇ ಆಗಲಿ ಇಲ್ಲಿಯೂ ಕೂಡ ಮನೆಯಲ್ಲಿ ಸತ್ತಂತ ಸಂದರ್ಭದಲ್ಲಿ ಮನೆಯನ್ನು ಶುಚಿಮಾಡುವುದಾಗಲೀ, ಪ್ರತಿಯೊಂದು ಕಾರ್ಯಗಳ ಬಗ್ಗೆ ಅರಿವನ್ನು ಮೂಡಿಸುವುದಾಗಲೀ ಒಟ್ಟಾರೆ ಹುಟ್ಟಿನಿಂದ ಸಾಯುವತನಕ ಪ್ರತಿಯೊಂದು ಆಚರಣೆಗಳಲ್ಲಿಯೂ ಈಕೆಯ ಪಾತ್ರ ಅತ್ಯಂತ ಹಿರಿದಾದುದಾಗಿರುತ್ತದೆ. ಮತ್ತು ಹುಲಿಗೆಮ್ಮ ಕ್ಷೇತ್ರದಲ್ಲಿ ಕೆಲವೊಂದು ಹುಣ್ಣಿಮೆಯ ಆಚರಣೆಗಳನ್ನು ಗಮನಿಸಿದಾಗಲೂ ಹೆಣ್ಣಿಗೆ ಸಂಬಂಧಿಸಿದ ಆಚರಣೆಗಳಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ರಂಡಿ ಹುಣ್ಣಿಮೆ ಮುತ್ತೈದೆ ಹುಣಿಮೆಗಳನ್ನು ಹೆಸರಿಸಬಹುದು.

ಹೆಚ್ಚಾಗಿ ಹುಲಿಗೆಮ್ಮನಿಗೆ ಸಂಬಂಧಪಟ್ಟ ಹಾಡುಗಳನ್ನು, ಕಥೆಗಳನ್ನು ಆಚರಣೆಗಳನ್ನು ನೋಡುತ್ತಾ ಹೋದರೆ ಹೆಚ್ಚಾಗಿ ಹೆಣ್ಣಿಗೆ ಸಂಬಂಧಿಸಿದ ಆಚರಣೆಗಳಾಗಿವೆಯೇ ವಿನಃ ನಾವು ಇಲ್ಲಿ ಎಲ್ಲೂ ಗಂಡಿನ ಆಚರಣೆಗಳನ್ನು ಕಾಣುವುದಿಲ್ಲ. ಹುಲಿಗೆಮ್ಮನ ಮೀಸಲು ನೀಡುವಿಕೆಯಲ್ಲಿ ಮಹಿಳೆಯ ಪಾತ್ರವನ್ನು ಕಂಡುಕೊಂಡಾಗ ಮನೆಯಲ್ಲಿ ಹೈನಾಗಲೀ ಎಂದು ಹರಕೆ ಹೊತ್ತು ಆಕಳುಗಳನ್ನು ದೇವರಿಗೆ ದೇವಿಯ ಹೆಸರಿನಲ್ಲಿ ಬಿಡುವ ಸಂಪ್ರದಾಯವಿದೆ. ಆಕಳು ಈದು ಐದು, ಹತ್ತು ಇಲ್ಲವೆ ಹದಿನೈದು ದಿನಗಳವರೆಗೆ ಹೆಣ್ಣುಮಕ್ಕಳು ಶುಚಿಯಾಗಿ ಹೈನ ಮಾಡಿ, ಬೆಣ್ಣೆ ತೆಗೆದು ಮಜ್ಜಿಗೆ ಕೂಡ ಹೊರಗಿನವರಿಗೆ ಕೊಡದೆ ತುಪ್ಪ ಕಾಸಿ ನೆಲದ ಮೇಲೆ ಇಡದೆ ನೆಲುವಿನ(ಅಂತರದ) ಮೇಲಿಟ್ಟು ದೇವರಿಗೆ ಜಾತ್ರೆಯಲ್ಲಿ ಮುಟ್ಟಿಸಿ, ದೀಪ ಹಚ್ಚುವುದಾಗಿರುತ್ತದೆ. ಅಂದರೆ ಈ ಒಂದು ಮೀಸಲು ನೀಡುವಿಕೆಯಲ್ಲೂ ಹೆಣ್ಣಿನ ಪಾತ್ರವನ್ನೇ ಕಾಣುತ್ತೇವೆ ವಿನಃ ಗಂಡಿನ ಪಾತ್ರ ಇಲ್ಲಿರುವುದಿಲ್ಲ.

ಅಡ್ಡಿಗಿಯನ್ನು ಸಿದ್ಧಪಡಿಸುವುದರಿಂದ ಹಿಡಿದು ಮನೆಯನ್ನು ಸಾರಿಸುವುದರವರೆಗೆ ಹೆಣ್ಣುಮಕ್ಕಳ ಪಾತ್ರವನ್ನೇ ನೋಡುತ್ತೇವೆ. ಎಂತಹ ಕಷ್ಟಗಳು ಬಂದಾಗ್ಯೂ ಅವುಗಳನ್ನು ಸಹಿಸಿಕೊಂಡು ಸಂಸಾರವೆಂಬ ನೌಕೆಯನ್ನು ಸಾಗಿಸುತ್ತಾರೆ. ಅದು ಒಂದು ಮನೆಯಲ್ಲಾದರೂ ಕಂಡುಕೊಳ್ಳಬಹುದು. ಅಥವಾ ಆಚರಣೆಗಳಲ್ಲಾದರೂ ಕಂಡುಕೊಳ್ಳಬಹುದು. ಇನ್ನು ಹುಲಿಗೆಮ್ಮನ ಆಚರಣೆಗಳಲ್ಲಿ ಉಟಗಿ ಉಟ್ಟು ಭಕ್ತರಾಗಿರುವವರ ಪಾತ್ರವನ್ನು ನೋಡುತ್ತಾ ಹೋದಂತೆಲ್ಲಾ ಪಡ್ಲಿಗಿ ಹಿಡಿದು ಐದು ಮನೆಗಳಿಂದ ಭಿಕ್ಷೆ ಬೇಡುವವಳು, ಸಾಮಾನ್ಯವಾಗಿ ದೀಕ್ಷೆ ತೆಗೆದುಕೊಂಡವರು, ಹುಲಿಗೆಮ್ಮನ ಜೋಗತಿಯಾಗಿರುವವರು ಸ್ತ್ರೀಯರೇ ಎಂಬುದು ಗಮನಿಸತಕ್ಕ ವಿಚಾರವಾಗಿದೆ. ಚರ್ಮಕಾರರ ಮನೆಯಲ್ಲಿ ಮಾತಂಗಿ ಕಟ್ಟೆಯ ನೀರಿನಿಂದ ಶುದ್ಧಳಾಗಿ ಮಾತಂಗಿಯನ್ನು ಪೂಜಿಸಬೇಕು.

ಜೀವನಾವರ್ತನ ಆಚರಣೆಗಳಲ್ಲಿ ಮದುವೆಯ ಸಂದರ್ಭದಲ್ಲಿ ಬೇವಿನ ಉಟಿಗೆಯನ್ನು ಉಡುವ ಮಹಿಳೆ ತಾನು ಮುತ್ತು ಕಟ್ಟಿಸಿಕೊಂಡು ಮಹಿಳೆ ಮಾತ್ರ ಬೇವಿನ ಉಟಿಗೆಯನ್ನು ಉಟ್ಟು ತನ್ನ ಆಚರಣಾತ್ಮಕ ಕ್ರಿಯೆಗಳನ್ನು ನಿರ್ವಹಿಸುವಳು. ಜೋಗತಿ ಮುತ್ತುಗಳನ್ನು ಸಾಮಾನ್ಯವಾಗಿ ಎಲ್ಲ ಭಕ್ತರು ಪುರುಷರಾಗಲಿ, ಸ್ತ್ರೀಯರಾಗಲಿ, ನಪುಂಸಕರಾಗಲೀ, ವಿಧವೆಯರಾಗಲೀ ಎಲ್ಲರೂ ಧರಿಸುವರು. ಯಾವುದೇ ತರಹದ ಮುತ್ತುಗಳನ್ನು ಧರಿಸದೆಯೇ ಎಲ್ಲಮ್ಮನ ಭಕ್ತರಾಗಲಿಕ್ಕೆ ಕೇವಲ ಭಂಡಾರ ಧರಿಸಿದರೆ ಸಾಕು.

ಈ ಉಟಗೆ ಕೆಲವರ ಮನೆಯಲ್ಲಿ ಸಾಂಪ್ರದಾಯಿಕವಾಗಿ ಪಾರಂಪರಿಕವಾಗಿ ಬಂದುದಾಗಿರುತ್ತದೆ. ಇದನ್ನು ಕೇಳಿದಾಗ ಅತ್ತೆಯು ಅಥವಾ ಅಮ್ಮ ಮುತ್ತು ಧರಿಸಿ ತಾನು ಬೇವಿನ ಉಟಗೆ ಉಡುತ್ತಿದ್ದು ಆಕೆಯ ನಂತರ ಮಗಳು ಅದನ್ನೇ ಧರಿಸಿ ಈ ಕಾರ್ಯ ಅಥವಾ ಆಚರಣೆಯನ್ನು ಮಾಡಬೇಕೆಂದಿಲ್ಲ, ಅದನ್ನು ಕೇಳಿಸಿ ನೋಡಿ ಆಕೆ ಯಾರಿಗೆ ಒಲಿಯುತ್ತಾಳೆಂದು ಕೇಳಿಸುತ್ತಾರೆ. ಒಂದು ವೇಳೇ ಆಕೆಗೆ ಒಲಿದರೆ ಮಾತ್ರ ಆ ಮುತ್ತನ್ನು ಆಕೆಯ ಕೊರಳಲ್ಲಿ ಹಾಕಿ ನಂತರ ಆಕೆ ಪರಂಪರೆಯನ್ನು ಮುಂದುವರೆಸುತ್ತಾರೆ. ಇಲ್ಲವಾದರೆ ಅದನ್ನು ದೇವರ ಜಗುಲಿಯ ಹತ್ತಿರ ಇಟ್ಟು ಪೂಜಿಸುವ ಪದ್ಧತಿ ಮಾತ್ರ ಇರುತ್ತದೆ.

ಇನ್ನು ಉಟಗಿ ಉಡದೆಯೇ ಭಕ್ತರಾಗಿರುವ ಮಹಿಳೆಯರ ಮನೆಯಲ್ಲಿ ಪಡ್ಲಿಗಿ ಇದ್ದರೆ, ಆಕೆ ಪ್ರತಿ ಮಂಗಳವಾರ ಅಥವಾ ಶುಕ್ರವಾರದಂದು ಐದು ಮನೆಗೆ ಹೋಗಿ ಹುಲಿಗೆಮ್ಮ ದೇವಿ ನಿನ್ನಾಲ್ಕು ಉಧೋ ಎಂದು ಬೇಡಿಕೊಂಡು ಬಂದು ಜೀವನ ಸಾಗಿಸುತ್ತಾರೆ. ಅಥವಾ ಕೆಲವರು ಮನೆಯಲ್ಲಿಯೇ ಪಡ್ಲಿಗಿಯನ್ನು ನಾಲ್ಕು ಉಧೋ ಹಾಕಿ ದೇವರನ್ನು ಸ್ಮರಿಸುತ್ತಾರೆ. ಭರತ ಹುಣ್ಣಿಮೆಯಲ್ಲಿ ಉಪವಾಸವಿದ್ದು ಪಡ್ಲಿಗಿಗೆ ನೈವೇದ್ಯ ಮಾಡಿದ್ದು ಉಪವಾಸದಿಂದ ಅಡುಗೆ ಮಾಡಿ ಬಾಯಲ್ಲಿ ಒಂದು ಹನಿ ನೀರೂ ಹಾಕದೇ ಗುಗ್ರಿಯನ್ನು ಬೇಯಿಸುವುದು, ಕುಚ್ಚು ಕಡುಬನ್ನು ಮಾಡುವುದು ನಂತರ ಪಡ್ಲಿಗಿಗೆ ಇವೆಲ್ಲವನ್ನೂ ತುಂಬಿ ದೇವಿಯ ಹೆಸರನ್ನು ಸ್ಮರಿಸಿ ನಂತರ ಊಟಮಾಡುತ್ತಾರೆ.

**ಪಡ್ಲಿಗಿ ಆಚರಣೆಯಲ್ಲಿ ಮಹಿಳೆಯ ಪಾತ್ರ**

ಇಲ್ಲಿ ಆಚರಣೆಯೊಂದೇ ಮುಖ್ಯವಾಗಿರುವುದಿಲ್ಲ. ಈ ಆಚರಣೆಗಳಲ್ಲಿ ಮಹಿಳೆಯ ಪಾತ್ರ ಯಾವ ರೀತಿಯಲ್ಲಿ ಇರುತ್ತೆದುಬುದು ಮುಖ್ಯವಾಗಿರುತ್ತದೆ. ಪಡ್ಲಿಗಿ ಹೇಗೆ ಬಂತು ಎನ್ನುವುದರಿಂದಲೇ ಮಹಿಳೆಯ ಪ್ರಾಧಾನ್ಯತೆಯನ್ನು ಕಾಣಬಹುದು. ಜನರ ಅಭಿಪ್ರಾಯದ ಮೇರೆಗೆ ಹರಿಗೋಲೇ ಪಡ್ಲಿಗಿ ಆಗಿರುವುದು. ಅಂದರೆ ಕತೃತ್ವದ, ಶಕ್ತಿಯ ಸಂಕೇತ ಮಹಿಳೆ - ಪಡ್ಲಿಗಿ - ಹುಲಿಗೆಮ್ಮ ಎಂದು ಹೇಳಬಹುದು.

ನದಿಯನ್ನು ದಾಟಲು ಹರಿಗೋಲನ್ನು ಸಾಧನವನ್ನಾಗಿ ಬಳಸಿಕೊಂಡಿರುವುದು ಹಾಗೆಯೇ. ಸಂಸಾರವೆಂಬ ಸಾಗರ ದಾಟಲು ಈ ಅಡ್ಲಿಕಿಯನ್ನೇ ತನ್ನ ಸಾಧನವನ್ನಾಗಿ ಮಹಿಳೆ ಇಲ್ಲಿ ಮಾಡಿಕೊಂಡಿರಲೂಬಹುದು. ತಾನು ಕಷ್ಟಪಟ್ಟು ತನ್ನ ಗಂಡನನ್ನು ಮತ್ತು ತನ್ನ ಮಕ್ಕಳನ್ನು ಸಾಕುವುದು, ಹೆಚ್ಚಾಗಿ ಕೆಳವರ್ಗದ ಜನಾಂಗದವರಲ್ಲಿ ಈ ಪಡ್ಲಿಗಿ ಇರುವಿಕೆಯನ್ನು ಕಂಡಾಗ ಕೆಳವರ್ಗದ ಜನಾಂಗದವರು ನಿರಕ್ಷರಿಗಳು, ಬಡವರು, ಅವರಿಗೆ ಯಾವುದೇ ಆರ್ಥಿಕ ಸಹಾಯವಿಲ್ಲದ ಕಾರಣ ಈ ಪಡ್ಲಿಕಿಯನ್ನು ಹಿಡಿದು ದೇವಿಯ ಹೆಸರಿನಲ್ಲಿ ಬೇಡಿ ಜೀವನವನ್ನು ಮಾಡುವುದಾಗಿದೆ. ದೇವಿಯ ನಾಮಸ್ಮರಣೆಯನ್ನು ಮಾಡುವುದರ ಜೊತೆಗೆ ದೇವಿ ಧರ್ಮ ಪ್ರಚಾರವನ್ನು ಹೊರಜಗತ್ತಿಗೂ ತಿಳಿಸಿದಂತೆ ಆಯಿತು. ಅಲ್ಲದೆ ತನ್ನೆಲ್ಲಾ ನೋವನ್ನು ಮರೆಯುವುದಾಗಿದೆ.

ಇನ್ನು ಮದುವೆಯ ಸಂದರ್ಭದಲ್ಲಿ ಅದರಲ್ಲೂ ಗಂಡುಮಕ್ಕಳ ಮದುವೆಯಲ್ಲಿ ಮಾತ್ರ ಈ ಅಡ್ಲಿಕಿ ತುಂಬಿಸುವುದಾರೂ ಇಲ್ಲಿ ಮಧುಮಗ ಬಂದು ಬರೀ ಕೈಮುಗಿಯುವ ಪಾತ್ರ ಮಾತ್ರ ಇರುತ್ತದೆ. ಆದರೆ ಇದರ

ಹಿಂದೆ ಮಹಿಳೆಯು ತಾನು ಮಡಿಯಿಂದ ಇದ್ದು ಉಪವಾಸ ವ್ರತವನ್ನು ಕೈಗೊಂಡು ಬಾಯಲ್ಲಿ ಒಂದು ತೊಟ್ಟು ನೀರು ಹಾಕಿಕೊಳ್ಳದೆ ಅಡುಗೆ ಮಾಡಿ ಪಡ್ಲಿಗಿಗೆ ಎಲ್ಲಾ ತರಹದ ಪದಾರ್ಥಗಳನ್ನು ಬಡಿಸುವ ತನಕ ಮಧುಮಗ ಮೊದಲು ತನ್ನ ತಾಯಿಗೆ ನಮಸ್ಕರಿಸುವುದರಿಂದಲೇ ಎಲ್ಲಾ ಕಾರ್ಯಗಳು ನೆರವೇರುವಂತಹದ್ದಾಗಿವೆ. ಇನ್ನು ಕೆಲವು ಕಡೆಯಲ್ಲಿ ಪಡ್ಲಿಗಿಗಳ ಆಚರಣೆಯಲ್ಲಿ ಮೊದಲು ಮಹಿಳೆಯರೂ ಭಾಗವಹಿಸಬೇಕು. ಎಲ್ಲಾ ಪೂಜೆ ನಂತರ, ಆಮೇಲೆ ಗಂಡಸರು ದೀವಟಿಗೆಯನ್ನು ಹಿಡಿದು ತಮ್ಮ ಹೆಗಲಿಗೆ ಬಡಿಸಿಕೊಂಡು ನೃತ್ಯ ಪ್ರದರ್ಶನ ಮಾಡಿ ದೇವಿಗೆ ಕೈಮುಗಿಯುವುದಾಗಿದೆ. ಇದು ಧಾರವಾಡದ ಬ್ರಾಹ್ಮಣರ ಮನೆಯಲ್ಲಿ ಪಡ್ಲಿಗಿ ತುಂಬಿಸುವಾಗ ಮಾಡುವಂತಹ ಆಚರಣೆಯಾಗಿದೆ. ಯಾವುದೇ ಕೆಟ್ಟ ಭಾವನೆಯನ್ನು ತಾಳದೆ ಹೆಣ್ಣನ್ನು ಮಾತೃಪ್ರಧಾನ ವ್ಯವಸ್ಥೆಯಲ್ಲಿ ಕಂಡುಕೊಂಡು ಅವಳಿಗೆ ಮೊದಲ ಸ್ಥಾನ ಮತ್ತು ಪೂಜ್ಯಸ್ಥಾನ ಕೊಡಲಾಗಿದೆ. ಆಚರಣೆಗಳಾಗಿ ಇಲ್ಲಿ ಹೆಣ್ಣೇ ಮುಂದೆ ನಿಂತಿರುತ್ತಾಳೆ ವಿನಃ ಗಂಡಿನ ಪಾತ್ರ ಅತಿ ಚಿಕ್ಕದಾಗಿರುತ್ತದೆ. ಇನ್ನು ಪಡ್ಲಿಗಿಯಲ್ಲಿ ಯಾಕೆ ಈರುಳ್ಳಿ, ಬದನೆಕಾಯಿ, ಹಸಿಮೆಣಸಿನಕಾಯಿ, ಮತ್ತು ಸೊಪ್ಪುಗಳನ್ನು ಇಟ್ಟು ತುಂಬಿಸುವುದೆಂದರೆ, ಹೆಚ್ಚಾಗಿ ಇಲ್ಲಿ ಅವರವರ ಆರ್ಥಿಕ ಪರಿಸ್ಥಿತಿಗನುಗುಣವಾಗಿ ನಡೆಯುವುದಾಗಿದೆ. ಯಾಕೆಂದರೆ ಕೆಳವರ್ಗದ ಜನತೆಯ ಆರ್ಥಿಕ ಪರಿಸ್ಥಿತಿಯು ಶೋಚನೀಯವಾಗಿರುವುದರಿಂದ ಅವರ ದಿನಬಳಕೆಯ ಅಗ್ಗದ ಪದಾರ್ಥಗಳನ್ನೇ ಪಡ್ಲಿಗಿಯಲ್ಲಿ ತುಂಬಿಸುತ್ತಾರೆ. ಹಾಗೂ ತರಕಾರಿ ಮತ್ತು ಸೊಪ್ಪು, ಧಾನ್ಯಗಳನ್ನು ತಾವೇ ಸ್ವತಃ ಬೆಳೆಯುವುದರಿಂದಾಗಿ ಪಡ್ಲಿಗಿಯಲ್ಲಿ ಅವನ್ನೇ ದೇವಿಯ ನೈವೇದ್ಯವಾಗಿ ಇಡಲು ಅನುಕೂಲಕರವಾದುದಾಗಿದೆ. ಅಲ್ಲದೆ ಈ ಆರಾಧನೆಯ ಕ್ರಮವು ಹೆಚ್ಚು ನಿಸರ್ಗಕ್ಕೆ ಹತ್ತಿರವಾಗಿರುವುದು ಮತ್ತು ಆದಿಮ ಕೃಷಿ ಸಂಸ್ಕೃತಿಯನ್ನು ಬಿಂಬಿಸುವುದೂ ಸಹ ಅರ್ಥಪೂರ್ಣ ಅಂಶವಾಗಿದೆ. ದೇವಿಯ ಹೆಸರಿನಲ್ಲಿ ತಮ್ಮ ಬಯಕೆಗಳನ್ನು ಈಡೇರಿಸಲು ಈ ಹಸಿ ತರಕಾರಿಗಳನ್ನಿಡುವುದರಿಂದ ದೇವಿಯು ತೃಪ್ತಳಾಗುವಳಲ್ಲದೆ ತಾವೂ ಸಂತೃಪ್ತರಾಗುತ್ತಾರೆ.

ಇನ್ನು ಹೆಣ್ಣು ತನ್ನ ಅಸಹಾಯಕ ಪರಿಸ್ಥಿತಯಲ್ಲಿ ಈ ಪಡ್ಲಿಗಿಯ ಮೂಲಕ ಬೇಡಿ ತಿನ್ನುವುದು ಒಂದು ಕಾರಣವಿರಬಹದು. ಇಲ್ಲಿ ಹೆಣ್ಣಿನಿಂದಲೇ ಜೀವನಕ್ಕೊಂದು ಪರಿಪೂರ್ಣತೆ ದಕ್ಕುತ್ತದೆಯೆಂಬ ಆಶಯವನ್ನು ಪಡ್ಲಿಗಿಯ ಆಚರಣೆಯಲ್ಲಿ ಕಂಡುಕೊಳ್ಳಬಹುದಾಗಿದೆ.

### ಉಟಗಿ ಆಚರಣೆಯಲ್ಲಿ ಮಹಿಳೆಯ ಪಾತ್ರ

ಈ ಬೆತ್ತಲೆ ಸೇವೆಯಿಂದ ಮಾತೃಪೂಜೆಯ ಮಹತ್ವವೇನು? ಇಲ್ಲಿನ ಹೆಣ್ಣುಮಕ್ಕಳ ಮಾನಸಿಕ ಸಮಸ್ಯೆಗಳು ಏನಿರಬಹುದು? ಬೆತ್ತಲೆ ಪೂಜೆಯಿಂದ ಯಾವ ಬಗೆಯ ಮಾನಸಿಕ ಚಿಕಿತ್ಸೆಯನ್ನು ಇವರು ಪಡೆಯುತ್ತಾರೆ? ತಮಗೆ ಅತ್ಯಂತ ಮಹತ್ವವಾದದ್ದನನ್ನು ದೇವತೆಗೆ ಇವರು ಸಲ್ಲಿಸುವುದಲ್ಲವೇ? ದೇವರ ಅಥವಾ ದೇವತೆಯನ್ನು ಸಂತೃಪ್ತಿಗೊಳಿಸುವುದರ ಸಲುವಾಗಿ ಕೆಲವರು ತಮ್ಮ ಕೂದಲನ್ನು ಅರ್ಪಿಸಿದರೆ ಇನ್ನು ಕೆಲವರು ತಮ್ಮ ಬೆತ್ತಲೆಯನ್ನು ಪ್ರದರ್ಶಿಸುವ ಮೂಲಕ ಸಂತೃಪ್ತಿಗೊಳಿಸಲಾಗುತ್ತದೆಯೇ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ.

ಹುಲಿಗೆಮ್ಮನ ಉಟಗೆ ಸೇವೆಯನ್ನು ಈ ಎಲ್ಲಾ ಕಥೆಗಳ ಮುಖಾಂತರ ನೋಡುತ್ತಾ ಹೋದಂತೆಲ್ಲಾ ಕೆಲವು ಕಡೆ ಹೆಣ್ಣಿನ ಶೋಷಣೆ ಇಲ್ಲಿ ಎತ್ತಿ ತೋರಿಸಿದಂತೆ ಅನ್ನಿಸಿದರೂ ಇದರ ಆಚರಣಾತ್ಮಕ ವಿವರಗಳನ್ನು ಗಮನಿಸುವುದಾದರೆ ಇದನ್ನು ಶೋಷಣೆ ಎಂದು ಕರೆಯುವ ಹಾಗಿಲ್ಲ. ಒಂದು ಕಡೆ ಅವರವರ ವೈಯಕ್ತಿಕ ಹರಕೆಗಳಿಗಾಗಿ ಈ ಸೇವೆ ಆಚರಣೆಯಲ್ಲಿರುವುದನ್ನು ಗಮನಿಸಬಹುದು. ಯಾಕೆಂದರೆ ವಕ್ತೃವೊಬ್ಬರ ವಿವರಣೆಯ ಪ್ರಕಾರ ಈ ಬೆತ್ತಲೆ ಸೇವೆಗೆ ಮದುವೆಯಾದ ಹೆಣ್ಣುಮಕ್ಕಳು ಹುಣ್ಣಿಮೆಯಲ್ಲಿ ಬೆತ್ತಲೆ ಸೇವೆ ಆಚರಿಸುವುದನ್ನು ಕಾಣಬಹುದು. ಅದರಲ್ಲೂ ಇದನ್ನು ಗೌರಿಹುಣ್ಣಿಮೆಯಲ್ಲಿ ಆಚರಿಸಲಾಗುತ್ತದೆ. ಗೌರಿ ಹುಣ್ಣಿಮೆಯೆಂದರೆ ಶಿವನ ಹೆಂಡತಿ. ಪಾರ್ವತಿಯನ್ನೆ ಗೌರಿ ಎಂದು ಮತ್ತು ಪಾರ್ವತಿಯ ಇನ್ನೊಂದು ಅವತಾರವೇ ಹುಲಿಗೆಮ್ಮನೆಂದು ಹೇಳಬಹುದು. ಈ ಬೆತ್ತಲೆ ಸೇವೆಯನ್ನು ಹೆಣ್ಣುಮಕ್ಕಳು ಮಾಡಿದರೆ ಮದುವೆಯಾಗುತ್ತದೆ ಎನ್ನುವ ಪ್ರತೀತಿ ಇದೆ. ಅಂದರೆ ಹೆಣ್ಣು ತನ್ನ ಮನೋಕಾಮನೆಯನ್ನು ಪೂರೈಸಿಕೊಳ್ಳುವುದಕ್ಕೋಸ್ಕರ ಹರಕೆಯ ರೂಪದಲ್ಲಿ ಇದನ್ನು ಆಚರಿಸುತ್ತಾಳೆ ಎಂದಂತಾಯಿತು. ಶೋಷಿತ ವರ್ಗದ ಸಮಾಜದಲ್ಲಿ ಹೆಣ್ಣು ತನ್ನ ಗಂಡನಿಂದ ಪೂರೈಸಿಕೊಳ್ಳಲಾಗದ ಸುಖವನ್ನು ಈ ಒಂದು ಬೆತ್ತಲೆ ಸೇವೆಯಿಂದ ಕಂಡುಕೊಳ್ಳುವ ಸಾಧ್ಯತೆ ಹೆಚ್ಚು. ಇಲ್ಲಿ ತನ್ನ ಎಲ್ಲಾ ಮನೋಕಾಮನೆಯನ್ನು ತನ್ನ ಆತ್ಮತೃಪ್ತಿಯಿಂದ ತಾನು ಈಡೇರಿಸಿಕೊಳ್ಳಲು ಈ ಸೇವೆಯನ್ನು ದೇವಿಯ ಹೆಸರಲ್ಲಿ ಮಾಡುವಂತಹ ಆಚರಣೆಯಾಗಿರಬಹುದಾಗಿದೆ.

ತಾನು ದೇವರನ್ನು ಆಧ್ಯಾತ್ಮಿಕ ರೀತಿಯಲ್ಲಿ ಕಂಡುಕೊಳ್ಳುವುದು ಅಂದರೆ ಇದಕ್ಕೆ ಉದಾಹರಣೆಯಾಗಿ ವಚನಕಾರ್ತಿ ಅಕ್ಕಮಹಾದೇವಿಯ ಉದಂತವನ್ನು ಗಮನಿಸಬಹುದು. ತನ್ನ ಆಧ್ಯಾತ್ಮಕ್ಕೋಸ್ಕರ ತಾನು ಎಲ್ಲವನ್ನು ತ್ಯಜಿಸಿ ದೇವರಲ್ಲಿ ಲೀನವಾಗುವುದಕ್ಕೋಸ್ಕರ ಮನಸ್ಸಿನಲ್ಲಿಯೇ ತನ್ನ ಇಚ್ಛೆಯುಳ್ಳವರಿಗೆ ಇಷ್ಟಪಟ್ಟು ತನ್ನ ದೇಹವನ್ನು ಸೇವೆಯ ರೀತಿಯಲ್ಲಿ ಸಮರ್ಪಿಸಬಹುದಾದ ಆಶಯವನ್ನು ಈ ಆಚರಣೆ ಹೊಂದಿದೆಯೆಂದು ಅರ್ಥೈಸಬಹುದಾಗಿದೆ.

ಈ ಬಗೆಯ ಆಚರಣೆಯಲ್ಲಿ ತನ್ನ ಸೌಂದರ್ಯವನ್ನು ಪ್ರದರ್ಶಿಸಿ ಈ ಮೂಲಕ ತಾನು ಇನ್ನೊಬ್ಬರನ್ನು ಒಲಿಸಿಕೊಂಡು ತನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುವ ಕಾರಣ ಇದರ ಹಿಂದಿರಬಹುದು. ಮದುವೆಯೆಂಬ ಇಷ್ಟಾರ್ಥ ಸಿದ್ಧಿಸಲು ಉಟಗೆ ಸೇವೆ ಮಾಡಬೇಕೆಂಬ ನಂಬಿಕೆ ಕೂಡ ಇದಕ್ಕೆ ಪುಷ್ಟಿ ನೀಡುತ್ತದೆ. ಇದೆಲ್ಲದರ ಜೊತೆಗೆ ಹೆಣ್ಣಿನ ಅಸಹಾಯಕತೆಯೂ ಇದರ ಹಿಂದಿರಬಹುದಾದ ಸಾಧ್ಯತೆಯಾಗಿರಲೂ ಬಹುದು. ಚಂದ್ರಗುತ್ತಿ ಎಲ್ಲಮ್ಮನಲ್ಲಿ ನಾವು ಅಂದಿನಿಂದಲೂ ಈ ದಿನದವರೆಗೂ ಈ ಬೆತ್ತಲೆ ಸೇವೆಯ ಆಚರಣೆ ಜೀವಂತವಾಗಿರುವುದನ್ನು ನೋಡಬಹುದಾಗಿದೆ. ಸರಕಾರ ಬೆತ್ತಲೆ ಸೇವೆಯನ್ನು ನಿಷೇಧಿಸಿದ್ದರೂ ಸಹ ಜನರು ಮಾತ್ರ ಈ ಸೇವೆಯನ್ನು ಇಂದಿಗೂ ಕದ್ದು ಮುಚ್ಚಿ ನಡೆಸುತ್ತಿರುವ ಪ್ರಸಂಗವನ್ನು ನಾವು ಕಾಣುತ್ತೇವೆ.

ಇನ್ನು ದೇವನೂರು ಮಹಾದೇವ ಅವರ ಹೇಳಿಕೆಯಂತೆ ಬೆತ್ತಲೆ ಪೂಜೆಯನ್ನು ನೋಡುವವರು ಅವರು ಬೆತ್ತಲೆಯೇ ವಿನಃ ಇನ್ನೇನು ಅಲ್ಲ, ಅದನ್ನು ಚಿತ್ರಕಾರನಿಗೆ ಹೋಲಿಸಿದರೆ ಸೌಂದರ್ಯವರ್ಧಕ ರೀತಿಯಲ್ಲಿ

ವರ್ಣನೆ ಮಾಡುತ್ತಾನೆ. ಅದೇ ಒಬ್ಬನಿಗೆ ಕಾಮುಕ ದೃಷ್ಟಿಯಾಗಿ ಪರಿಣಮಿಸಬಹುದು ಎನ್ನುವ ರೀತಿಯಲ್ಲಿ ಪ್ರಸ್ತಾಪಿಸುತ್ತಾರೆ.

ಇಂದಿಗೂ ನಾವು ಆಚರಣೆಯಲ್ಲಿ ಕಾಣುವ ಬೆತ್ತಲೆ ಸೇವೆಯಲ್ಲಿ ಬರೀ ಹೆಣ್ಣಿನ ಪಾತ್ರವೇ ಇಲ್ಲಿ ಹೆಚ್ಚಾಗಿ ಕಂಡುಬರುವುದರಿಂದ ಇಲ್ಲಿ ಹೆಣ್ಣನ್ನು ದೇವರ ಸ್ಥಾನದಲ್ಲಿ ಕಾಣುತ್ತೇವೆ. ಮತ್ತು ಅಂದು ಅಂದರೆ ಆಚರಣಾತ್ಮಕ ಸದಂರ್ಭದಲ್ಲಿ ಅವಳ ಸ್ಥಾನ ಅತ್ಯಂತ ಎತ್ತರದಲ್ಲಿ ಕೊಂಡೊಯ್ಯುತ್ತದೆ. ಈ ಒಂದು ಬೆತ್ತಲೆ ಸೇವೆಯ ಹಿಂದಿರಬಹುದಾದ ಆಶಯಗಳನ್ನು ಸಾಮಾನ್ಯವಾಗಿ ಮೇಲು ನೋಟದ ಆಚರಣೆಯಲ್ಲಿ ಕಂಡುಬರದಿದ್ದಾಗ್ಯೂ ಜನಪದರು ವಿವರಿಸುವ ಅದರ ಹಿಂದಿನ ಆಶಯಗಳನ್ನು ವಿಶ್ಲೇಷಿಸಿದಾಗಲಷ್ಟೇ ಅದರ ಹಿಂದಿನ ನಿಜ ಕಂಡುಬರುತ್ತದೆ. ಪ್ರಮುಖವಾಗಿ ಹೆಣ್ಣೇ ಈ ಆಚರಣೆಯಲ್ಲಿ ಪಾಲ್ಗೊಳ್ಳುವುದರಿಂದ ಅವಳ ಪ್ರತಿನಿಧೀಕತ್ವದ ಸಂಕೇತವಾಗಷ್ಟೇ ಅಲ್ಲ ಅವಳು ಶ್ರೇಷ್ಠಳು, ಪೂಜ್ಯಳು, ಅರ್ಹಳು, ದಯಾಮಯಿ, ಕರುಣಾಮಯಿ ಎನ್ನುವ ರೀತಿಯಲ್ಲಿ ಭಾವಿಸಲಾಗುತ್ತದೆಯೆಂಬುದಾಗಿ ಜನಪದ ವಕ್ತೃಗಳು ತಿಳಿಸುತ್ತಾರೆ.

ಉಟಿಗೆ ಸೇವೆಯು ಅದರಲ್ಲೂ ಕೆಳವರ್ಗದವರಲ್ಲಿ ಮತ್ತು ಹಿಂದುಳಿದ ವರ್ಗದವರಲ್ಲಿ ಕಂಡುಕೊಂಡಾಗ ಇದು ಇವರ ಅನಾಗರಿಕ ಮತ್ತು ಅನಕ್ಷರಸ್ಥ ಬದುಕನ್ನು ತೋರಿಸುತ್ತದೆ. ಯಾಕೆಂದರೆ ಇವರಿಗೆ ಶಿಕ್ಷಣ ಕಡಿಮೆ ಇದ್ದು ಮೌಢ್ಯತೆಗೆ ಹೊಂದಿಕೊಂಡು ಇಂತಹ ಆಚರಣೆಯನ್ನು ಆಚರಿಸುತ್ತಾರೆನ್ನಬಹುದು. ಒಂದು ಕಾರಣ ನಾಗರಿಕ ಜಗತ್ತಿನ ಇಂದಿನ ವಿದ್ಯಾವಂತ ಮಹಿಳೆಯರನ್ನು ಕಂಡಾಗ ಯಾವುದೇ ಅಗೋಚರ ಶಕ್ತಿಗೆ ಮಣಿದು ಎಷ್ಟೇ ವಿದ್ಯಾವಂತರಾದರೂ ಉಟಿಗೆ ಸೇವೆಯನ್ನು ಭಕ್ತಿಪೂರ್ವಕವಾಗಿ ಕಾಣುವ ಸಂಗತಿ ವಾಸ್ತವದಲ್ಲಿದೆ.

ಎಲ್ಲಮ್ಮಳು ಜಮದಗ್ನಿ ಕೊಟ್ಟ ಶಾಪಕ್ಕೆ ಕುಷ್ಟ ಬಂದು ಊರೂರು ಅಲೆಯುತ್ತಿದ್ದಾಗ ಬಟ್ಟೆಯೆಲ್ಲಾ ಹರಿದು ಬೇವಿನ ಮರದ ಸೊಪ್ಪನ್ನು ಹೊದಿಕೆಯಾಗಿ ಮಾಡಿಕೊಂಡಳು. ಅಂದಿನಿಂದ ಈ ಸೇವೆ ಬಂದಿತು ಎನ್ನುವಾಗ ಬೇವಿನ ಸೊಪ್ಪಿನಲ್ಲಿ ರೋಗ ನಿರೋಧಕ ಶಕ್ತಿ ಇದೆ, ಬೇವಿನ ಸೊಪ್ಪಿನಿಂದ ಹಲವಾರು ರೋಗಗಳು ಪರಿಹಾರವಾಗುವುದರ ಜೊತೆಗೆ ಎಕ್ಕಯ್ಯ, ಜೋಗಯ್ಯ ಚಿಮುಕಿಸಿದ ನೀರಿನಿಂದ ಕುಷ್ಟ ಪರಿಹಾರವಾಯಿತು ಎಂಬ ಸಂಗತಿಗಳು ಆಯುರ್ವೇದದ ಚಿಕಿತ್ಸಾ ಕ್ರಮಗಳನ್ನು ಸೂಚಿಸುವುದಾಗಿದೆ. ಹಾಗೆಯೇ ಹಿಂದುಳಿದ ದಲಿತ ಜನಾಂಗದವರು ಸರಿಯಾಗಿ ಸ್ನಾನ ಮಾಡದೇ ವಾರಕ್ಕೊಮ್ಮೆ ಮಾಡಿ ಅವರಿಗೆ ಹಲವಾರು ರೋಗರುಜಿನಗಳು ಬಂದಿರಬಹುದು. ಆ ಒಂದು ಪರಿಹಾರಕ್ಕೋಸ್ಕರ ಬೇವಿನ ಉಟಿಗೆಯನ್ನು ಉಡುವುದು ಅದರಲ್ಲೂ ದೇವಿಯ ಹೆಸರೇಳಿಕೊಂಡು ಮತ್ತು ಮಾನಸಿಕವಾಗಿ ತೊಂದರೆಗಳಿಂದ ಪಾರಾಗುವುದು ಈ ರೀತಿಯಾಗಿ ನಾವು ಕಂಡುಕೊಳ್ಳಬಹುದು.

ಮತ್ತು ಈ ಸೇವೆಯನ್ನು ಮದುವೆಯ ಸಂದರ್ಭದಲ್ಲಿಯೇ ಸೂಚಿಸುವಂತಹದ್ದಾಗಿದೆ ಎಂಬುದು ಗಮನಾರ್ಹ. ಯಾತಕ್ಕೆಂದರೆ ಮದುವೆಯೆಂದರೇನೆ ಶುಭಕಾರ್ಯವನ್ನು ಸೂಚಿಸುವ ಸಂಕೇತವು ಹೌದು ಮಡಿವಂತಿಕೆಯ ಕಾರ್ಯವು ಹೌದು. ಹಾಗಾಗಿ ಜನಪದರ ಪ್ರಕಾರ ಈ ಸೇವೆಯೊಂದು ಭಕ್ತಿ, ಶ್ರದ್ಧೆಗಳ ಪವಿತ್ರ ಕ್ರಿಯೆಯಾಗಿದೆ. ಈ ಸೇವೆಯ ಸಂದರ್ಭದಲ್ಲಿ ಮನೆಯೆಲ್ಲಾ ಶುಭ್ರಗೊಳಿಸಿರುತ್ತಾರೆ. ಒಂದು ಒಳ್ಳೆಯ ದಿನವಾದರೆ

ಅದಕ್ಕೆ ಅದರದೇ ಆದ ಕಾಲ, ಮಿತಿಗಳನ್ನು ಕಂಡುಕೊಳ್ಳಬಹುದೆಂದು ಇದನ್ನು ಹೆಚ್ಚಾಗಿ ಮದುವೆಯ ಸಂದರ್ಭದಲ್ಲಿ ಇಟ್ಟುಕೊಳ್ಳುವ ಆಚರಣೆ ಎಂತಲೂ ಹೇಳಬಹುದು. ಒಂದು ಹೆಣ್ಣು ತನ್ನ ಮನೆಯ ಒಳಿತಿಗೋಸ್ಕರ ಯಾವ ತ್ಯಾಗಕ್ಕೂ ಸಿದ್ಧ. ತನ್ನ ಮಕ್ಕಳ ಕ್ಷೇಮಕ್ಕೋಸ್ಕರ, ರಕ್ಷಣೆಗೋಸ್ಕರವೆಂದು ಧಾರ್ಮಿಕ ನಂಬಿಕೆಯಿಂದ ಈ ಸೇವೆಯನ್ನು ಕೈಗೊಳ್ಳುವ ಸಾಧ್ಯತೆಯೂ ಇಲ್ಲದಿಲ್ಲ. ತನ್ನ ಗಂಡನಿಂದ ಅವಳು ಎಷ್ಟೇ ಶೋಷಣೆಗೊಳಪಟ್ಟಿದ್ದರೂ ಆಚರಣೆಗಳ ಸಂದರ್ಭದಲ್ಲಿ ಅವಳು ಏನನ್ನು ಲೆಕ್ಕಿಸದೆ ಪ್ರತಿಯೊಬ್ಬರ ಒಳಿತಿಗಾಗಿ ತಾನು ಇಂತಹ ಒಂದು ಆಚರಣೆಯಲ್ಲಿ ಯಾವ ಸಂಕೋಚವೂ ಇಲ್ಲದೆ ಪಾಲ್ಗೊಳ್ಳುವ ಸಾಧ್ಯತೆಯೂ ಇದೆ.

ಈ ಆಚರಣೆಯ ಸಂದರ್ಭದಂದು ಅವಳು ಉಪವಾಸ ವ್ರತವನ್ನು ಕೈಗೊಂಡು ಪರಿಶುದ್ಧ ಮನಸ್ಸಿನಿಂದ ಶಾಂತ ರೀತಿಯಿಂದ ಇದ್ದು ಸಹನಾಮಯಿಯಾಗಿ, ಮಾತೃರೂಪಿಣಿಯಾಗಿ ದೇವಿಯನ್ನು ಆಹ್ವಾನೆ ಮಾಡಿಕೊಂಡು ಎಲ್ಲರಿಗೂ ಬೆಳಗುವ ಜ್ಯೋತಿಯಂತೆ ತನ್ನತನವನ್ನು ತೋರುತ್ತಾಳೆ. ಇವಳ ಕೈಯಲ್ಲಿ ಹಿಡಿದ ನಂಬಿಕೆಯೆನ್ನು ಜ್ಯೋತಿ ಎಲ್ಲರ ಮನೆಯನ್ನು ಬೆಳಗುವ ಶ್ರದ್ಧೆಯ ನಂದಾದೀಪ ಎಂದು ಹೇಳಬಹುದಾಗಿದೆ. ಗಂಡಸರು ಮಾಡಲಾಗದ ಕಾರ್ಯವನ್ನು ಒಂದು ಹೆಣ್ಣು ಇಲ್ಲಿ ಮಾಡಿ ತೋರಿಸುತ್ತಾಳೆ. ಸರ್ವ ತ್ಯಾಗಕ್ಕೂ ಹೆಣ್ಣೇ ಕಾರಣಳಾದ್ದರಿಂದ ಇವಳನ್ನು ಶಕ್ತಿಸ್ವರೂಪಿಣಿ ಎಂದು ಈ ಆಚರಣೆಯ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ.

ಇನ್ನು ಉಟಗಿ ಸೇವೆಯಲ್ಲಿ ಚಂದ್ರಗುತ್ತಿ ಎಲ್ಲಮ್ಮನ ಹತ್ತಿರ ಒಂದು ದೇವಸ್ಥಾನದ ಬಳಿಯ ಐತಿಹ್ಯವನ್ನು ಈ ಸಂದರ್ಭದಲ್ಲಿ ಹೇಳಲಾಗುತ್ತಿದೆ. ತಾಯಿ ರೇಣುಕೆಯನ್ನು ಕೊಲ್ಲಲೆಂದು ಪರಶುರಾಮ ಬೆನ್ನಟ್ಟಿಕೊಂಡು ಓಡುವಾಗ ಅವಳೂ ಓಡೋಡುತ್ತಾ ತನ್ನೆಲ್ಲಾ ಬಟ್ಟೆಗಳನ್ನು ಕಳೆದುಕೊಂಡು ಶಿವನಗುಡಿಯಲ್ಲಿ ಬೆತ್ತಲೆಯಾಗಿ ಮುದುಡಿ ಕೂತಿರುತ್ತಾಳೆ. ಈಗಲೂ ಚಂದ್ರಗುತ್ತಿಯಲ್ಲಿ ಗುಹೆಯೊಂದು ಇದೆ. ಇದರ ಕೆಳಗೊಂದು ಬಂಡೆ ಇದೆ. ಈ ಬಂಡೆ ಮುಚ್ಚಿ ಕೂತ ರೇಣುಕಾಳ ನಿತುಂಬದಂತೆ ಕಾಣುತ್ತದೆ. ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ಕಥನವೂ ಇದೆ. ಇದು ರೇಣುಕೆಗೂ ಅವಳ ಸೇವಕಿ ಮಾತಂಗಿಗೂ ಇರುವ ಸಂಬಂಧವನ್ನು ಕುರಿತದ್ದು. ಪರಶುರಾಮನು ಕ್ಷತ್ರಿಯ ಸಂಹಾರಕ್ಕೆ ಹೊರಡುವ ಮುಂಚೆ ತನ್ನ ತಾಯಿಯನ್ನು ಮಾತಂಗಿಯ ಮಗ ಬೀರಪ್ಪನ ಆಶ್ರಯದಲ್ಲಿ ಬಿಡುತ್ತಾನೆ. ಆದರೆ ಬೀರಪ್ಪ ಒಬ್ಬ ಕಾಮುಕ ರಾಕ್ಷಸನಾಗಿ ಬಿಡುತ್ತಾನೆ. ಅವನ ತಾಯಿ ಮಾತಂಗಿ ಕರುಣೆಯಿಂದ ವಸ್ತ್ರಾಪಹರಣಗೊಂಡ ಎಲ್ಲ ಸ್ತ್ರೀಯರಿಗೂ ಬಟ್ಟೆಯನ್ನು ಕೊಡುತ್ತಾಳೆ. ಇವತ್ತಿಗೂ ಮಾತಂಗಿಯ ದೇವಾಲಯಕ್ಕೆ ಬರುವ ಹಿನ್ನೆಲೆ ಹೆಂಗಸರಿಗೆ ಹೊಸ ಬಟ್ಟೆಗಳನ್ನು ಕೊಡಲಾಗುತ್ತದೆ. ಈ ಹಿನ್ನೆಲೆಯಲ್ಲಿ ಇಂದಿಗೂ ಉಟಗಿ ಉಟ್ಟು ನಂತರ ಕೊನೆಯಲ್ಲಿ ಬೀಗರು ಹೊಸಬಟ್ಟೆಯನ್ನು ತಂದು ಅವರಿಗೆ ಅದನ್ನು ಉಡಿಸಿ ನಂತರ ಆರತಿ ಬೆಳಗಿ ಮುಯ್ಯಿ ಮಾಡಿ ಇಳೆಯನ್ನು ತೆಗೆದು ಹಾಕಲಾಗುತ್ತದೆ.

ಇತ್ತೀಚಿನ ಆಧುನಿಕ ಜೀವನದಲ್ಲಿ ಈ ಉಟಗಿ ಸೇವೆಯನ್ನು ನೋಡಲಾಗುತ್ತಿಲ್ಲ. ಜನಪದರು ಹೇಳುವ ಪ್ರಕಾರ ಈ ಉಟಗೆ ಮಾಡುವುದೆಂದರೆ ಸುಲಭದ ಮಾತಲ್ಲ. ಅದನ್ನು ಮಾಡಲು ತುಂಬಾ ಶಕ್ತಿ ಇರಬೇಕು. ಮತ್ತು ಧೈರ್ಯವಿರಬೇಕು. ಕೆಲವರು ಹೆದರುತ್ತಾರೆ. ಆದ್ದರಿಂದ ಬೇವಿನ ಮರದ ಕೋಲೆಯನ್ನು ಮಣೆಯ ಮೇಲಿಟ್ಟು ಅಥವಾ ಕಂಬಳಿಯ ಮೇಲಿಟ್ಟು ಪೂಜೆ ಮಾಡಿ ಇದನ್ನೇ ಸಾಂಕೇತಿಕವಾಗಿ ಉಟಗಿ ಸೇವೆ ಎಂದು

ಹೇಳುವ ಪರಿಪಾಟವಿದೆ. ಯಾಕೆಂದರೆ ಅಜ್ಞಾನ ಕಳೆದು ಜ್ಞಾನ ಪ್ರವೃತ್ತಿಯಾಗಿದೆ. ಅಶಿಕ್ಷಿತರೆಲ್ಲಾ ಶಿಕ್ಷಿತರಾಗಿದ್ದಾರೆ. ಈ ಸೇವೆಯನ್ನು ಮಾಡಲು ಒಪ್ಪುವುದಿಲ್ಲ. ಇದನ್ನು ಮೌಢ್ಯವೆಂದು ಬಗೆದು ಒಂದು ಅಗೋಚರ ಶಕ್ತಿಯನ್ನಾಗಿ ಮಾತ್ರ ನಂಬಿ ಬೇವಿನ ಮರದ ಸೊಪ್ಪನ್ನಿಟ್ಟು ಉಟಗಿ ಎಂದು ಪೂಜಿಸುವ ಪದ್ಧತಿ ಮುಂದುವರೆದಿದೆ.

ಹೆಣ್ಣು ದೇವತೆಯೇ ಪ್ರಧಾನವಾಗಿ ಆರಾಧನೆಗೊಳ್ಳುವ ಹುಲಿಗೆಮ್ಮನಿಗೂ ಮಾತೃಪ್ರಧಾನವಾಗಿರುವ ಕುಟುಂಬ ವ್ಯವಸ್ಥೆಗೂ ಸಂಬಂಧವನ್ನು ನಾವು ಇಲ್ಲಿ ಕಾಣಬಹುದಾಗಿದೆ. ಹುಲಿಗೆಮ್ಮ ಪಂಥದ ಆಚರಣಾತ್ಮಕ ಸ್ವರೂಪಗಳು ಮಾತೃಮೂಲೀಯ ಅಂಶಗಳನ್ನು ಸ್ಪಷ್ಟೀಕರಿಸಿದರೂ ವಾಸ್ತವದಲ್ಲಿ ಪುರುಷಾಧಿಕ್ಯವೇ ಕಂಡುಬರುತ್ತದೆ. ಪಿತೃತ್ವ ಸಮಾಜಕ್ಕೆ ಮಾದರಿಯಾಗಿ ಜಮದಗ್ನಿಯನ್ನು ಕಂಡುಕೊಂಡಾಗ ಹುಲಿಗೆಮ್ಮನ ಪಂಥದ ಜಾತ್ರೆ, ಉತ್ಸವ, ಧಾರ್ಮಿಕ ಕ್ರಿಯಾವಿಧಿಗಳಲ್ಲಿ ಮಹಿಳೆಯ ಪ್ರಾಧಾನ್ಯತೆಯನ್ನು ಹೆಚ್ಚಾಗಿ ಕಾಣುತ್ತೇವೆ. ಇನ್ನು ಹುಲಿಗೆಮ್ಮ ಭಕ್ತರ ಆಚರಣೆಗಳಲ್ಲಿ ಪಾಲ್ಗೊಳ್ಳುವಿಕೆಯಲ್ಲಿ ಸಂಸಾರಿಗಳಾದ ಜೋಗತಿಯರು ವರ್ಷಕ್ಕೊಮ್ಮೆ ಜಾತ್ರೆಗೆ ಬರಲೇಬೇಕು. ಧಾರ್ಮಿಕ ವಿಧಿಗಳಲ್ಲಿ ಇವರ ಪಾತ್ರ ಗಮನಾರ್ಹವಾದುದು. ಇವರು ಕೊರಳಿಗೆ ಮುತ್ತು ಧರಿಸಿರುತ್ತಾರೆ. ಹುಲಿಗೆಮ್ಮನು ಕನಸಲ್ಲಿ ಬಂದು ನೀಡಿದ ಆದೇಶದ ಪ್ರಕಾರ ನಾವು ಇಂಥ ಮುತ್ತು ಧರಿಸಿದ್ದೇವೆ, ಇಂಥ ಬಟ್ಟೆ ತೊಟ್ಟಿದ್ದೇವೆ ಎಂದು ಜೋಗವ್ವಂದಿರು ಮತ್ತು ಜೋಗಪ್ಪಂದಿರು ಹೇಳುತ್ತಾರೆ. ಮತ್ತು ಅದರಲ್ಲಿಯೂ ದೇವಸ್ಥಾನದ ಧಾರ್ಮಿಕ ವಿಧಿಗಳನ್ನು ನಿರ್ವಹಿಸುವಲ್ಲಿ ಉದಾಹರಣೆಗೆ, ಆರತಿ ತಟ್ಟೆಗಳಿಗೆ ಎಣ್ಣೆಹಾಕುವ, ಗುಡಿ ಸ್ವಚ್ಛಮಾಡುವ ಕೆಲಸವನ್ನು ಮಾಡುತ್ತಾರೆ.

ಪ್ರಕೃತಿಯ ಮತ್ತು ಬದುಕಿನ ಸಮೃದ್ಧಿಯ ಸಂಕೇತವಾದ ಗುಗ್ರಿ ಮುಟಗಿ ಆಚರಣೆಯಲ್ಲಿ ಸ್ತ್ರೀಯೇ ಪ್ರಧಾನ ಪಾತ್ರ ನಿರ್ವಹಿಸುವುದು ಅರ್ಥಪೂರ್ಣವಾಗಿದೆ. ಸ್ತ್ರೀಯನ್ನು ಫಲವಂತಿಕೆಯ ದೃಷ್ಟಿಯಿಂದ ಪ್ರಕೃತಿಗೆ ಹೋಲಿಸಲಾಗಿದೆ. ಈ ಆಚರಣೆಯಲ್ಲಿಯೂ ಸಹ ಸ್ತ್ರೀ ಪ್ರಧಾನ ಪಾತ್ರವಹಿಸುತ್ತಾಳೆ. ಈ ಆಚರಣೆಯನ್ನು ಮಾಡುವ ಸಂದರ್ಭದಲ್ಲಿ ಬೆಳಿಗ್ಗೆ ನದಿಯಲ್ಲಿ ಸ್ನಾನಮಾಡಿ ಗಂಗಮ್ಮನ ಪೂಜೆ ಮಾಡಿ ಅಲ್ಲಿಂದ ಮಣ್ಣಿನ ಪಡುಗಕ್ಕೆ ಭಂಡಾರ ಕುಂಕುಮ ಹಚ್ಚಿ ಅದರಲ್ಲಿ ನೀರನ್ನು ತುಂಬಿಕೊಂಡು, ಆ ಪಡುಗಕ್ಕೆ ಹೂವಿನ ಹಾರವನ್ನು ಸುತ್ತಿ ನದಿಯಿಂದ ದೇವಸ್ಥಾನಕ್ಕೆ ಬರಲಾಗುತ್ತದೆ. ದೇವಿಗೆ ಕೈಮುಗಿದು ಉರುಳಿ, ಸಜ್ಜೆ ಸೇರಿಸಿ ಅದನ್ನು ತಂದ ನೀರಲ್ಲಿ ಕುದಿಸಿ ಮುದ್ದೆ ಮಾಡುತ್ತಾರೆ. ಈ ಮುದ್ದೆಯನ್ನು ಹುಲಿಗೆಮ್ಮನಿಗೆ ಅರ್ಪಿಸಲಾಗುತ್ತದೆ. ದೈವಕ್ಕೆ ಹೆಂಡವನ್ನು ಅರ್ಪಿಸುವುದೂ ಸಹ ಈ ಆಚರಣೆಯ ಒಂದು ಭಾಗವಾಗಿದೆ. ಇದರ ಹಿನ್ನೆಲೆ ಹೀಗಿದೆ. ದೇವಿ ಹುಲಿಗೆಮ್ಮ ದುಷ್ಟರನ್ನು ಸಂಹರಿಸಿಸುವ ಸಂದರ್ಭದಲ್ಲಿ ಅತ್ಯಂತ ರೋಷಾವೇಶಕ್ಕೆ ಒಳಗಾಗಿರುತ್ತಾಳೆ. ಅವರನ್ನು ಸಂಹರಿಸಿದ ಮೇಲೆಯೂ ಅವಳ ರೋಷ ಕಡಿಮೆಯಾಗುವುದಿಲ್ಲ. ಆಗ ಆಕೆಯನ್ನು ತಣ್ಣಗಾಗಿಸಲು ಕೃಷ್ಣನು ಹೆಂಡವನ್ನು ಅನುಗ್ರಹಿಸುತ್ತಾನೆ. ಆದರೆ ಈ ಆಚರಣೆಯಲ್ಲಿ ಪಾಲ್ಗೊಳ್ಳುವ ಸ್ತ್ರೀ ಬೆಳಿಗ್ಗೆಯಿಂದ ಹಸಿದಿರುವ ಕಾರಣ ಆಕೆಗೆ ಹೆಂಡದ ಬದಲು ಪಾನಕವನ್ನು ಕುಡಿಯಲು ಕೊಡಲಾಗುತ್ತದೆ. ಆದರೆ ಹೆಂಡದ ಬದಲು ಪಾನಕ ನಂತರ ಇತ್ತೀಚಿನ ದಿನಗಳಲ್ಲಿ ಹಾಲನ್ನು ಅರ್ಪಿಸುವ ಪರಿಪಾಟ ಬೆಳದು ಬಂದಿದೆ. ಬಹುಶಃ ಇದು ವೈದಿಕ ಪುರೋಹಿತರಿಂದ ಮಾರ್ಪಾಟಾದ ವಿಧಾನವಾದಂತಿದೆ.

ಮಣ್ಣಿನ ಪಡುಗದಲ್ಲಿ ಬೇಯಿಸಲಾದ ಕಾಳುಗಳಿಂದ ತಯಾರಿಸಿದ ಗುಗ್ರಿ ಮುಟಿಗೆಯನ್ನು ಭಕ್ತರಿಗೆ ಹಂಚಲಾಗುತ್ತದೆ. ಇದನ್ನು ತೆಗೆದು ಕೊಂಡು ತಮ್ಮ ಹೊಲದಲ್ಲಿ ಬಿತ್ತುತ್ತಾರೆ. ಹಾಗೆ ಮಾಡಿದರೆ ಹೊಲದಲ್ಲಿ ಫಸಲು ಚೆನ್ನಾಗಿ ಬರುತ್ತದೆಂಬ ನಂಬಿಕೆ ಜನಪದರಲ್ಲಿದೆ. ಈ ಆಚರಣೆಯಲ್ಲಿ ಫಲವಂತಿಕೆಯ ಅಂಶಕ್ಕೆ ಕಾರಣಾದ ದೇವಿ ಅಂದರೆ ಸ್ತ್ರೀ ಪ್ರತಿನಿಧೀಕರಣದ ಸಂಕೇತವಾದ ಹುಲಿಗೆಮ್ಮಳ ಆರಾಧನೆಗೂ ಸ್ಥಿತ್ಯಂತರಗೊಂಡ ಮಾತೃಮೂಲೀಯ ಸಮಾಜಕ್ಕೂ ಇರುವ ಆಂತರಿಕ ಸಂಬಂಧವನ್ನು ಈ ಆಚರಣೆಯಿಂದ ಕಂಡುಕೊಳ್ಳಬಹುದಾಗಿದೆ.

ಭಾರತದಲ್ಲಿ ಅನಾದಿಕಾಲದಿಂದಲೂ ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ಸೃಷ್ಟಿಕಾರ್ಯಕ್ಕೆ ಸಂಕೇತವಾಗಿ ಸ್ತ್ರೀಯನ್ನೇ ಬಳಸಿಕೊಳ್ಳಲಾಗಿದೆ. ಸ್ತ್ರೀಯನ್ನು ಭೂಮಿಗೆ ಸಮಾನವಾದ ದೃಷ್ಟಿಯಲ್ಲಿ ನೋಡುತ್ತಾರೆ. ಎಲ್ಲಾ ಸೃಷ್ಟಿಗಳಿಗೂ ಸ್ತ್ರೀ ಕಾರಣವಾಗುತ್ತಾಳೆ. ಭೂಮಿ ತಾಯಿಯ ಗರ್ಭದಲ್ಲಿ ಬಿದ್ದ ಬೀಜಗಳೆಲ್ಲಾ ಮೊಳಕೆಯೊಡೆದು ಗಿಡವಾಗಿ, ಮರವಾಗಿ, ಪೈರಾಗಿ ಇಡೀ ಜಗತ್ತಿನಲ್ಲೆಲ್ಲಾ ಆವರಿಸಿ ಸೃಷ್ಟಿಕಾರ್ಯಕ್ಕೆ ಸಂಕೇತವಾಗುತ್ತವೆ. ಇಂತಹ ಹಲವಾರು ಅಂಶಗಳು ಕುತೂಹಲಕಾರಿಯಾದವುಗಳಾಗಿವೆ. ಹುಲಿಗೆಮ್ಮ ತಳಸಮುದಾಯಗಳ ಆಶಯಗಳನ್ನುಳ್ಳ ಒಬ್ಬ ಸ್ತ್ರೀ ದೇವತೆಯಾಗಿ ತನ್ನ ಆಧಿಪತ್ಯವನ್ನು ಸ್ಥಾಪಿಸಿ ಕ್ರಮೇಣ ಮೇಲ್ವರ್ಗಕ್ಕೆ ಅದನ್ನು ವಿಸ್ತರಿಸಿಕೊಳ್ಳುತ್ತಾ ಹೋಗುವ ಪರಿಯನ್ನು ಅನ್ವೇಷಿಸುವುದಕ್ಕಾಗಿ ಮಾಡಿದ ಅಧ್ಯಯನವಾಗಿದೆ.

ಆದಿಕಾಲದಿಂದಲೂ ಗ್ರಾಮೀಣ ಕ್ಷೇತ್ರದ ದೇವತೆಯಾಗಿ ಸಮಾಜದ ಕೆಳಸ್ತರದಿಂದ ಮೇಲಸ್ತರದ ಜನದವರೆಗೂ ತನ್ನ ಪ್ರಭಾವ ಹಾಗೂ ಮಹಿಮೆಯನ್ನು ಬೆಳೆಸಿಕೊಳ್ಳುತ್ತಾ, ಎಲ್ಲ ವರ್ಗದ ಜನರಿಗೂ ಆರಾಧ್ಯ ದೈವವಾಗಿ ನಿಂತ ಹುಲಿಗೆಮ್ಮ ಅವಳ ಆಚರಣೆಗಳು, ನಂಬಿಕೆಗಳು, ಪ್ರಭಾವಗಳು, ಆಧುನಿಕ ಕಾಲದ ಹೊಡೆತಕ್ಕೆ ಸಿಕ್ಕರೂ ಸಹ ಅಲುಗಾಡದಂತೆ ನಿಂತಿವೆ. ಜನರ ಉಡುಗೆ ತೊಡುಗೆ ರೀತಿನೀತಿಗಳು ಬದಲಾದರೂ ಸಹ ಅವರ ಮನಸ್ಸಿನಿಂದ ಹುಲಿಗೆಮ್ಮನ ಸ್ಥಾನವನ್ನು ಯಾರು ಕಸಿಯಲಾರರು ಎಂಬುದು ನನ್ನ ಅಧ್ಯಯನದಿಂದ ತಿಳಿದು ಬಂದ ಸಂಗತಿ.

ಸಮುದಾಯದಲ್ಲಿ ಸ್ತ್ರೀಯನ್ನು ಪ್ರತಿನಿಧಿಸುವ ಶಕ್ತಿದೇವತೆಯಾಗುವ ಮುಖಾಂತರ ಅವರಲ್ಲಿ ಸ್ಫೂರ್ತಿಯನ್ನು ತುಂಬುವ, ಅನ್ಯಾಯಕ್ಕೆ ವಿರುದ್ಧವಾಗಿ ಸಿಡಿದೇಳುವ ಅಂತಹ ಧೈರ್ಯವನ್ನು ಸ್ತ್ರೀಯರ ಮನಸ್ಸಿನಲ್ಲಿ ಬಿತ್ತುವ ಕೆಲಸ ಹುಲಿಗೆಮ್ಮನಿಂದ ಆಗಿದೆ. ಇದು ಸಾಧಾರಣ ವಿದ್ಯಾವಂತ ಜನರಲ್ಲಿ ಕಂಡುಬಂದ ಬದಲಾವಣೆಯಾದರೆ ಸಮಾಜದ ಕೆಳವರ್ಗದ ಶೋಷಿತ ಸ್ತ್ರೀಯರಿಗೆ ಆರಾಧನೆಯ ದೈವವಾಗುವುದರ ಮೂಲಕ ಹುಲಿಗೆಮ್ಮ ಮಾನಸಿಕ ತೃಪ್ತಿಯನ್ನು ಕೊಡುತ್ತಿದ್ದಾಳೆ. ನಿರಾಶಾವಾದಿಗಳಾದ ಶೋಷಣೆಗೆ ಒಳಗಾದ ಸ್ತ್ರೀಯರಲ್ಲಿ ಆಶಾವಾದವನ್ನು ಬಿತ್ತಿ ಮುಂದಿನ ಜೀವನಕ್ಕೆ ಅವರನ್ನು ಸಜ್ಜುಗೊಳಿಸುತ್ತಾಳೆ.

ಗ್ರಾಮೀಣ ದೇವತೆ ಹುಲಿಗೆಮ್ಮ ಜನಪದ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದಾಳೆ. ವೇದ ಪುರಾಣಗಳಿಂದ ಹಿಡಿದು ಅವಳು ಒಬ್ಬ ದೇವತೆಯಾಗಿ ಹುಲುಗಿಯಲ್ಲಿ ನೆಲೆಸಿದ ಮೇಲೆ ಅವಳ ಕುರಿತಾಗಿ ಹುಟ್ಟಿದ ಕಥೆಗಳು, ಐತಿಹ್ಯಗಳು, ನಂಬಿಕೆಗಳು, ಪವಾಡಗಳು, ಮಹಿಮೆಗಳು ಕಾಲಕ್ರಮೇಣ ಸಾಹಿತ್ಯದ ರೂಪ ಪಡೆದುಕೊಂಡವು. ಅವಳ ಕುರಿತಾಗಿ ಹಾಡುವ ಹಾಡುಗಳಲ್ಲಿ ಅನೇಕ ಗ್ರಾಮ್ಯಪದಗಳ ಬಳಕೆಯಿಂದ ನಾವು ಜನಪದ ಸಾಹಿತ್ಯ ಶ್ರೀಮಂತವಾಗುವುದನ್ನು ನೋಡಬಹುದು.

ಭಾರತೀಯ ಸಮಾಜದ ಸ್ಥಿತ್ಯಂತರಗಳು, ಬುಡಕಟ್ಟು ಮೂಲದ ಸಮಾಜವು ಪರಿವರ್ತನೆಯಾಗುತ್ತಾ ವೈದಿಕ ಪ್ರಭಾವಕ್ಕೆ ತುತ್ತಾಗಿ ಅನುಭವಿಸಿದ ಸಾಮುದಾಯಿಕ ತಲ್ಲಣಗಳನ್ನು ಹುಲಿಗೆಮ್ಮ ಅಭಿವ್ಯಕ್ತೀಕರಿಸುತ್ತಾಳೆ. ಹುಲಿಗೆಮ್ಮ ಮಾತೃಮೂಲೀಯ ವ್ಯವಸ್ಥೆಯಿಂದ ಪುರುಷಪ್ರಧಾನ ವ್ಯವಸ್ಥೆಗೆ ಒಳಪಡುವ ಸಂಕ್ರಮಣ ಕಾಲಘಟ್ಟದ ಸ್ತ್ರೀಯ ಪ್ರತಿಭಟನೆಯ ಸಂಕೇತವೂ ಆಗಿದ್ದಾಳೆ. ಅಂತೆಯೇ ಪುರುಷ ಪ್ರಾಧಾನ್ಯತೆಯನ್ನು ಪ್ರಶ್ನಿಸುವ, ಗಂಡು ಹೆಣ್ಣೂ ಹೌದು, ಹೆಣ್ಣು ಗಂಡೂ ಹೌದು ಎನ್ನುವಂತೆ ಹೆಣ್ಣಿಗೆ ಗಂಡಿನ ವೇಷವನ್ನು, ಗಂಡಿಗೆ ಹೆಣ್ಣಿನ ವೇಷವನ್ನೂ ತೊಡಿಸಿ ಸ್ತ್ರೀ ಮತ್ತು ಪುರುಷರಿಬ್ಬರೂ ಸರ್ವಸಮಾನರೆಂಬ ಆಶಯವನ್ನು ವ್ಯಕ್ತಪಡಿಸುವ ದೇವತೆಯಾಗಿದ್ದಾಳೆ ಹುಲಿಗೆಮ್ಮ. ಇಲ್ಲಿ ಹುಲಿಗೆಮ್ಮ ಕೇವಲ ಒಂದು ಸಂಕೇತ ಮಾತ್ರವಾಗಿ ಹಲವು ತಳಸಮುದಾಯಗಳು ವರ್ಣವ್ಯವಸ್ಥೆಯ ವಿರುದ್ಧದ ಪ್ರತಿಭಟನೆ, ಮಾತೃಮೂಲೀಯ ಕುಟುಂಬ ವ್ಯವಸ್ಥೆಯ ಕುರಿತಾದ ಒಲವುಗಳನ್ನು ಆಚರಣೆಗಳ ಮೂಲಕ ಅಭಿವ್ಯಕ್ತಿಸುವ ಕ್ರಮವು ಸಮಾಜ ಶಾಸ್ತ್ರೀಯ ಅಧ್ಯಯನಕ್ಕೆ ಪ್ರೇರಕವಾಗುವಂತಿದೆ.

ಸ್ವತಃ ಒಬ್ಬ ಶೋಷಿತ ಮಹಿಳೆಯಾಗಿ ಶೋಷಣೆಯನ್ನು ಮೆಟ್ಟಿ ನಿಂತು ಸಮಾಜದ ಪುರುಷರ ಮೇಲೆ ಸಾಧಿಸಿದ ಅಧಿಪತ್ಯ ಅಂದಿನಿಂದ ಇಂದಿನವರೆಗೂ ನಂಬಿಕೆ ಸಡಿಲಗೊಳ್ಳಲು ಬಿಡದೆ ಮೆರೆಯುತ್ತಿರುವ ಮಹಿಮೆ ಜನಮಾನಸದಲ್ಲಿ ಭದ್ರವಾಗಿ ಬೇರೂರಿರುವ ರೀತಿ ಆ ಮೂಲಕ ಭಯದಿಂದಲೂ ಅಥವಾ ಭಕ್ತಿಯಿಂದಲೂ ಸಮಾಜವನ್ನು ಸನ್ಮಾರ್ಗದಲ್ಲಿ ನಡೆಸುತ್ತಿರುವ ಒಂದು ಅಂಶದ ಜೊತೆಗೆ ಬಲವಂತವಾಗಿ ವೇಶ್ಯಾವೃತ್ತಿಗೆ ಇಳಿದಂತ ಎಲ್ಲಾ ಸ್ತ್ರೀಯರಿಗೂ ದೇವದಾಸಿ ಎನ್ನುವ ಮಾನ್ಯತೆಯನ್ನು ತಂದುಕೊಟ್ಟಿದ್ದಾಳೆ ಎನ್ನುವುದನ್ನು ತಿಳಿಯಬಹುದಾಗಿದೆ.

ಪ್ರಸ್ತುತ ಅಧ್ಯಯನದ ನೆಲೆಯಲ್ಲಿ ಹುಲಿಗೆಮ್ಮ ಒಬ್ಬ ಸ್ತ್ರೀಯಾಗಿ, ಪರಿತ್ಯಕ್ತ ಹೆಣ್ಣಾಗಿ ಅವಳು ಹೋರಾಟ ನಡೆಸಿದ್ದು ಮತ್ತು ಜನರ ಪ್ರೀತಿ ಅಭಿಮಾನಗಳಿಗೆ, ಭಕ್ತಿಗೆ ಕಾರಣವಾದದ್ದನ್ನು ಕಂಡುಕೊಳ್ಳಲಾಗಿದೆ. ಈ ಮೂಲಕ ಅವಳು ಸಮಾಜದ ತಳಸಮುದಾಯಗಳಿಗೆ ಒದಗಿಸಿದ ಪ್ರೇರಣೆಗಳು, ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ, ಸ್ತ್ರೀಯ ದೌರ್ಬಲ್ಯಗಳು ಇವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಹುಲಿಗೆಮ್ಮ ಪಂಥದ ಆಚರಣಾತ್ಮಕ ವಿವರಗಳನ್ನು ವಿಶ್ಲೇಷಿಸುವುದರ ಜೊತೆಗೆ ಅವುಗಳ ಹುಟ್ಟು ಈ ಆಚರಣೆಗಳಿಗೆ ಕಾರಣವಾದ ಹಿನ್ನೆಲೆ, ಬೆಳೆದು ಬಂದ ರೀತಿ, ಆಚರಣೆಗಳಲ್ಲಿನ ಪ್ರಾದೇಶಿಕ ಭಿನ್ನತೆಯನ್ನು, ಆಚರಣೆಗಳ ಮೂಲ ಸ್ವರೂಪದಲ್ಲಾದ ಬದಲಾವಣೆಗಳನ್ನು ಮತ್ತು ಆಧುನಿಕತೆ ಹಾಗೂ ಕಾನೂನಿನ ಅಡೆತಡೆಗಳು ಇವೆಲ್ಲವೂ ಭಕ್ತರ ಮೇಲೆ ಬೀರಿದ ಪರಿಣಾಮಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ದೈಹಿಕ ಸಮಸ್ಯೆಗಳಿಗೆ ಪರಿಹಾರವಾಗಿ ಬೇವಿನ ಉಟಗಿ, ಬೇವಿನಮರದ ಪೂಜೆ ಇಂತಹ ಆಚರಣೆಗಳು ಬೆಳೆದು ಬಂದವು. ಈ ಆಚರಣೆಗಳಿಗೆ ವೈಜ್ಞಾನಿಕ ಸತ್ಯಗಳೂ ಇವೆ ಎಂಬುದನ್ನು ಅರಿಯಲಾಗಿದೆ.

ಒಬ್ಬ ಸ್ತ್ರೀಯಾಗಿ ಹುಲಿಗೆಮ್ಮ ಹಲವು ಸಮುದಾಯಗಳು ಮತ್ತು ಭಿನ್ನ ಜೀವನ ವಿಧಾನಗಳೊಂದಿಗೆ ನಡೆಸಿದ ಅನುಸಂಧಾನವು ಅತ್ಯಂತ ರೋಚಕವಾದುದಾಗಿದೆ. ಪುರಾಣ ಕಥನಗಳು ಮತ್ತು ವೈದಿಕ ಪೌರೋಹಿತ್ಯಶಾಹಿ ಹುಲಿಗೆಮ್ಮನನ್ನು ವೈದಿಕ ಪ್ರತಿನಿಧಿಯನ್ನಾಗಿ ಚಿತ್ರಿಸಲು ಹೊರಟಾಗ್ಯೂ ಅವಳು ಕೆಳವರ್ಗದ ಆಶಯಗಳನ್ನು ಪ್ರತಿನಿಧಿಸುವ ಮತ್ತು ವೈದಿಕ ಚಿಂತನೆಗಳನ್ನು ವಿರೋಧಿಸುವ ಸಂಕೇತವಾಗಿದ್ದಾಳೆ. ಒಬ್ಬ ಪರಿತ್ಯಕ್ತ ಮಹಿಳೆಯಾಗಿ,

ಶೋಷಿತ ಸ್ತ್ರೀಯಾಗಿ, ಅನ್ಯಾಯಕ್ಕೊಳಗಾದ ಹೆಣ್ಣಾಗಿ, ತನ್ನ ಅಸ್ತಿತ್ವಕ್ಕಾಗಿ ಹೋರಾಡಿ ಅದನ್ನು ದಕ್ಕಿಸಿಕೊಂಡು ಪುರುಷ ಪ್ರಾಬಲ್ಯವನ್ನು ಮುರಿದು ಗ್ರಾಮದೇವತೆ, ಶಕ್ತಿದೇವತೆ ಎನಿಸಿಕೊಂಡ ಹುಲಿಗೆಮ್ಮ ಸ್ತ್ರೀಯ ಸಬಲತೆಯ ಸಂಕೇತವಾಗಿದ್ದಾಳೆ ಎಂಬುದನ್ನು ಕಂಡುಕೊಳ್ಳಬಹುದು. ಸಮಾಜದ ಮೇಲ್ವರ್ಗದ ಜನರಿಗೂ ಆರಾದನೆಯ ಮಾದರಿಯಾಗಿ ನಿಂತಿರುವ ಹುಲಿಗೆಮ್ಮನನ್ನು ಅಭ್ಯಸಿಸುವುದರ ಮೂಲಕ ಅವಳು ಹೇಗೆ ಸ್ತ್ರೀ ಪ್ರತಿನಿಧೀಕರಣದ ಸಂಕೇತವಾಗಿದ್ದಾಳೆ ಎಂಬುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಕೆಳಜಾತಿ ಅಥವಾ ಬುಡಕಟ್ಟು ಸಂಸ್ಕೃತಿಯ ಭಕ್ತ ಸಮೂಹ ಹುಲಿಗೆಮ್ಮನ ಭಕ್ತರು, ಜೋಗ-ಜೋಗತಿ ಇಲ್ಲಿ ಪುರುಷನಿಗಿರುವ (ಭಕ್ತನಿಗೆ) ಕಟ್ಟುಪಾಡುಗಳು ಭಕ್ತೆಗೆ ಇಲ್ಲ. ಅವಳ ಹೆಣ್ತನವನ್ನು ದೇವತೆ ಮರ್ಧಿಸುವುದಿಲ್ಲ-ವರ್ಧಿಸುತ್ತಾಳೆ. ಆದರೆ ಭಕ್ತನನ್ನು ಹೆಣ್ಣಿನ ನೆಲೆಗೆ ತರುತ್ತಾಳೆ. ಇಲ್ಲಿ ಪುರುಷತನ-ವೀರ್ಯಗಳಿಗೆ ಮಹತ್ವ ಇಲ್ಲ. ಗರ್ಭಧಾರಣೆ ಮತ್ತು ಸಂತಾನಕ್ಕೆ ಪ್ರಾಶಸ್ತ್ಯವಿದೆ. ಭಕ್ತೆಯರ ಮಕ್ಕಳಿಗೆ ಅಪ್ಪನ ಅಧಿಕೃತತೆಯ ಹಂಗು ಇಲ್ಲ. ಅದನ್ನು ದೇವಿ ಹೊರುತ್ತಾಳೆ. ಜೋಗತಿಯರಿಗೆ ವಿವಾಹ ಬಂಧನ ಮತ್ತು ಗಂಡನ ಹಿಡಿತವಿಲ್ಲ. ತಮ್ಮ ಮಕ್ಕಳಿಗೆ ಸಂಬಂಧಿಸಿದ ಸಾಮಾಜಿಕ ಹೊಣೆ ಅವರದೇ ಆಗಿರುತ್ತದೆ. ಆದರೆ ಧಾರ್ಮಿಕ ರಕ್ಷಣೆ (ಭದ್ರತೆ) ಹುಲಿಗೆಮ್ಮನದಾಗಿರುತ್ತದೆ. ಭಕ್ತೆಯರಿಗೆ ವಿಧವೆತನದ ಅಮಂಗಳ ಇಲ್ಲ, ನಿತ್ಯ ಸುಮಂಗಲಿಯರು.

ಭಕ್ತನ ಪೌರುಷವನ್ನೇ ನಾಶ ಮಾಡಿರುತ್ತಾಳೆಂದು ಸಂಕೇತಿಸುವುದರಿಂದ ಜೋಗಯ್ಯನಾದ ಮೇಲೆ ಆತನ ಸಂಭೋಗಕ್ಕೆ ಧಾರ್ಮಿಕ ನಿಷೇಧವಿರತ್ತದೆ. ನಂತರದ ಆತನ ಸಂತತಿಗೆ ಅಧಿಕೃತತೆ ಬರುವುದಿಲ್ಲ. ಆ ಮಕ್ಕಳನ್ನು ಹುಲಿಗೆಮ್ಮನ ಮಕ್ಕಳೆಂದು ಗುರುತಿಸಲಾಗುತ್ತದೆಯೆ ಹೊರತು ಜೋಗಯ್ಯನ ಮಕ್ಕಳೆಂದಲ್ಲ. ಪುರುಷ ಭಕ್ತರ ವಿಷಯದಲ್ಲಿ ಸವಾಲಾಗಿ ಹುಲಿಗೆಮ್ಮನ ನಿಯಮಗಳು ಪಾಲನೆಯಾಗಿ ಸ್ತ್ರೀಮೂಲದ ದರ್ಪ ಪ್ರತಿಪಾದನೆಯಾಗಿರುತ್ತದೆ. ಆಚರಣೆಗಳ ಆಶ್ರಯ ಅಪರಿಮಿತವಾದ ಸಂಭೋಗ ಸುಖ, ಗರ್ಭಧಾರಣೆ, ಸಂತಾನ ಪ್ರಾಪ್ತಿಯಾಗಿರುತ್ತದೆ. ಈ ಫಲವಂತಿಕೆಗೆ ಮತ್ತು ಸಂತತಿ ಶಾಶ್ವತವಾಗಿರಬೇಕೆಂಬ ಬಯಕೆ ಇರುತ್ತದೆ. ದಾಂಪತ್ಯ ಜೀವನದ ನಿಷ್ಠೆ ನಿಯಮಗಳು ಪುರುಷ ಅಧೀನತೆಯಂತಹ ಅಂಶಗಳು ಇಲ್ಲಿ ಗೌಣ. ಆಚರಣೆಗಳ ಪರಿಕರಗಳಾದ ಅರಿಶಿನ, ಕುಂಕುಮ, ಬಳೆ, ಇತ್ಯಾದಿ ಆಕರ್ಷಕ ಬಣ್ಣಗಳು ಗಮನಾರ್ಹ. ಲೈಂಗಿಕ ಕಾಯಿಲೆಗಳ ಪರಿಹಾರ ಆಚರಣೆಗಳ ಆಶಯಗಳಲ್ಲೊಂದು. ಶುಚಿತ್ವದಲ್ಲಿ ಆಚರಣೆಯನ್ನು ನೆರವೇರಿಸುವಾಗ ನಿಗದಿತ ದಿನಗಳ ಸ್ನಾನ, ನಿಗದಿತ ಆಹಾರ, ನಿದ್ರೆ ಇವೆಲ್ಲಾ ಕಡ್ಡಾಯವಾಗಿರುತ್ತವೆ. ಇದು ಪ್ರಾಕೃತಿಕ ಚಿಕಿತ್ಸೆಯಾಗಿರುತ್ತದೆ.

ಹೆಣ್ಣುಮಕ್ಕಳಿಗೆ ಮುಟ್ಟಿನ ತೊಂದರೆಗಳು, ಬಿಳಿ ಸೆರಗಿನಂತ ಕಾಯಿಲೆಗಳ ಪರಿಹಾರಕ್ಕೆಂದು 'ಬಟ್ಟೆ ಇಡುವ' ಹರಕೆ ಮಾಡುವಂತೆ, ಇಲ್ಲಿ ದೇವಿಯ ಭಕ್ತ (ಪುರುಷರು) ಅನಿಶ್ಚಿತ ವೀರ್ಯಸ್ಖಲನಕ್ಕೆ ಪರಿಹಾರವಾಗಿ ಇದೇ ಆಚರಣೆ ಮಾಡುತ್ತಾರೆ. ಈ ಸಂಬಂಧಿ ಸ್ತ್ರೀಪುರುಷರಿಬ್ಬರ ರೋಗ ರುಜಿನಗಳನ್ನು ಬಿಳುಪು ಅಥವಾ ಬಟ್ಟೆ ಹೋಗುವ ನ್ಯೂನ್ಯತೆಗಳೆಂದು ಪರಿಗಣಿಸುತ್ತಾರೆ. ಈ ಹಿನ್ನೆಲೆಯಲ್ಲಿ ವೀರ್ಯವನ್ನು ಅಂಡಾಶಯದ ದ್ರವದಂತೆಯೇ ಪರಿಭಾವಿಸುವುದರಿಂದ ಸ್ತ್ರೀ ಪ್ರಾತಿನಿಧ್ಯತೆ ಉಳಿಯುತ್ತೆದ.

◆ ಹುಲಿಗೆಮ್ಮನ ಇತರ ಜನಪದ ದೈವಗಳಂತೆ ಮಾತೃಮೂಲ ಭಕ್ತರನ್ನು ಆಶ್ರಯಿಸಿರುವವಳು. ದೇವಿ-ಭಕ್ತರ ಸಂಬಂಧ ಅನ್ಯೋನ್ಯ ತಾಯಿ-ಮಕ್ಕಳ ಸಂಬಂಧದಂತಿದೆ.

◆ ಅವಿವಾಹಿತ ತಾಯಿ ಸಾಮಾಜಿಕವಾಗಿ ತನ್ನದೇ ಆದ ಸಾಂಸ್ಕೃತಿಕ ಮೌಲ್ಯಗಳನ್ನು ರೂಪಿಸಿಕೊಳ್ಳುವ ದಿಟ್ಟತನ, ದೇವತೆಯ ಹಿನ್ನೆಲೆ ಭಕ್ತವಲಯದ ವರ್ತಮಾನ ಮತ್ತು ಭವಿಷ್ಯತ್‌ಗಳಲ್ಲಿರುತ್ತದೆ.

◆ ಬಂಧುಬಳಗವನ್ನು ಬಯಸುವುದು ಮಾತೃಮೂಲ ಮನಸ್ಸು, ದಾಯಾದಿತನ, ಪಿತೃಪರಂಪರೆ ಇದು ಈ ದೇವತೆಯ ಪರಿಧಿಗೆ ಬರುವುದಿಲ್ಲ.

◆ ಆಚರಣೆಗಳು, ಆಹಾರ ಪದ್ಧತಿ, ಉಡುಗೆ-ತೊಡುಗೆ, ವಾದ್ಯ ಎಲ್ಲವೂ ದೈಹಿಕ ಸುಖ, ಮಾನಸಿಕ ನೆಮ್ಮದಿ, ಸಂತಾನ ಅಭಿವೃದ್ಧಿಯ ಪೂರಕ ಅಂಶಗಳು. ಇಲ್ಲಿ ಮೈಲಿಗೆಯ ಪ್ರಶ್ನೆಯೇ ಇಲ್ಲ.

◆ ಈರುಳ್ಳಿ ಬೆಳ್ಳುಳ್ಳಿ, ಹುಣಿಸೆಯ ಹುಳಿ, ಮಾಂಸಾಹಾರಗಳಿಗೆ ಆದ್ಯತೆ, ಇವು ಹೆಣ್ಣಿನ ಫಲವಂತಿಕೆ (ಸತ್ವ) ವೃದ್ಧಿಸುವಂತಹವು.

◆ ಚೌಡಿಕೆ ವಾದ್ಯ ಸ್ತ್ರೀಯ ಜನನಾಂಗದ ಆಕಾರದಲ್ಲಿದ್ದು ಈ ವಾದ್ಯವನ್ನು ಮಿಡಿದು ನುಡಿಸಿ ಹಾಡಿ ನಲಿಯುವುದು-ಭಿಕ್ಷೆಬೇಡುವುದು ಇವು ಗಮನಿಸಬೇಕಾದ ಅಂಶಗಳು.

◆ ಆಚರಣೆಯಲ್ಲಿ ಬಲಿ ನೀಡಿದ ಪ್ರಾಣಿಯ ಮಾಂಸಕ್ಕಿಂತ ರಕ್ತವನ್ನು ದೇವತೆಗೆ ಅರ್ಪಿಸುವುದು ಮುಖ್ಯವಾಗಿರುತ್ತದೆ. ಏಕೆಂದರೆ ಹೆಣ್ಣು ಮುಟ್ಟಿನ ರೂಪದ ರಕ್ತದ ಸ್ಥಿತಿಗಳಿಗೆ ಅನುಗುಣವಾಗಿ ಫಲವಂತಿಕೆಯನ್ನು ಪ್ರತಿನಿಧಿಸುತ್ತಾಳೆ. ಮುಟ್ಟು ಆಗುವುದು, ಮುಟ್ಟು ನಿಲ್ಲುವುದು ಇದ್ಯಾವುದೂ ವೈಯಕ್ತಿಕ ನೆಲೆಯಲ್ಲಿ ಮೈಲಿಗೆಯಲ್ಲ. ಅದೇ ಪ್ರಧಾನ ಹಾಗೂ ಹೆಣ್ತನದ ಭಾಗ. ಈ ಆರಾಧನೆಗೆ ಬಲಿಯಾದ ಪ್ರಾಣಿಯ ರಕ್ತವನ್ನು ದೇವತೆಗೆ ಅರ್ಪಿಸುವುದಾಗಿರುತ್ತದೆ.

◆ ಕಳಸ/ಕುಂಭ - ಗರ್ಭಧಾರಣೆಯ ಆಶಯಗಳು.

◆ ಸಂತಾನಕ್ಕಾಗಿ: ರಾತ್ರಿ ನಿದ್ದೆ ಮಾಡುವುದು, ಸಂಗಾತಿ ಬಯಕೆಯ ಆಶಯ.

## ಗ್ರಂಥ ಋಣ


೧. ಅನಂತ ಮೂರ್ತಿ ಯು. ಆರ್. ಬೆತ್ತಲೆ ಪೂಜೆ ಯಾಕೆ ಕೂಡದು, ಹೆಗ್ಗೋಡು, ಸಾಗರ, ೧೯೯೬

೨. ಅಗ್ರಹಾರ ಕೃಷ್ಣಮೂರ್ತಿ, **ಸಂಸ್ಕೃತಿ ಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೩. ಅಂಬಳಿಕೆ ಹಿರಿಯಣ್ಣ, **ಜಾನಪದ ಪರಿಶೋಧನೆ**, ಪ್ರಜ್ವಲ ಪ್ರಕಾಶನ, ಮೈಸೂರು, ೧೯೮೮

೪. ಕಲವೀರ ಮನ್ವಾಚಾರ್, **ಮಾತೃದೇವತಾರಾಧನೆ**, ಕ.ವಿ.ವಿ. ಹಂ. ಅಪ್ರಕಟಿತ ಪ್ರಬಂಧ, ೨೦೦೨

೫. ಕಲಬುರ್ಗಿ ಎಂ. ಎಂ., ಜಾನಪದ ಸಾಹಿತ್ಯ ದರ್ಶನ - ೧೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೭

೬. ಕೋಟಗಾನಹಳ್ಳಿ ರಾಮಯ್ಯ, **ಸಿಂಧ್ ಮಾದಿಗರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೭

೭. ಕಾಳೇಗೌಡ ನಾಗವಾರ, **ಗಿರಿಜನ ಸಂಸ್ಕೃತಿ**, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೨೦೦೦

೮. ಕ್ಯಾತನಹಳ್ಳಿ ರಾಮಣ್ಣ, **ಕ್ಷೇತ್ರಕಾರ್ಯದ ಹಾದಿಯಲ್ಲಿ**, ಅಚ್ಚಿ ಹೊತ್ತಿಗೆ ಪ್ರಕಾಶನ, ಕ್ಯಾತನಹಳ್ಳಿ, ೧೯೯೭

೯. ಗಂಗಾಧರ ದೈವಜ್ಞ, **ಬುಡಕಟ್ಟು ಸಮಾಜ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೦. ಗಂಗಾಧರ ದೈವಜ್ಞ, **ಶಿರಸಂಗಿ ಕಾಳಮ್ಮ**, ಶ್ವೇತ ಭಾಗೀರಥಿ, ಪ್ರಕಾಶನ, ಹೊಸಪೇಟೆ, ೨೦೦೨

೧೧. ಚಂದ್ರಶೇಖರ ಕಂಬಾರ, **ದೇಸೀ ಚಿಂತನೆ**, ಅಂಕಿತ ಪುಸ್ತಕ ಪ್ರಕಾಶಕರು, ಬೆಂಗಳೂರು, ೨೦೦೨

೧೨. ಚೆನ್ನಣ್ಣವಾಲೀಕರ, **ಕರ್ನಾಟಕ ದೇವದಾಸಿಯರ ಸಮಾಜೋಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ**, ಬಂಡಾಯ ಸಾಹಿತ್ಯ ಪ್ರಕಾಶನ, ಗುಲಬರ್ಗಾ, ೨೦೦೧

೧೩. ಎನ್. ಚಂದ್ರಪ್ಪ, ಎಲ್ಲಮ್ಮ, ಮುಂಡ ಪ್ರಕಾಶನ, ಬೆಂಗಳೂರು, ೨೦೦೩

೧೪. ಬಿ. ಆರ್. ದೇಸಾಯಿ, ಶ್ರೀ ಹುಲಿಗಿ ರೇಣುಕಾಂಬಾ ಸ್ಥಳ ಚರಿತ್ರೆ, ದೇಸಾಯಿ ಪ್ರಕಾಶನ, ೧೯೭೩

೧೫. ದಾಸೇಗೌಡ, **ನಮ್ಮ ಜಾನಪದ ನಂಬಿಕೆಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩

೧೬. ಪುರುಷೋತ್ತಮ ಬಿಳಿಮಲೆ, **ಹುಲಿಗೆಮ್ಮ**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೯

೧೭. ಪೆರ್ಲ ಮಾ. ಭ., **ಭಾರತೀಯ ವಿವಾಹ ಸಂಸ್ಕಾರ**, ಕನ್ನಡ ಪ್ರಪಂಚ ಪ್ರಕಾಶಕರು, ಪುತ್ತೂರು, ೨೦೦೦

೧೮. ಬೋರಲಿಂಗಯ್ಯ ಹಿ. ಚಿ., **ಗಿರಿಜನ ನಾಡಿಗೆ ಪಯಣ**, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧

೧೯. ಬಸವರಾಜ ನೆಲ್ಲಿಸರ, **ಜಾನಪದ ಮತ್ತು ಪೂರಕ ಕ್ಷೇತ್ರಗಳು**, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ೨೦೦೨

೨೦. ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ**, ಕ.ಸಾ.ಅ., ಬೆಂಗಳೂರು, ೧೯೯೩

೨೧. ಮಂಜುನಾಥ ಬೇವಿನಕಟ್ಟಿ, **ಜನಪದ ನಂಬಿಕೆಗಳು**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೬

೨೨. ಮಂಜುನಾಥ ಬೇವಿನಕಟ್ಟಿ, **ಪರಿಷೆ ಮಾನ್ಯೇವು** ಅಪ್ರಕಟಿತ ಪ್ರಬಂಧ, ಕ.ವಿ.ವಿ.ಹಂ., ೨೦೦೪

೨೩. ಮಂಜುನಾಥ ಬೇವಿನಕಟ್ಟಿ, **ಕನ್ನಡ ಜನಪದ ನಂಬಿಕೆಗಳ ಅಧ್ಯಯನ** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೯೩

೨೪. ಮಂಜುನಾಥ ಬೇವಿನಕಟ್ಟಿ, **ಮಲಿಯಮ್ಮ ನಿನ್ನಾಲ್ಕುಧೋ.. ಉಧೋ...**, ಅಂಬಿಕಾ ಪ್ರಕಾಶನ, ಹೊಸಪೇಟೆ, ೧೯೯೪

೨೫. ಮುಳಗುಂದ ಚಾ. ವಿ., **ಮಾತೋಶ್ರೀ**, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ, ೧೯೮೬

೨೬. ಮಹದೇವಯ್ಯ ಪಿ., **ದಲಿತರು ಮತ್ತು ಪರ್ಯಾಯ ರಾಜಕಾರಣ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೨೭. ಮಂಜುನಾಥ ಬೇವಿನಕಟ್ಟಿ, **ಜನಪದ ನಂಬಿಕೆಗಳು**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೬

೨೮. ಹಿ.ಶಿ. ರಾಮಚಂದ್ರೇಗೌಡ, **ಜಾನಪದ ಸಾಂಸ್ಕೃತಿಕ ಆಯಾಮಗಳು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

೨೯. ರಮೇಶ್ ಸ. ಚಿ., **ಅಲೆಮಾರಿಗಳ ಸ್ಥಿತಿಗತಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೩೦. ರಂಗಸ್ವಾಮಿ ಡಿ. ಟಿ., **ಭಾರತದ ಹಬ್ಬಗಳು**, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೩

೩೧. ಲಕ್ಷ್ಮೀಪತಿ ಕೋಲಾರ, **ಮಾಷ್ಟಿಕರ ಸಂಸ್ಕೃತಿ**, ಕ.ಸಾ.ಅ., ಬೆಂಗಳೂರು, ೧೯೯೩

೩೨. ಲಕ್ಷ್ಮಣ್ ತೆಲಗಾವಿ, **ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೭

೩೩. ಲಿಂಗಯ್ಯ, **ಗ್ರಾಮದೇವತೆಗಳು**, ಐ. ಬಿ. ಹೆಚ್. ಪ್ರಕಾಶನ, ಬೆಂಗಳೂರು, ೧೯೮೪

೩೪. ಹಿರೇಮಠ ಎಸ್. ಎಸ್., **ಕರ್ನಾಟಕದಲ್ಲಿ ದಲಿತ ಸಂಸ್ಕೃತಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೧

೩೫. ಹರಿಶ್ಚಂದ್ರ ದಿಗ್ಸಂಗೀಕರ, **ದಲಿತ ತತ್ವಪದಕಾರ ಜಂಬಗಿ ಶರಣ**, ಅಭಯ ಪ್ರಕಾಶನ, ಗುಲ್ಬರ್ಗಾ, ೨೦೦೨

೩೬. ಶಿವಪ್ಪ ಕೆ., **ಬಳ್ಳಾರಿ ಜಿಲ್ಲೆಯ ಹೊಲೆಯ ಮಾದಿಗರ ಸಂಸ್ಕೃತಿ**, ಸಾರ ಎಂಟರ್‌ಪ್ರೈಜಸ್, ಮೈಸೂರು, ೨೦೦೪

೩೭. ರಮೇಶ್ ಸ.ಚಿ., **ಕರ್ನಾಟಕ ಜಾನಪದ ಸಂಸ್ಕೃತಿ**, (ಸಂ.), ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೪

೩೮ ಜಿ. ವೆಂಕಟೇಶ್, **ಗುಡ್ಡದ ಮಲ್ಲಯ್ಯ ಆಚರಣೆ ಒಂದು ಜಾನಪದೀಯ ಅಧ್ಯಯನ**, ಅಪ್ರಕಟಿತ ಪ್ರಬಂಧ, ಕ.ವಿ.ವಿ. ಹಂಪಿ., ೨೦೦೦

೩೯ ಶ್ರೀಮತಿ ಹೆಚ್. ಎಸ್., **ಸ್ತ್ರೀವಾದಿ ಚಿಂತನೆ ಕೆಲವು ಪ್ರಶ್ನೆಗಳು**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೯

# ವಕ್ತೃವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಉದ್ಯೋಗ | ಸ್ಥಳ |
|---|---|---|---|---|---|
| ೧. | ಸುಮಲತ | ೩೨ | ಬೇಡ | ಅಕೌಂಟೆಂಟ್ | ಹೊಸಪೇಟೆ |
| ೨. | ರೇಣುಕಮ್ಮ | ೪೩ | ಬೇಡ | ವ್ಯವಸಾಯ | ಹೊಸಪೇಟೆ |
| ೩. | ಹವಾಲ್ದಾರ್ ರಾಮಣ್ಣ | ೬೦ | ಬ್ರಾಹ್ಮಣ | ಇಲ್ಲ | ಹೊಸಪೇಟೆ |
| ೪. | ರಾಧಮ್ಮ | ೫೫ | ಬ್ರಾಹ್ಮಣ | ಇಲ್ಲ | ಹೊಸಪೇಟೆ |
| ೫. | ಶಂಕ್ರಮ್ಮ | ೬೮ | ಬ್ರಾಹ್ಮಣ | ಟೀಚರ್ | ಹೊಸಪೇಟೆ |
| ೬. | ದುರ್ಗಮ್ಮ | ೪೫ | ಕುರುಬರು | ಪೂಜಾರಿಣಿ | ಹೊಸಪೇಟೆ |
| ೭. | ಯರೆಮ್ಮ | ೪೬ | ಕುರುಬರು | ಇಲ್ಲ | ಹೊಸಪೇಟೆ |
| ೮. | ಯಂಕಮ್ಮ | ೪೬ | ನಾಯಕ | ಪೂಜಾರಿ | ಹೊಸಪೇಟೆ |
| ೯. | ಮೀನಾಕ್ಷಿ | ೪೭ | ಬ್ರಾಹ್ಮಣ | ಇಲ್ಲ | ಹುಲಿಗಿ |
| ೧೦. | ದೇಸಾಯಿ ದತ್ತಣ್ಣ | ೭೦ | ಬ್ರಾಹ್ಮಣ | ಇಲ್ಲ | ಹುಲಿಗಿ |
| ೧೧. | ತಾರಾಮತಿ | ೨೬ | ಕಟುಗರು | ಅಧ್ಯಾಪಕಿ | ಹೊಸಪೇಟೆ |
| ೧೨. | ರಮ | ೩೬ | ಬ್ರಾಹ್ಮಣರು | ಟೀಚರ್ | ಹೊಸಪೇಟೆ |
| ೧೩. | ಆರ್ವನಗೌಡ | ೭೩ | ಕುರುಬರು | ವ್ಯವಸಾಯ | ಹೊಸಪೇಟೆ |
| ೧೪. | ಪಾರ್ವತಿ | ೪೩ | ಲಿಂಗಾಯತರು | ಇಲ್ಲ | ಕಂಪ್ಲಿ |
| ೧೫. | ಮಮತಾ | ೩೨ | ಬ್ರಾಹ್ಮಣರು | ಇಲ್ಲ | ಹೊಸಪೇಟೆ |
| ೧೬. | ಪುಷ್ಪವತಿ | ೪೭ | ಬ್ರಾಹ್ಮಣ | ಇಲ್ಲ | ಹೊಸಪೇಟೆ |
| ೧೭. | ಮಂಗಳಮ್ಮ | ೬೪ | ಕುರುಬರು | ಇಲ್ಲ | ಹೊಸಪೇಟೆ |
| ೧೮. | ರಂಗೋಜಿರಾವ್ | ೭೬ | ಬ್ರಾಹ್ಮಣ | ಇಲ್ಲ | ಹೊಸಪೇಟೆ |

| | | | | | |
|---|---|---|---|---|---|
| ೧೯. | ಮಂಜುಳ | ೨೭ | ನಾಯಕ | ಇಲ್ಲ | ಹೊಸಪೇಟೆ |
| ೨೦. | ಲಕ್ಷ್ಮಿ | ೨೪ | ನಾಯಕ | ಇಲ್ಲ | ಹೊಸಪೇಟೆ |
| ೨೧. | ಅಂಬಮ್ಮ | ೫೦ | ನಾಯಕ | ಇಲ್ಲ | ಹೊಸಪೇಟೆ |
| ೨೨. | ದಾಕ್ಷಾಯಿಣಿ | ೬೦ | ನಾಯಕ | ಇಲ್ಲ | ಹೊಸಪೇಟೆ |
| ೨೩. | ಯರಿಸ್ವಾಮಿ | ೩೫ | ನಾಯಕ | ವ್ಯವಸಾಯ | ಹೊಸಪೇಟೆ |
| ೨೪. | ಗೋದಮ್ಮ | ೫೦ | ಬ್ರಾಹ್ಮಣರು | ಇಲ್ಲ | ಹೊಸಪೇಟೆ |
| ೨೫. | ಸಂಧ್ಯ | ೩೬ | ಬ್ರಾಹ್ಮಣರು | ಇಲ್ಲ | ಹೊಸಪೇಟೆ |
| ೨೬. | ಲಕ್ಷ್ಮಮ್ಮ | ೩೮ | ನಾಯಕ | ಇಲ್ಲ | ಹೊಸಪೇಟೆ |
| ೨೭. | ಪರಸಪ್ಪ | ೪೮ | ನಾಯಕ | ವ್ಯವಸಾಯ | ಹೊಸಪೇಟೆ |
| ೨೮. | ರಾಮಣ್ಣ | ೫೨ | ಬ್ರಾಹ್ಮಣ | ಕಾರ್ಮಿಕರು | ಹೊಸಪೇಟೆ |
| ೨೯. | ಬಳ್ಳಾರಿ ದುರ್ಗಮ್ಮ | ೩೫ | ಮಾದಿಗ | ಕೂಲಿ | ಹೊಸಪೇಟೆ |
| ೩೦. | ಗಾಳೆಮ್ಮ | ೩೮ | ಮಾದಿಗ | ಕೂಲಿ | ಹೊಸಪೇಟೆ |
| ೩೧. | ಇದ್ದಿ ಹುಲುಗುಮ್ಮ | ೪೫ | ನಾಯಕ | ಕೂಲಿ | ಹೊಸಪೇಟೆ |
| ೩೨. | ಜಂಭಮ್ಮ | ೫೫ | ನಾಯಕ | ಕೂಲಿ | ಹೊಸಪೇಟೆ |
| ೩೩. | ಭಾಗ್ಯಮ್ಮ | ೩೫ | ನಾಯಕ | ಇಲ್ಲ | ಹೊಸಪೇಟೆ |
| ೩೪. | ತುಂಬಮ್ಮ | ೫೦ | ನಾಯಕ | ಕೂಲಿ | ಹೊಸಪೇಟೆ |
| ೩೫. | ಪದ್ಮ | ೫೦ | ಕಟುಗ | ಕೂಲಿ | ಚಿತ್ರದುರ್ಗ |
| ೩೬. | ಜಾನಕಿ | ೪೫ | ಕಟುಗ | ಇಲ್ಲ | ಹೊಸಪೇಟೆ |
| ೩೭. | ಲಕ್ಷ್ಮಣ್ | ೩೮ | ಕಟುಗ | ಇಲ್ಲ | ಹೊಸಪೇಟೆ |
| ೩೮. | ಕೆಂಚಮ್ಮ | ೩೮ | ಮಾದಿಗ | ಕೂಲಿ | ಹೊಸಪೇಟೆ |
| ೩೯. | ರಾಧಮ್ಮ | ೪೬ | ಕುರುಬರು | ಇಲ್ಲ | ಹೊಸಪೇಟೆ |
| ೪೦. | ಭಾನುಮತಿ | ೪೬ | ಕುರುಬರು | ಇಲ್ಲ | ಹೊಸಪೇಟೆ |



ಮೈಲಾರಲಿಂಗನ ಪಾದ



ಉಪ್ಪಿನ ಹರಕೆ



ದೇವಿಯ ಪಲ್ಲಕ್ಕಿ



ಊರರೆ ತೇರು



ಬಲಿಯ ಮೆರವಣಿಗೆ



ಜೋಗ ಸಂಧ ಹಾಕುತ್ತಿರುವುದು



ನವದಂಪತಿಗಳು ಗಂಗೆ ತರುವುದು



ಪಡ್ಡಿಗಿ ತುಂಬಿಸುತ್ತಿರುವುದು



ಮಹಿಳೆಯರು ಆಟಿಗೆ ಸಿದ್ಧತೆಯಲ್ಲಿ ತೊಡಗಿರುವುದು



ಮಹಿಳೆಯರ ದೀಡ್ ನಮಸ್ಕಾರ



ಮಹಿಳೆಯರು ದೀಡ ನಮಸ್ಕಾರ



ಕುರುಬರ ಮನೆಯಲ್ಲಿ ಹುಲಿಗೆಮ್ಮನ ಪೂಜೆ

